ವಿಶ್ವವೇದಾಂತಿ

# ಡಾ|| ಸರ್ವಪಳ್ಳಿ ರಾಧಾಕೃಷ್ಣನ್

136

ಲೇಖಕರು :
ಹೆಚ್. ಎನ್. ನಂಜಯ್ಯ
ಬೇಸಿಕ್ ಟೀಚರ್ಸ್ ಟ್ರೈನಿಂಗ್ ಇನ್ಸ್ಟಿಟ್ಯೂಟ್, ಮದ್ದೂರು.

ಪ್ರಕಾಶಕರು :
ಭಾವನಾ ಪ್ರಕಾಶನ
ಬನ್ನೂರು

# ವಿಶ್ವವೇದಾಂತಿ

# ಡಾ|| ಸರ್ವಪಳ್ಳಿ ರಾಧಾಕೃಷ್ಣನ್



ಲೇಖಕರು ಮತ್ತು ಪ್ರಕಾಶಕರು:
ಹೆಚ್. ಎನ್. ನಂಜಯ್ಯ
ಕನ್ನಡ ಮತ್ತು ಹಿಂದಿ ಪಂಡಿತ್
ಬೇಸಿಕ್ ಟೀಚರ್ಸ್ ಟ್ರೈನಿಂಗ್ ಇನ್ಸ್ಟಿಟ್ಯೂಟ್, ಮದ್ದೂರು.

## ಮೊದಲ ಮಾತು

ಒಂದೆರಡು ವರ್ಷಗಳ ಹಿಂದೆ ಮಿಣುಕು ಹುಳುವಿನ ಬೆಳಕಿನಂತೆ ನನ್ನ ನಾಲ್ಕಾರು ಲೇಖನಗಳೂ ಹತ್ತಾರು ಕವನಗಳೂ [illegible] ತಾಯಿನಾಡು ಹಾಗೂ, ಜಯಕರ್ಣಾಟಕದಲ್ಲಿ ಮಿನುಗಿದವು. ಎರಡು ವರ್ಷಗಳ ಹಿಂದೆ ಧರ್ಮದೇವತೆಯ ಕೊರಗು ಮತ್ತಿತರ ಪದ್ಯಗಳು ಎಂಬ ನನ್ನ ಒಂದು ಪುಟ್ಟ ಕವನ ಸಂಗ್ರಹವು ಬೆಳಕು ಕಂಡಿತಾದರೂ ಹೊಗಳಿಕೊಳ್ಳುವಂತಹು ದಲ್ಲ. ಈ ಕಾರಣಗಳಿಂದ ನಾನು ಸಾಹಿತ್ಯರಂಗದಲ್ಲಿ ಹೊಸಬನಲ್ಲದಿದ್ದರೂ, ಹೊಸಬನೇ ಆಗಿದ್ದೇನೆ. ಆದರೂ ನಾನು ಈಗ ಕೈಹಾಕಿರುವುದು ಮಹತ್ತರವಾದ ಕಾರ್ಯ.

ವಿಶ್ವದ ಗಣ್ಯವ್ಯಕ್ತಿಗಳಿಂದ ಲೋಕ ಶಿಕ್ಷಕರೆಂದು ಕೀರ್ತಿವೆತ್ತ ನಮ್ಮ ನೆಚ್ಚಿನ ರಾಷ್ಟ್ರಪತಿ ಡಾ|| ಎಸ್. ರಾಧಾಕೃಷ್ಣನ್ನರ ವ್ಯಕ್ತಿತ್ವವು ನನ್ನ ಗಮನವನ್ನು ಸೆಳೆದುದು ಆಶ್ಚರ್ಯವಲ್ಲ. ಅಪಾರವಾದ ಕನ್ನಡ ಸಾಹಿತ್ಯ ದಲ್ಲಿ ಮೈಸೂರಿನ ಕೀರ್ತಿಗೂ ಕೊಂಡಿಯಂತಿರುವ ಇವರ ಜೀವನಚರಿತ್ರೆಯ ಕೊರತೆಯು ಕಳಂಕವೆನಿಸಿತು. ಅದೇ ಆಸಕ್ತಿಯ ಆವೇಶದಲ್ಲಿ ಸರ್ವಪಲ್ಲಿ ಯವರ ಆಪ್ತ ಕಾರ್ಯದರ್ಶಿಗೆ ನನ್ನ ಆಶೆಯನ್ನು ತಿಳಿಸಿ ವಿವರವನ್ನು ಕೋರಿದೆನು. ಆ ನನ್ನ ಪತ್ರವು ರಾಷ್ಟ್ರಪತಿಯವರ ಗಮನಕ್ಕೂ ಹೋಗಿ, ಪ್ರತ್ಯುತ್ತರವೂ ಬಂದಿತು. "ನನ್ನ ಜೀವನ ಚರಿತ್ರೆಯನ್ನು ಬರೆಯುವುದರಲ್ಲಿ ನಿಮಗೆ ಯಾವ ಪ್ರಯೋಜನವೂ ಕಾಣದು" ಎಂದು ಇದನ್ನು ನೋಡಿ ನನ್ನ ಉತ್ಸಾಹವು ಕುಗ್ಗಲಿಲ್ಲ. ಹೊಗಳಿಕೆಯನ್ನೇ ಬಯಸದ ಮಹಾತ್ಮರ ಗುಣಗಾನ ಮಾಡುವುದರಿಂದ ನನ್ನ ಅಜ್ಞಾನವಾದರೂ ತೊಲಗೀತು! ಎಂಬ ಛಲದಿಂದ ಈ ಕಾರ್ಯಕ್ಕೆ ಕೈಹಾಕಿದ್ದೇನೆ. ಆದರೂ ನನ್ನ ಪ್ರಯ ತ್ನವು ಹೆಳವನು ಹಿಮಾಲಯವನ್ನು ಹತ್ತಲು ಪ್ರಯತ್ನಿಸಿದಂತೆ!

ಡಾ|| ರಾಧಾಕೃಷ್ಣನ್ನರ ಜೀವನ ಪರದೆಯ ಮೇಲೆ ಅವರ ಆದರ್ಶ ಭಾವನೆಗಳನ್ನೂ ತತ್ವಗಳನ್ನೂ ಕನ್ನಡ ಯುವಕರಿಗಾಗಿ ಚಿತ್ರಿಸಲು ಪ್ರಯತ್ನಿ ಸಿದ್ದೇನೆ. ಇದೂ ಕೂಡ ಪುಟ್ಟ ಮಗುವೊಂದು ತೊದಲು ನುಡಿಯಿಂದ ಅಜ್ಜನ ಬಾಳ ಪರಿಚಯ ಕೊಟ್ಟಂತಾಗಿದೆ. ಸಣ್ಣ ದೀಪವೊಂದು ಸೂರ್ಯ

ನನ್ನ ತೋರಲು ಪ್ರಯತ್ನಿಸಿದಂತೆ, ಅದ್ವಿತೀಯ ಜ್ಞಾನವುಳ್ಳ ಸರ್ವಪಳ್ಳಿಯವರ ಪರಿಚಯ ನೀಡುತ್ತಿದ್ದೇನೆ. ಆದುದರಿಂದ ಇಲ್ಲಿನ ಲೋಪದೋಷಗಳು ಮಾನ್ಯವಾದುವುಗಳೆಂದೇ ನನ್ನ ಭಾವನೆ. ಮಾನ್ಯ ಓದುಗರು ಸೂಚಿಸುವ ತಿದ್ದುಪಡಿಗಳನ್ನು ಪುನರ್ಮುದ್ರಣಕ್ಕೆ ಅವಕಾಶ ದೊರೆತರೆ ಮಾರ್ಪಡಿಸಿಕೊಳ್ಳುತ್ತೇನೆ.

ನನ್ನ ಈ ಕಾರ್ಯದಲ್ಲಿ ಉತ್ಸಾಹವಿತ್ತ ನನ್ನ ಸಹೋದ್ಯೋಗಿಗಳಾದ ಶ್ರೀ S. ನರಸಿಂಹಾಚಾರ್, M.A.,B.T. ರವರಿಗೂ, ಕೆಲವು ಸೂಚನೆಗಳನ್ನಿತ್ತು ಎಂದಿನಂತೆ ನನಗೆ ಪ್ರೋತ್ಸಾಹವೀಯುತ್ತಿರುವ ನನ್ನ ಮಾನ್ಯ ಗುರುಗಳಾದ ಪಂಡಿತ ಟಿ. ವೀರಪ್ಪನವರಿಗೂ ನಾನು ಧನ್ಯವಾದಗಳನ್ನು ಅರ್ಪಿಸುತ್ತೇನೆ.

ಒಂದು ಸಂಕುಚಿತ ಆಶೆಯಿಂದ ಆತುರ ಆತುರವಾಗಿ ಬರೆದು ಹಸ್ತಪ್ರತಿಗಳನ್ನು ನಾನು ಕೊಡುತ್ತಿದ್ದುದೂ, ಮತ್ತೆ ಮತ್ತೆ ಮಾರ್ಪಾಡು ಮಾಡುತ್ತಿದ್ದುದೂ ಯಾವ ಮುದ್ರಕರಾದರೂ ಬೇಸರಪಡುವಂಥದೇ! ಇದರಿಂದ ಕಾರ್ಯಭಾರವು ದ್ವಿಗುಣವಾದರೂ ನನ್ನ ಭಾಗ್ಯವಿಶೇಷವೆಂಬಂತೆ ಬೇಸರಪಡದೆ, ವಿಶೇಷ ಆಸಕ್ತಿಯಿಂದ, ಈ ವೃತ್ತಿಯಲ್ಲಿ ಅನನುಭವಿಯಾದ ನನಗೆ ಮಾರ್ಗದರ್ಶನ ಮಾಡುತ್ತಾ ಸ್ವತಃ ಶ್ರದ್ಧೆಯಿಂದ ಮುದ್ರಣ ಸ್ಖಾಲಿತ್ಯಗಳನ್ನು ಸರಿಪಡಿಸಿ ಅಂದವಾಗಿ ಮುದ್ರಿಸಿಕೊಟ್ಟ, ಮೈಸೂರು ಪವರ್ ಪ್ರೆಸ್ಸಿನ ಮಾಲೀಕರವರಿಗೂ ನಾನು ಅತ್ಯಂತ ಚಿರಋಣಿಯಾಗಿದ್ದೇನೆ.

ಬನ್ನೂರು
10—9—1964

ಲೇಖಕ,
ಪಂಡಿತ ಹೆಚ್. ಎನ್. ನಂಜಯ್ಯ,
(ಹೊನಬನ)

ವಿಶ್ವವೇದಾಂತಿ

# ಡಾ|| ಸರ್ವಪಳ್ಳಿ ರಾಧಾಕೃಷ್ಣನ್

---

ಭಾರತಿಯ ಪುನರ್ಚೈತನ್ಯದ ಯುಗಾರಂಭವು ಹತ್ತೊಂಭತ್ತನೆಯ ಶತಮಾನವು. ಅನೇಕ ಶತಮಾನಗಳ ಪರತಂತ್ರದ ಸಂಕೋಲೆಯನ್ನು ಕಳಚಿಕೊಳ್ಳಲು ನಿರ್ಧರಿಸಿದ ಶತಮಾನವಿದು. 1857ರ ಸಿಪಾಯಿ ದಂಗೆಯು ಹೊರನೋಟಕ್ಕೇನೋ ಮೊಟಕಾಯಿತು. ಆದರೂ ಅದರಿಂದ ಸ್ವತಂತ್ರ ಭಾವನೆಯು ಭಾರತೀಯರೆಲ್ಲರ ಹೃದಯದಲ್ಲಿ ಬೀಜಾಂಕುರ ವಾಯಿತು. ಭಾವೀ ಸ್ವಾತಂತ್ರ್ಯದ ಪೂರ್ವಸಿದ್ಧತೆಗೆಂಬಂತೆ ಅನೇಕ ಕ್ರಾಂತಿಕಾರರು, ಸುಧಾರಕರು ಮತ್ತು ಮೇಧಾವಿಗಳು ದೇಶದಲ್ಲಿ ಹುಟ್ಟಿದರು.

ಭಾರತೀಯರ ಹಕ್ಕುಭಾದ್ಯತೆಗಳಿಗಾಗಿ ಬ್ರಿಟಿಷ್ ಸರ್ಕಾರದೊಡನೆ ಕೆಚ್ಚೆದೆಯಿಂದ ಹೋರಾಡಿದ ದಾದಾಬಾಯಿ ನವರೋಜಿ, ಮಹದೇವ ಗೋವಿಂದ ರಾನಡೆ, ಬಾಲಗಂಗಾಧರ ತಿಲಕ್ ಮತ್ತು ಗೋಪಾಲಕೃಷ್ಣ ಗೋಖಲೆ, ಈ ಶತಮಾನದವರು. ಇವರೆಲ್ಲರ ಗುರಿಯನ್ನು ಸಾಧಿಸಿದ ಅಹಿಂಸಾ ಸಮರ ವೀರರಾದ ಗಾಂಧೀಜಿ, ನೆಹರು, ರಾಜೇಂದ್ರಪ್ರಸಾದ್, ಸರದಾರ್ ವಲ್ಲಭಾಯಿ ಪಟೇಲ್, ಲಾಲಾಲಜಪತರಾಯ್ ಮುಂತಾದವರು ಈ ಶತಮಾನದಲ್ಲಿ ಹುಟ್ಟಿದವರು. ಸ್ವಾತಂತ್ರ್ಯವನ್ನು ಗಳಿಸಲು ಅಹಿಂಸಾ ಮಾರ್ಗವು ಹುರುಳಿಲ್ಲವೆಂದು ಆಂಗ್ಲರ ಕಣ್ಣಿಗೆ ಮಣ್ಣೆರಚಿ ಹೋಗಿ ಪರದೇಶ ದಲ್ಲಿ ಜೈಹಿಂದ್ ಸೈನ್ಯವನ್ನು ಕಟ್ಟಿದ ವೀರ ಸುಭಾಸ್‌ಚಂದ್ರಬೋಸ್‌ರವರೂ ಕೂಡ ಈ ಶತಮಾನದ ಕೂಸೇ.

ವಿಜ್ಞಾನ ಜಗತ್ತಿನಲ್ಲಿ ಭಾರತಿಯು ಕೀಳಿಲ್ಲವೆಂದೆನಿಸಿದ ಪಿ. ಸಿ. ರೇ. ಸರ್. ಸಿ. ವಿ. ರಾಮನ್, ಮುಂತಾದ ವಿಜ್ಞಾನಿಗಳೂ, ಜನಮನಕೋಟಿ ಯನ್ನೆಚ್ಚರಿದ ರವೀಂದ್ರನಾಥ ಠಾಕೂರರಂತಹ ಸತ್ಕವಿಗಳೂ ಕೂಡ ಈ ಶತಮಾನದಲ್ಲಿಯೇ ಜನ್ಮವೆತ್ತಿದವರು. ರಾಜಾರಾಮ ಮೋಹನರಾಯ,

ಮದನಮೋಹನ ಮಾಲವೀಯ ಮುಂತಾದ ಸಮಾಜ ಸುಧಾರಕರು ಈ ಶತಮಾನದವರೆ.

ಎಲ್ಲಕ್ಕಿಂತ ಹೆಚ್ಚಾಗಿ ಪುರಾತನವಾದ, ಪವಿತ್ರವಾದ ಹಿಂದೂಧರ್ಮದ ಸತ್ಯಸಾರವನ್ನು ನೀಡಿದ ರಾಮಕೃಷ್ಣ ಪರಮಹಂಸ, ಸ್ವಾಮಿ ವಿವೇಕಾನಂದ ಮುಂತಾದವರು ಈ ಶತಮಾನದಲ್ಲಿಯೇ ಜನ್ಮವೆತ್ತಿದವರು. ಹಿಂದೆ ಶಂಕರಾಚಾರ್ಯರು, ಮಾಧ್ವಾಚಾರ್ಯರು, ರಾಮಾನುಜಾಚಾರ್ಯರು, ಮುಂತಾದವರು ಭಾರತದಲ್ಲಿ ಹಿಂದೂಧರ್ಮಕ್ಕೊಂದು ಮೆರುಗನ್ನಿತ್ತಿದ್ದರು. ಕ್ರಿಸ್ತಪೂರ್ವದಿಂದಲೂ ಇದ್ದ ಜೈನ ಮತ್ತು ಬೌದ್ಧಧರ್ಮಗಳು ವೈದಿಕ ಮತದಿಂದ ಭಿನ್ನವಾಗಿದ್ದವು ಎಂದರೂ ಭಾರತಿಯ ಮತಗಳೇ ಆಗಿದ್ದುವು. ಹದಿನೈದನೆಯ ಶತಮಾನದಿಂದೀಚೆಗೆ ಇಸ್ಲಾಮ್ ಮತ್ತು ಕ್ರೈಸ್ತಧರ್ಮಗಳು ರಾಜಕೀಯ ಬಲದೊಡನೆ ಭಾರತದಲ್ಲಿ ವ್ಯಾಪಿಸಿದವು. ಇಂದು ಪ್ರಪಂಚದ ನಾನಾ ಭಾಗಗಳು ಮಾಪನಕ್ಕೆ ಬಹಳ ದೂರವಿದ್ದರೂ ವಿಜ್ಞಾನ ಸಾಧನ ಗಳಿಂದ ನೆರಮನೆಯಂತಾಗಿವೆ. ನಾನಾ ಸಮಾಜಗಳ, ನಾನಾ ಧರ್ಮಗಳ ಪರಿಚಯವಾಗುತ್ತಿವೆ. ಭಾರತದಲ್ಲಿ ಹೊರನೋಟಕ್ಕೆ ಕಾಣುವ ಧರ್ಮದ ಬಿಕ್ಕಟ್ಟು, ಮತೀಯ ಧರ್ಮದ ಹೆಸರಿನಲ್ಲಿ ಭಿನ್ನಭಿನ್ನವಾದ ಸಮಾಜಗಳು ಮತ್ತು ಆಚಾರ ವ್ಯವಹಾರಗಳು ಪರಕೀಯರ ದೃಷ್ಟಿಗೆ ತೊಡಕಾಗಿ ಕಾಣು ತಿತ್ತು. ಹಿಂದೂಧರ್ಮವು ಹುರುಳಿಲ್ಲದ ಅನಾಗರಿಕ ಧರ್ಮವೆಂದು ಅವರು ಭಾವಿಸಿದ್ದರು. ನಿಜವಾದ ಹಿಂದೂ ಧರ್ಮದ ಉದಾರ ತತ್ವವನ್ನು ಆಧು ನಿಕ ಪ್ರಪಂಚಕ್ಕೆ ಸಾರಿದವರು ವಿವೇಕಾನಂದರು. ಯಾವ ಧರ್ಮಕ್ಕೂ ಹಿಂದೂ ಧರ್ಮವು ಕೀಳಿಲ್ಲವೆಂದು ಪರದೇಶದಲ್ಲಿ ಪರಧರ್ಮೀಯರ ಸಭೆ ಯಲ್ಲಿ ಸಾರಿ, ವಿಶ್ವದಾರ್ಶನಿಕರ ಗಮನವನ್ನು ಸೆಳೆದವರಲ್ಲಿ ಇವರೇ ಮೊದಲಿ ಗರು. ಅವರ ಕಾಲಾನಂತರ ಅಂತಹ ಪವಿತ್ರ ಹಾಗೂ ಕ್ಲಿಷ್ಟಕರವಾದ ಕಾರ್ಯವನ್ನು ಮಾಡಬಲ್ಲ ಮತ್ತೊಬ್ಬ ಸತ್ಪುತ್ರನಿಗೆ ಭಾರತಾಂಬೆಯು ಜನನವೀಯಬೇಕಾಯಿತು.

ಆ ಸಂಕಲ್ಪದ ಕೀರ್ತಿಯು ಚಿತ್ತೂರು ಜಿಲ್ಲೆಯ ತಿರುತಣ್ಣಿ ಎಂಬ ಸಣ್ಣ ಹಳ್ಳಿಗೆ ದೊರೆಯಿತು. ಅದೊಂದು ಯಾತ್ರಾಸ್ಥಳ. ಮದರಾಸಿನಿಂದ ವಾಯವ್ಯದ ಕಡೆಗೆ ನಲವತ್ತು ಮೈಲಿ ದೂರದಲ್ಲಿದೆ. 1888 ನೆಯ

ಸೆಪ್ಟೆಂಬರ್ ಐದನೆಯ ದಿನವು ಆ ಹಳ್ಳಿಯ ಸುದಿನವು. ವಿಶ್ವವಿಖ್ಯಾತ ವೇದಾಂತಿಯಾಗಿ, ಭಾರತದ ರಾಷ್ಟ್ರಪತಿಯಾಗಿರುವ ರಾಧಾಕೃಷ್ಣನ್‌ರವರ ಜನ್ಮದಿನವದು.

ಅವರ ತಂದೆತಾಯಿಗಳು ಅಷ್ಟೇನೂ ಶ್ರೀಮಂತರಾಗಿರಲಿಲ್ಲ. ಕಡು ಬಡವರೂ ಆಗಿರಲಿಲ್ಲ. ಸಾಮಾನ್ಯ ಮಟ್ಟದಲ್ಲಿ ಜೀವನವನ್ನು ಸಾಗಿಸುತ್ತಿದ್ದರು. ಅವರು ಜಾತಿಯಲ್ಲಿ ತೆಲಗು ಬ್ರಾಹ್ಮಣರು. ವಂಶಾನುಗತವಾಗಿ ಬಂದ ವೈದಿಕ ಧರ್ಮದಲ್ಲಿ ಅಚಲ ಶ್ರದ್ಧೆಯನ್ನಿಟ್ಟಿದ್ದರು. ಮನೆಯಲ್ಲಿ ಸದಾಚಾರವುಳ್ಳವರಾಗಿದ್ದರು. ವೇದಾಗಮ ಪುರಾಣಗಳಲ್ಲಿ ನಿಷ್ಣಾತರಾಗಿದ್ದರು. ಸರ್ವಪಳ್ಳಿ ಎಂಬುದು ಇವರ ಮನೆತನದ ಹೆಸರು. ಇವರ ತಂದೆ ಒಬ್ಬ ದೊಡ್ಡ ಜಮೀನುದಾರರಲ್ಲಿ ಕರಣಿಕರಾಗಿದ್ದರು. ತಮ್ಮ ನಿಸ್ವಾರ್ಥತೆ ಮತ್ತು ಕಾರ್ಯದಕ್ಷತೆಯಿಂದ ಜಮೀನುದಾರರ ಮೆಚ್ಚಿಗೆಯನ್ನು ಪಡೆದು ಬಡ್ತಿಯನ್ನು ಹೊಂದುತ್ತಿದ್ದರು. ಜಮೀನುದಾರರು ಇವರನ್ನು ನಂಬಿ, ತಮ್ಮ ಎಲ್ಲಾ ಜಮೀನುದಾರಿಕೆಯ ಮೇಲ್ವಿಚಾರಣೆಯನ್ನು ಇವರಿಗೆ ವಹಿಸಿದ್ದರು. ಸರ್ವಪಳ್ಳಿಯ ವೈದಿಕವಂಶ ವೃಕ್ಷದ ಬಹುಕಾಲದ ಸತ್ಫಲವೆಂಬಂತೆ ಎರಡನೆಯ ಮಗುವಾಗಿ ರಾಧಾಕೃಷ್ಣನ್ನರು ಹುಟ್ಟಿದರು. ಮಗುವಿನ ವಿಶಾಲವಾದ ಹಣೆ ದಪ್ಪ ಮೂಗು ಆಕರ್ಷಣೀಯವಾದ ಕಣ್ಣು, ತೇಜಸ್ವಿಯಾದ ಮುಖ ಮತ್ತು ಚಟುವಟಿಕೆಯ ನಡೆನುಡಿಯು ಎಲ್ಲರ ಮನಸ್ಸನ್ನೆಳೆಯುತ್ತಿತ್ತು. ಊರಿನವರೆಲ್ಲರ ಮುದ್ದಿನ ಮಗುವಾಗಿ ಶೈಶವಾವಸ್ಥೆಯನ್ನು ಕಳೆದರು.

## ವಿದ್ಯಾಭ್ಯಾಸ

ಇವರ ತಂದೆತಾಯಿಗಳು ಮಗುವು ಬಾಲ್ಯಾವಸ್ಥೆಗೆ ಬಂದ ಕೂಡಲೆ, ವಂಶಾನುಗತವಾಗಿ ಬಂದ ಸಂಸ್ಕೃತವನ್ನು ಕಲಿಯಲು ಹಳ್ಳಿಯ ಸಂಸ್ಕೃತ ಪಾಠಶಾಲೆಗೆ ಕಳುಹಿಸಿದರು. ಹಾಗೂ ಮಾತೃಭಾಷೆಯನ್ನು ಕಲಿಸಲು ಪ್ರಾಥಮಿಕ ಶಾಲೆಗೆ ಸೇರಿಸಿದರು. ಮನೆಯಲ್ಲಿ ಸಂಸ್ಕೃತ ಮತ್ತು ಮಾತೃಭಾಷೆಗಳೆರಡರ ಅಭ್ಯಾಸವು ದೊರೆಯುತ್ತಿತ್ತು. ಮನೆಯಲ್ಲಿನ ಕಟ್ಟುನಿಟ್ಟಾದ ಆಚಾರ ಮತ್ತು ದೇವಸ್ಥಾನಕ್ಕೆ ಬಂದು ಹೋಗುತ್ತಿದ್ದ ಭಕ್ತಾದಿಗಳ

ವರ್ತನೆ, ಇವರ ಮನಸ್ಸಿನ ಮೇಲೆ ಪರಿಣಾಮ ಬೀರಿ ಉತ್ತಮ ನಡವಳಿಕೆ ಗಳಿಗೆ ಅಡಿಪಾಯಗಳಾದುವು. ಸರ್ವಪಳ್ಳಿಯವರೇ ಮುಂದೆ ಒಂದುಕಡೆ ಹೇಳುತ್ತಾರೆ "ಜೀವನವು ಅಲ್ಪ ಸುಖವುಳ್ಳದ್ದು. ಆದುದರಿಂದ ತೃಪ್ತಿಯು ಸಂಪತ್ತಿಗಿಂತಲೂ ದೊಡ್ಡದು" ಎಂದು. ಇದರಿಂದ ಅವರ ತಂದೆತಾಯಿಗಳು ಎಷ್ಟು ತೃಪ್ತರಾಗಿದ್ದರೆಂಬುದನ್ನು ಊಹಿಸಬಹುದು. ಹಿರಿಯರಂತೆ ನೆರೆ ಹೊರೆಯಂತೆ ಮಕ್ಕಳ ಗುಣವಲ್ಲವೆ?

ರಾಧಾಕೃಷ್ಣನ್ನರು ಬಾಲ್ಯದಲ್ಲಿಯಾದರೂ ಯಾರನ್ನೂ ಬಯ್ದವರಲ್ಲ ಪರರಿಗೆ ಮನ ನೋಯುವ ಮಾತನಾಡಿದವರಲ್ಲ. ಜನಜೀವನಕ್ಕೂ ಭಕ್ತಿಗೂ ಇದ್ದ ಸಂಬಂಧದ ಬಗ್ಗೆ ಅವರಾಗಲೇ ಯೋಚಿಸುತ್ತಿದ್ದರು. ತಮ್ಮ ಆಲೋಚನೆಗೆ ಅವಕಾಶವಾಗುವಂತೆ ಆದಷ್ಟು ಏಕಾಂಗಿಯಾಗಿರಲು ಬಯಸುತ್ತಿದ್ದರು. ಅಂದ ಮಾತ್ರಕ್ಕೆ ಆಟಗಳ ಕಡೆಗೆ ಗಮನವನ್ನು ಕೊಡುತ್ತಿರಲಿಲ್ಲವೆಂದಲ್ಲ. ಸಹಪಾಠಿಗಳೊಡನೆ ಬೆರೆಯುತ್ತಿರಲಿಲ್ಲವೆಂದಲ್ಲ. ಮಕ್ಕಳ ಸಹಜ ಗುಣಕ್ಕನುಗುಣವಾಗಿ ಆಡುತ್ತಿದ್ದರು. ಆಟದಲ್ಲಿ ಹಿಂದೆ ಬೀಳುತ್ತಿರಲಿಲ್ಲ. ಸಹಪಾಠಿಗಳೊಡನೆ ಬೆರೆತು ಸಂತೋಷವಾಗಿ ಕಾಲ ವನ್ನು ಕಳೆಯುತ್ತಿದ್ದರು. "ಪುಸ್ತಕಗಳೇ ನನ್ನ ಪ್ರೇಕ್ಷಕರು. ನನ್ನ ಸ್ವಪ್ನಾವಸ್ಥೆಯಲ್ಲಿ ಎಚ್ಚರ ನೀಡತಕ್ಕವು. ನನ್ನ ಪ್ರಾರಂಭದಿಂದಲೂ ನನ್ನಗಲದಿರುವ ಒಡನಾಡಿಗಳು" ಎಂದು ಒಂದುಕಡೆ ಹೇಳುತ್ತಾರೆ. ಆದರೆ ಬಿಳಿಯ ಕಾಗದದ ಮೇಲೆ ಅಚ್ಚಾಗಿರುವುದೆಲ್ಲವೂ ಸರಿ, ಎಂದು ನಂಬು ತ್ತಿರಲಿಲ್ಲ. ಅದರ ಉಚಿತಾನುಚಿತಗಳನ್ನು ತರ್ಕಿಸಿ ಅನಂತರ ಗ್ರಹಿಸುವ ಸ್ವಭಾವ ಇವರದು. ಮನೆಯಲ್ಲಿ ನಡೆಯುತ್ತಿದ್ದ ಎಲ್ಲಾ ಧಾರ್ಮಿಕ ಹಬ್ಬಗಳಲ್ಲೂ ಸಂತೋಷದಿಂದ ಓಡಿಯಾಡುತ್ತಿದ್ದರು.

ಪ್ರಾಥಮಿಕ ವಿದ್ಯಾಭ್ಯಾಸವು ತಿರುತಣ್ಣಿಯಲ್ಲಿ ಮುಗಿಯಿತು. ಮುಂದಿನ ವಿದ್ಯಾಭ್ಯಾಸಕ್ಕಾಗಿ ಹತ್ತಿರವಿದ್ದ ತಿರುಪತಿಗೆ ಬಂದರು. ಅಲ್ಲಿ ಲ್ಯೂಥರನ್ ಮಿಷನ್ ಹೈಸ್ಕೂಲನ್ನು ಸೇರಿದರು. ತಿರುಪತಿಯೂ ಕೂಡ ಬಹಳ ಪ್ರಸಿದ್ಧವಾದ ಯಾತ್ರಾಸ್ಥಳ. ಇಡೀ ಭಾರತದ ನಾನಾ ಮೂಲೆ ಗಳಿಂದ ಯಾತ್ರಾರ್ಥಿಗಳು ಪ್ರತಿದಿನವೂ ಬರುತ್ತಾರೆ. ಅಲ್ಲಿ ನಿತ್ಯ ಜಾತ್ರೆ. ನಿಮಿಷ ನಿಮಿಷಕ್ಕೂ ಗೋವಿಂದೋ! ಗೋವಿಂದ! ಭಂಗಾರಗಿರಿವಾಸ!

ಎಂದು ಭಗವಂತನನ್ನು ಕೂಗುವ ಭಕ್ತರ ಕೂಗು, ಅದಾರನ್ನು ತಾನೇ ಭಕ್ತಿಯ ದಾರಿಗೆಳೆಯುವುದಿಲ್ಲ! ಅಲ್ಲಿನ ವಾತಾವರಣವು ಎಂತಹ ನಾಸ್ತಿಕ ಸನ್ನಾದರೂ ಆಸ್ತಿಕನನ್ನಾಗಿ ಮಾರ್ಪಡಿಸುವಷ್ಟು. ಬಾಲರಾಧಾಕೃಷ್ಣನ್ನರಿಗೆ ದೊರಕಿದ ಈ ವಾತಾವರಣವು ಧರ್ಮಜಿಜ್ಞಾಸನವನ್ನು ಆಳವಾಗಿ ಆಲೋಚಿಸಲು ಮತ್ತಷ್ಟು ಪ್ರೋತ್ಸಾಹ ನೀಡಿತು. ಅವರು ಅಲ್ಲಿಯೂ ಸಂಸ್ಕೃತಾಭ್ಯಾಸವನ್ನು ನಿಲ್ಲಿಸಲಿಲ್ಲ.

ಅವರು ವ್ಯಾಸಂಗ ಮಾಡುತ್ತಿದ್ದುದು ಕ್ರಿಶ್ಚಿಯನ್ ಮಿಷನ್ ಹೈಸ್ಕೂಲಿನಲ್ಲಿ. ದೇಶೀಯರ ಜ್ಞಾನಾಭಿವೃದ್ಧಿಯನ್ನು ಮಾಡುವುದರ ಜೊತೆಗೆ ಕ್ರೈಸ್ತ ಧರ್ಮವನ್ನು ಪ್ರಚಾರ ಮಾಡುವುದೂ ಕೂಡ ಅಂದಿನ ಪಾದ್ರಿಗಳ ಕರ್ತವ್ಯವಾಗಿತ್ತು. ಕ್ರೈಸ್ತಧರ್ಮದ ಉತ್ಪ್ರೇಕ್ಷೆಯು ರಾಧಾಕೃಷ್ಣನ್ನರ ಮನಸ್ಸನ್ನು ಸೆಳೆಯದೇ ಇರಲಿಲ್ಲ. ತಮ್ಮ ಊರಾದ ತಿರುತಣ್ಣಿಯ ಗುಡ್ಡದ ಮೇಲಿರುವ ಸುಬ್ರಹ್ಮಣ್ಯೇಶ್ವರಸ್ವಾಮಿ ದೇವಾಲಯಕ್ಕೆ ಬರುತ್ತಿದ್ದ ಭಕ್ತರ ತಂಡವನ್ನು ಬಾಲ್ಯದಿಂದಲೂ ನೋಡುತ್ತಿದ್ದರು. ಅನಂತರವೂ ತಿರುಪತಿಯಲ್ಲಿ ಪ್ರತಿದಿನವೂ ಬಂದು ಹೋಗುವವರ ಸಾವಿರಾರು ಭಕ್ತಾದಿಗಳ ತಂಡವನ್ನು ನೋಡಿ ನೋಡುತ್ತಾ ದಿನ ನೂಕುತ್ತಿದ್ದರು. ಹಿಂದೂಗಳಿಗೆ ದೇವರಲ್ಲಿ, ದೇವಸ್ಥಾನದಲ್ಲಿ ಎಷ್ಟು ಶ್ರದ್ಧೆ! ಎಷ್ಟು ಭಕ್ತಿ! ವೆಂಕಟೇಶ್ವರನ ವಿಗ್ರಹವು ಬೆಟ್ಟದ ಮೇಲಿನ ಕಲ್ಲು. ಮಾನವನ ಮತಿಗೆ ಸಿಲುಕಿ, ಕಲೆಗೆ ಬೆಲೆಯಾದ ಶಿಲೆ! ಅದಕ್ಕೊಂದು ದೇವಸ್ಥಾನ! ದೇವಸ್ಥಾನದ ಪವಿತ್ರತೆಗೆಂದು ಕಲ್ಯಾಣಿ! ಹತ್ತಿರದಲ್ಲೇ ನಾಲ್ಕಾರು ಮಂಟಪ. ಆ ವಿಗ್ರಹಕ್ಕೊಂದು ಪೂರ್ವಕಥೆ ವೆಂಕಟೇಶ ಮಹಾತ್ಮೆ! ಝರಿಯಲ್ಲಿ ಹರಿಯುವ ಕಪಿಲತೀರ್ಥ, ಪಾಪವಿನಾಶಿನಿ! ಪೂಜಾ ವಿಧಾನ, ಮುಡಿ, ಹರಕೆ, ದೇವರಿಗೆ ಬಡವ ಬಲ್ಲಿದರೆಲ್ಲರ ಯಥಾಶಕ್ತಿಯ ಕಾಣಿಕೆ! ಮನುಷ್ಯರ ಇದೆಂತಹ ಭಾವನೆ! ಇದರಲ್ಲಿ ಹುರುಳಿಲ್ಲವೆ? ಎಂದು ಆಗಾಗ ಯೋಚಿಸುತ್ತಿದ್ದರು. ಇದರಿಂದ ಇವರ ಮನಸ್ಸು ಸದಾ ತತ್ವಾನ್ವೇಷಣೆ ಮಾಡುತ್ತಿತ್ತು. ಪ್ರಕೃತಿಯಲ್ಲಿ ದೇವರನ್ನು ಕಲ್ಪಿಸಿ ಪೂಜಿಸುವುದು ತಪ್ಪೆನಿಸಲಿಲ್ಲ. ಸ್ನಾನ, ಸಂಧ್ಯಾವಂದನೆ, ಪೂಜಾವಿಧಾನಗಳು ಆರೋಗ್ಯ ವಿಜ್ಞಾನಕ್ಕೆ ಸಹಕಾರಿಗಳೆನಿಸಿದವು.

ಹೀಗೆ ಬಾಲ್ಯದಿಂದಲೂ ಇವರಮೇಲೆ ಹಿಂದೂ ಮತ್ತು ಕ್ರೈಸ್ತ ಧರ್ಮಗಳೆರಡೂ ಪ್ರಭಾವವನ್ನು ಬೀರಿದವು. ಆದುದರಿಂದಲೇ ವೈದಿಕ ರಕ್ತದಲ್ಲಿ ಇವರು ಹುಟ್ಟಿದರೂ ಮತಾಂಧತೆಯು ಇವರ ಜೀವನಕ್ಕಂಟಿ ಬರಲಿಲ್ಲ. ಇವರ ಶ್ರದ್ಧೆಯು ತತ್ವಾನ್ವೇಷಣೆಯ ಕಡೆಗೆ ಇವರನ್ನು ಸೆಳೆಯುತ್ತಿದ್ದರೂ, ಶಾಲೆಯ ಪಾಠ ಪ್ರವಚನಗಳಲ್ಲಿ ಹಿಂದುಳಿಯುತ್ತಿರಲಿಲ್ಲ. ಪ್ರತಿ ವರ್ಷವೂ ತರಗತಿಯಲ್ಲಿ ಪ್ರಥಮ ಶ್ರೇಣಿಯಲ್ಲಿಯೇ ತೇರ್ಗಡೆಯಾಗುತ್ತಿದ್ದರು. ಉಪಾಧ್ಯಾಯರೆಲ್ಲರ ಮೆಚ್ಚುಗೆಗೆ ಪಾತ್ರರಾಗಿದ್ದರು. ಸಹಪಾಠಿಗಳೊಡನೆ ಅಹಂಕಾರವನ್ನಾಗಲೀ ತಾತ್ಸಾರವನ್ನಾಗಲೀ ಎಂದೂ ಇವರು ತೋರಿಸಿದವರಲ್ಲ. ಆದರೆ ಅಚ್ಚುಮೆಚ್ಚಿನ ಮಿತ್ರರೊಡನೆ ಮಾತ್ರ ಸಲಿಗೆಯಿಂದ ವರ್ತಿಸುತ್ತಿದ್ದರು. ಇತರರೊಡನೆ ಸೇರಲು ಇವರಿಗೆ ಬಲು ನಾಚಿಕೆ. ಹೆಚ್ಚು ಐಶ್ವರ್ಯವಂತರಲ್ಲದ ಇವರ ತಂದೆತಾಯಿಗಳು ಮಗನ ವೈಭವಪೂರ್ಣವಾದ ದುಂದುವೆಚ್ಚಕ್ಕೆ ಅವಕಾಶವನ್ನು ಕೊಟ್ಟಿರಲಿಲ್ಲ. ಜೊತೆಗಾರರೊಡನೆ ಕೊಠಡಿಯಲ್ಲಿ ಓದಲು ಕಿರುಕುಳವಾಗುತ್ತಿತ್ತು. ಅವಧಾನಕ್ಕೆ ಭಂಗವಾಗುತಿತ್ತು. ಆಲೋಚನೆಗೆ ಅವಕಾಶವಿರುತ್ತಿರಲಿಲ್ಲ. ಅದಕ್ಕಾಗಿ ಹೊರಬಯಲಿನಲ್ಲಿ ಹೆಚ್ಚಾಗಿ ಓದುತಿದ್ದರು. ತಿರುಪತಿಯ ಮಿಷನ್ ಹೈಸ್ಕೂಲಿನಲ್ಲಿ 1896 ರಿಂದ 1900ರ ವರೆಗೆ ನಾಲ್ಕು ವರ್ಷಗಳು ವ್ಯಾಸಂಗ ಮಾಡಿದರು.

ಅನಂತರ ವೆಲ್ಲೂರಿನ ವೂರ್ ಹೆಸ್ ಕಾಲೇಜನ್ನು ಸೇರಿದರು. ಅಲ್ಲಿ ಮೂರು ವರ್ಷಗಳ ವರೆಗೆ ವ್ಯಾಸಂಗಮಾಡಿದರು. 1903ರಲ್ಲಿ ಮದರಾಸು ವಿಶ್ವವಿದ್ಯಾನಿಲಯದ ಪ್ರವೇಶ ಪರೀಕ್ಷೆಯನ್ನು ಮುಗಿಸಿದರು. ಇಲ್ಲಿಯ ವರೆಗೆ ಇವರ ಪ್ರತಿಭೆಯು ಜನತೆಗೆ ಸ್ಪಷ್ಟವಾಗಿ ಕಾಣುತ್ತಿರಲಿಲ್ಲ.

1904ರಲ್ಲಿ ಮದರಾಸಿನ ಕ್ರಿಶ್ಚಿಯನ್ ಕಾಲೇಜನ್ನು ಸೇರಿದರು ಅಲ್ಲಿ ಐಚ್ಛಿಕ ವಿಷಯವನ್ನು ತೆಗೆದುಕೊಳ್ಳುವಾಗ, ಅವರ ಗಮನವು ವೇದಾಂತದ ಕಡೆಗೆ ವಾಲಿತು. ಅದಕ್ಕೆ ಕಾರಣ ಅವರು ಹುಟ್ಟಿದ ಮತ್ತು ಬೆಳೆದ ಯಾತ್ರಾಸ್ಥಳಗಳ ಸನ್ನಿವೇಶಗಳ ಪ್ರಭಾವವು ಧಾರ್ಮಿಕ ವಿಷಯದತ್ತ ಸೆಳೆದೊಯ್ಯಿತು. ಸ್ವಾಮಿ ವಿವೇಕಾನಂದರು ಕಲ್ಕತ್ತಾ ವಿಶ್ವವಿದ್ಯಾಲಯದಲ್ಲಿ ಆಂಗ್ಲ ವಿದ್ಯಾಭ್ಯಾಸವನ್ನು ಹೊಂದಿ, ಪದವೀಧರರಾಗಿದ್ದರು.

ಆದರೂ ರಾಮಕೃಷ್ಣ ಪರಮಹಂಸರ ಪ್ರಭಾವದಿಂದ ಸಂನ್ಯಾಸಿಯಾಗಿದ್ದರು. ಭಾರತವು ಸ್ವಾತಂತ್ರ್ಯವನ್ನು ಕಳೆದುಕೊಂಡುದರಿಂದ ಹಿಂದೂ ಧರ್ಮವು ಕಳೆಗುಂದಿತ್ತು. ಆ ಸಮಯದಲ್ಲಿ ಇಂಗ್ಲೆಂಡ್ ಮತ್ತು ಅಮೆರಿಕಾಗಳಲ್ಲಿ ಅವರು ಮಾಡಿದ ವೇದಾಂತ ಉಪನ್ಯಾಸಗಳು ಹಿಂದೂಧರ್ಮದ ಪತಾಕೆಯಾಗಿದ್ದುವು. ಅವು ಪ್ರತಿಯೊಬ್ಬ ಭಾರತೀಯನಿಗೂ ಗೌರವದಾಯಕವಾದುವು. ಆದರೂ ಕೆಲವು ಕ್ರೈಸ್ತಪಾದ್ರಿಗಳು ವಿವೇಕಾನಂದರ ಜ್ಞಾನಜ್ಯೋತಿಗೆ ಮಸಿ ಬಳಿಯುತ್ತಿದ್ದರು. ಆಗ ರಾಧಾಕೃಷ್ಣರ ಮನಸ್ಸು ಕೆರಳುತ್ತಿತ್ತು. ಆಂಗ್ಲ ಸ್ತ್ರೀಯರ ಮತ್ತು ಹಿಂದೂ ಸ್ತ್ರೀಯರಲ್ಲಿರುವ ನಡೆನುಡಿಗಳನ್ನು ಹೋಲಿಸಿ ಮನಸ್ಸಿನಲ್ಲಿ ಆಲೋಚಿಸುತ್ತಿದ್ದರು. ಹಿಂದೂ ಮಹಿಳೆಯರ ದುರ್ಗತಿಗೆ ಹಿಂದೂ ಸಮಾಜವೇ ಕಾರಣವೆಂದು ನಂಬುತ್ತಿದ್ದರು. ಹಿಂದೂ ಧರ್ಮದಲ್ಲಿ ಉತ್ತಮ ಧ್ಯೇಯವಿರುವಂತೆ ಕೆಲವು ಮೂಢ ನಂಬಿಕೆ ಮತ್ತು ಗೊಡ್ಡು ಆಚಾರಗಳಿರುವುದನ್ನೂ ಗಮನಿಸಿದ್ದರು. ಈ ಲೋಪಗಳಿಗೆ ಕಾರಣವನ್ನೂ, ಅವುಗಳಿಗೆ ಪರಿಹಾರವನ್ನೂ ಸೂಕ್ಷ್ಮವಾಗಿ ಆಲೋಚಿಸುತ್ತಿದ್ದರು. ಅವಕಾಶ ದೊರೆತರೆ ತಾನೂ ಕೂಡ ಸ್ವಾಮಿ ವಿವೇಕಾನಂದರಂತೆಯೇ ಹಿಂದೂಧರ್ಮದ ಸತ್ಯವನ್ನು ಜಗತ್ತಿಗೆ ಸಾರಬೇಕು ಎಂದುಕೊಳ್ಳುತ್ತಿದ್ದರು. ಆದರೆ ಎಲ್ಲವೂ ಮನುಷ್ಯನ ಪ್ರಯತ್ನದಂತೆ ನಡೆಯುವುದಿಲ್ಲ. ಆದರೆ, ಇವರ ವಿಷಯದಲ್ಲಿ ಹಾಗಲ್ಲ. ಇವರ ಅದೃಷ್ಟವು ಒಳ್ಳೆಯದು. ಇವರ ದೂರದ ಸಂಬಂಧಿಯೊಬ್ಬರು ಅದೇ ವರುಷ ದರ್ಶನಶಾಸ್ತ್ರವನ್ನು ತೆಗೆದುಕೊಂಡು ಬಿ.ಎ. ಪರೀಕ್ಷೆಯಲ್ಲಿ ತೇರ್ಗಡೆಯಾಗಿದ್ದರು. ಅವರು ಇವರಿಗೆ ಜೆ. ವಿಲಿಯಮ್ಸ್‌ರವರ ಲಾಜಿಕ್ (ತರ್ಕಶಾಸ್ತ್ರ) ಪುಸ್ತಕವನ್ನೂ, ಜೆ. ಎಸ್. ಮಾಕೆನ್‌ಜೀಯವರ ಮಮಲ್ ಎಥಿಕ್ಸ್ (ಜೀವಿಗಳ ನೀತಿಶಾಸ್ತ್ರ) ಎಂಬ ಪುಸ್ತಕವನ್ನೂ ಉಚಿತವಾಗಿ ಕೊಟ್ಟರು. ಅವುಗಳ ಉಪಯೋಗವನ್ನು ಪಡೆದುಕೊಳ್ಳುವುದಕ್ಕಾಗಿಯಾದರೂ ಸರ್ವಪಳ್ಳಿಯವರು ದರ್ಶನಶಾಸ್ತ್ರವನ್ನು ಐಚ್ಛಿಕ ವಿಷಯವನ್ನಾಗಿ ತೆಗೆದುಕೊಳ್ಳಬೇಕಾಯಿತು. ಅದನ್ನೇ ಒಂದು ಕಡೆ "ಈ ಗ್ರಂಥಗಳಿಂದ ನನ್ನ ಭವಿಷ್ಯವು ತತ್ವಜ್ಞಾನದತ್ತ ತಿರುಗಿತು" ಎನ್ನುತ್ತಾರೆ.

ಒಟ್ಟಿನಲ್ಲಿ ಇವರಿಗೆ ಆಸಕ್ತಿಯಿದ್ದ ವಿಷಯವೇ ಕಾಲೇಜಿನಲ್ಲಿ ಇವರ

ರಾಧಾಕೃಷ್ಣನ್ನರಿಗೆ ಕಾಲೇಜಿನ ವ್ಯಾಸಂಗ ಮತ್ತು ವಾತಾವರಣದ ಜೊತೆಗೆ, ಆ ಕಾಲದ ದೇಶದ ಸ್ಥಿತಿಯೂ ಪ್ರಭಾವ ಬೀರಿತು. ಸ್ವತಂತ್ರ ಭಾವನೆಯು ಜನತೆಯಲ್ಲಿ ತಾಂಡವವಾಡುತ್ತಿತ್ತು. ಭಾರತದಲ್ಲಿ ವೇದಾಂತಿಗಳು ಬಹುಮಂದಿ ಇದ್ದರು. ಆದರೆ ಅದನ್ನು ಜಗತ್ತಿಗೆ ಸಾರುವ ಶಕ್ತಿಯು ಮಾತ್ರ ಯಾರಿಗೂ ಇರಲಿಲ್ಲ. ಸಂಸ್ಕೃತ ಜ್ಞಾನವಿದ್ದಂತೆ ಆಂಗ್ಲ ಭಾಷೆಯ ಪ್ರವೀಣತೆಯುಳ್ಳವರು ಅಂದು ಅಪರೂಪವಾಗಿದ್ದರು. ಕೂಪಕೂರ್ಮ ನ್ಯಾಯದಂತೆ ಕೇವಲ ವೇದೋಪನಿಷತ್ತುಗಳನ್ನು ಪಠನ ಮಾಡುತ್ತಿದ್ದರೇ ಹೊರತು, ಪರಧರ್ಮಗಳ ತುಲನಾತ್ಮಕ ದೃಷ್ಟಿಯಿಂದ, ಆಲೋಚಿಸಿಮಾಡಿ ಜಗತ್ತಿಗೆ ಹೇಳುವವರಿರಲಿಲ್ಲ. ಇಂತಹ ಒಂದು ಸದವಕಾಶವು ಸರ್ವಪಳ್ಳಿಯವರಿಗೆ ದೊರೆಯಿತು.

ಇವರು ಎಂ. ಎ. ಪದವಿಯನ್ನು ಗಳಿಸಿಕೊಂಡಮೇಲೆ ಜೀವನರಂಗವನ್ನು ಆಲೋಚಿಸಿದರು. ಎಲ್ಲಕ್ಕಿಂತ ಹೆಚ್ಚಾಗಿ ಶಿಕ್ಷಣರಂಗವೇ ಸರಿಯಾದುದೆಂದು ನಿರ್ಧರಿಸಿದರು. ಅನಂತರ ಉಪಾಧ್ಯಾಯ ವೃತ್ತಿಯ ಶಿಕ್ಷಣಕ್ಕಾಗಿ ಮತ್ತೆ ಮದರಾಸಿನ ಸೈದಾಪೇಟೆಯಲ್ಲಿದ್ದ ಟೀಚರ್ಸ್ ಟ್ರೈನಿಂಗ್ ಕಾಲೇಜನ್ನು ಸೇರಿದರು. ಅಲ್ಲಿ ಒಂದು ವರುಷ ವ್ಯಾಸಂಗ ಮಾಡಿ ಎಲ್. ಟಿ. ಪದವಿಯನ್ನು ಗಳಿಸಿದರು.

---

# ಪ್ರಾಧ್ಯಾಪಕರಾಗಿ

ಎಂ.ಎ., ಎಲ್.ಟಿ. ಪದವಿಗಳನ್ನು ಪಡೆದ ಸರ್ವಪಳ್ಳಿಯವರಿಗೆ ಸರ್ಕಾರಿ ಕೆಲಸಕ್ಕೆ ಹೋಗಲು ಮನಸ್ಸಿರಲಿಲ್ಲ. ಅಂದಿನ ಯುವಕರ ಮನೋಭಾವನೆಯೇ ಹಾಗಿತ್ತು. ಪ್ರತಿಯೊಬ್ಬರಿಗೂ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸುವ ಆಸಕ್ತಿ. ಇವರಿಗೂ ಅದೇ ಆಸೆಯಿತ್ತು. ಆದರೆ ಇವರು ನೇರವಾಗಿ ರಾಜಕೀಯಕ್ಕೆ ಧುಮುಕಲಿಲ್ಲ. ನೇರ ಸ್ವಾತಂತ್ರ್ಯ ಸಮರದಲ್ಲೊಬ್ಬರಾಗುವುದಕ್ಕಿಂತ, ಜನರ ಮನಸ್ಸನ್ನು ಹದಗೊಳಿಸುವುದು ಮಹತ್ಕಾರ್ಯವೆಂದು ಇವರ ಭಾವನೆ. ರಾಜಕೀಯ ಆಂದೋಲನದಿಂದ ದೇಶದೇಶಗಳಿಗೆ ಯುದ್ಧ, ಅದರಿಂದ ಅನೀತಿ, ಅನೀತಿಯಿಂದ ಅಶಾಂತಿ. ಇವೆಲ್ಲಕ್ಕೂ ಕಾರಣವೆಂದರೆ—ಮಾನವನ ಮನಸ್ಸು ಅಧರ್ಮದತ್ತ ಮತ್ತು ದುರಾಶೆಯತ್ತ ಹೋಗುತ್ತಿರುವುದು. ಸ್ವಾರ್ಥಕ್ಕಾಗಿ ಮಾನವನು ಮೃಗಕ್ಕಿಂತಲೂ ಮಿಗಿಲಾಗಿ ವರ್ತಿಸುವನು. ತಾನಿರುವ ಜಗತ್ತನ್ನು ವಿಜ್ಞಾನ ಸಾಧನದಿಂದ ತಾನೇ ನಾಶಮಾಡಿಕೊಳ್ಳುವನು. ಎಂದು ಅವರು ಅರಿತಿದ್ದರು. ಅದಕ್ಕಾಗಿ ಜನತೆಯನ್ನು ಧರ್ಮದತ್ತ ಸೆಳೆಯುವ ಮಹತ್ಕಾರ್ಯ ರಂಗವನ್ನು ಅರಸುತ್ತಿದ್ದರು. ಆ ರಂಗವೇ ಮುಂದೆ ಪ್ರಜೆಗಳಾಗುವ ಇಂದಿನ ವಿದ್ಯಾರ್ಥಿಗಳು. ವಿದ್ಯಾರ್ಥಿಗಳ ಮನಸ್ಸಿನ ಮೇಲೆ ಉತ್ತಮ ನಡವಳಿಕೆ, ಧರ್ಮಗುಣ ಮತ್ತು ವಿಶ್ವ ಸೌಹಾರ್ದ ಭಾವನೆಯನ್ನು ಬೀರಬಲ್ಲ ತತ್ವ ಬೋಧನೆಯನ್ನು ಮಾಡಲು ಬಯಸಿದರು.

ಅವರ ಬಯಕೆಗನುಗುಣವಾಗಿ 1911ರಲ್ಲಿ ಮದರಾಸಿನ ಪ್ರೆಸಿಡೆನ್ಸಿ ಕಾಲೇಜಿನಲ್ಲಿ ಉಪಪ್ರಾಧ್ಯಾಪಕ ವೃತ್ತಿಯು ದೊರೆಯಿತು. ಅಲ್ಲಿಯೂ ಅವರು ತಮ್ಮ ಜೀವಿತ ಕಾಲವನ್ನೆಲ್ಲಾ ಪರಾಧೀನತೆಯಲ್ಲಿ ಕಳೆಯಬೇಕೆಂದು ಇಷ್ಟಪಟ್ಟಿರಲಿಲ್ಲ. ಭಾರತದ ಮೂಲೆ ಮೂಲೆಗಳಲ್ಲೆಲ್ಲಾ ಸಂಚರಿಸಿ, ಪಕ್ಷಿಯಂತೆ ಸ್ವಚ್ಛಂದವಾಗಿ ಒಂದು ವಿಶ್ವವಿದ್ಯಾನಿಲಯದಿಂದ ಮತ್ತೊಂದು ವಿಶ್ವವಿದ್ಯಾನಿಲಯಕ್ಕೆ ಹಾರುತ್ತಾ ಜ್ಞಾನಪ್ರಸಾರ ಮಾಡಿರುವುದನ್ನು ನಾವು ಕಾಣುತ್ತೇವೆ.

ಉಪ ಪ್ರಾಧ್ಯಾಪಕರಾದ ಮೇಲೂ ಇವರ ಜ್ಞಾನಾರ್ಜನೆಯು ನಿಲ್ಲಲಿಲ್ಲ. ಬಹಳ ಮಂದಿ ಉಪಾಧ್ಯಾಯರು ತಮ್ಮ ಶಿಷ್ಯರ ಜ್ಞಾನವನ್ನು ಹೆಚ್ಚಿಸುವುದರಲ್ಲಿ ಆಸಕ್ತಿಯನ್ನು ವಹಿಸುತ್ತಾರೆ. ತಮ್ಮ ಜ್ಞಾನವನ್ನು ಮಾತ್ರ ನಿಂತ ನೀರಿನಂತೆ ಇಟ್ಟುಕೊಳ್ಳುವರು. ವೃತ್ತಿಯೊಂದು ದೊರೆತ ಮೇಲೆ ಜೀವನ ಸಮಸ್ಯೆಯು ತೀರಿತು. ನಾವೇಕೆ ಓದಬೇಕೆಂದು ಜ್ಞಾನಾರ್ಜನೆಗೆ ಗಮನಕೊಡುವುದಿಲ್ಲ. ರಾಧಾಕೃಷ್ಣನ್ನರ ವಿಷಯ ಹಾಗಲ್ಲ. ವಿದ್ಯಾರ್ಥಿಗಳಿಗಿಂತ ಹೆಚ್ಚಾಗಿ ತಾವು ಬೋಧಿಸುವ ವಿಷಯದ ಬಗೆ ವ್ಯಾಸಂಗವನ್ನು ಮಾಡುತ್ತಿದ್ದರು. ವೇದಾಂತ ವಿಷಯವು ಉಕ್ಕಿನ ಕಡಲೆಯಂತೆ ಕಠಿಣವಾದುದು ಮತ್ತು ನೀರಸವಾದುದು ಎಂದು ಕೆಲವರ ಭಾವನೆ. ಮತ್ತೆ ಕೆಲವರು ಗೊಡ್ಡು ಪುರಾಣವೆಂದೇ ಕರೆಯುತ್ತಾರೆ. ಆದರೆ, ಇವರ ವಿದ್ಯಾರ್ಥಿಗಳು ಮಾತ್ರ ಹಾಗೆ ತಿಳಿದಿರಲಿಲ್ಲ. ಅದಕ್ಕೆ ಕಾರಣ—ಇವರ ಆಳವಾದ ಪಾಂಡಿತ್ಯ; ಸರಳವಾದ ಬೋಧನೆ ಮತ್ತು ಇವರ ನಗುಮುಖ; ವಿದ್ಯಾರ್ಥಿಗಳಿಗೆ ಕಾಲಾನುಗುಣವಾಗಿ ಬರಬಹುದಾದ ಅನುಮಾನಗಳನ್ನು ಸ್ಪಷ್ಟವಾಗಿ ಅರ್ಥವಾಗುವಂತೆ ಪರಿಹರಿಸುತ್ತಿದ್ದರು. ತಾನು ಪ್ರಾಧ್ಯಾಪಕನೆಂಬ ಹೆಮ್ಮೆಯನ್ನು ಬದಿಗೊತ್ತಿ, ಸ್ನೇಹಿತರಂತೆ ಶಿಷ್ಯರೊಡನೆ ವರ್ತಿಸುತ್ತಿದ್ದರು. ಇದರಿಂದ ವಿದ್ಯಾರ್ಥಿಗಳಲ್ಲಿ ಭೀತಿಯು ಕುಗ್ಗಿ ಗುರುವಿನ ವಿಷಯದಲ್ಲಿ ಪ್ರೇಮವು ಬೆಳೆಯುತ್ತಿತ್ತು.

ಪ್ರತಿ ಶನಿವಾರ ಮತ್ತು ಭಾನುವಾರಗಳು ಪಕ್ಷಪಾತವಿಲ್ಲದೆ ತಮ್ಮ ವಿದ್ಯಾರ್ಥಿಗಳನ್ನು ತಮ್ಮ ಮನೆಗೆ ಆಹ್ವಾನಿಸುತ್ತಿದ್ದರು. ವಿದ್ಯಾರ್ಥಿಯಾದವನು ಬಡವನೇ ಆಗಲೀ, ಶ್ರೀಮಂತನೇ ಆಗಲೀ, ದಡ್ಡನೇ ಆಗಲೀ, ಬುದ್ಧಿವಂತನೇ ಆಗಲೀ, ಯಾವ ಜಾತಿಯವನಾಗಲೀ ಎಲ್ಲರನ್ನು ಸಮನಾಗಿ ಸತ್ಕರಿಸುತ್ತಿದ್ದರು. ಮನೆಯಲ್ಲಿಯೂ ಪಠ್ಯವಿಷಯಗಳ ಮೇಲೆ ಚರ್ಚಿಸುತ್ತಿದ್ದರು. ಇಷ್ಟಲ್ಲದೆ, ಯಾವ ವಿದ್ಯಾರ್ಥಿಯು ಯಾವಾಗ ಬೇಕಾದರೂ ತಮ್ಮ ಸಂಶಯಗಳನ್ನು ತಿಳಿಸಿ, ಅದರ ಪರಿಹಾರವನ್ನು ಹೊಂದಬಹುದಾಗಿತ್ತು.

ಸರ್ವಪಳ್ಳಿಯವರಿಗೆ ಸಂಸ್ಕೃತದಲ್ಲಿ ಆಳವಾದ ಜ್ಞಾನವಿತ್ತು. ಇಂಗ್ಲಿಷ್‌ನಲ್ಲಿ ಒಬ್ಬ ಆಂಗ್ಲಭಾಷಾ ಪಂಡಿತನಿಗಿಂತ ಕಡಿಮೆ ಜ್ಞಾನವಿರಲಿಲ್ಲ.

ಚಿಲುಮೆಯಿಂದ ನೀರು ಚಿಮ್ಮುವಂತೆ ಇವರ ಬಾಯಿಂದ ಸ್ವಚ್ಛವಾದ ಇಂಗ್ಲೀಷ್ ಪದಗಳು ಬರುತಿದ್ದುವು. ಇವರಿಂದ ಹೊರಟ ಧ್ವನಿಯು ವಿದ್ಯಾರ್ಥಿಗಳಿಗೆ ಮತ್ತಷ್ಟು ಕೇಳಬೇಕೆಂಬ ಆಸಕ್ತಿಯನ್ನೀಯುತಿದ್ದುವು. ಈ ಉತ್ತಮ ಉಪಾಧ್ಯಾಯರ ಗುಣವಿದ್ದುದರಿಂದಲೇ ಐದು ವರ್ಷಗಳ ನಂತರ, ಅಂದರೆ 1916ರಲ್ಲಿ ಅಲ್ಲಿಯೇ ಅವರಿಗೆ ಪ್ರಾಧ್ಯಾಪಕ ವೃತ್ತಿಯ ಬಡ್ತಿಯು ದೊರೆಯಿತು.

1917ರಲ್ಲಿ ಜೆ. ಹೆಚ್. ಮೂರ್‌ಹೆಡ್ ಎಂಬುವರು ವೇದಾಂತ ಗ್ರಂಥಕೋಶವನ್ನು (Library of Philosophy) ಬರೆದು ಕೊಡುವಂತೆ ಸರ್ವಪಳ್ಳಿಯವರನ್ನು ಕೋರಿದರು. ಅಲ್ಲಿಯ ತನಕ ಇವರ ಯೋಗ್ಯತೆಗೆ ಕನ್ನಡಿಯನ್ನು ಯಾರೂ ಹಿಡಿದು ತೋರಿರಲಿಲ್ಲ. ಸ್ವಲ್ಪ ಅಳುಕುತ್ತಲೇ ಒಪ್ಪಿಕೊಂಡರು.

ಭಾರತದಲ್ಲೇನು! ಇಡೀ ವಿಶ್ವವನ್ನೇ ಕಣ್ತೆರೆಸಿದ ರವೀಂದ್ರನಾಥ ಠಾಕೂರರ ಕವಿತಾಶಕ್ತಿ ಮತ್ತು ಅವರ ಗ್ರಂಥಗಳಲ್ಲಡಗಿದ್ದ ಪ್ರತಿಭೆಯು ರಾಧಾಕೃಷ್ಣನ್ನರ ಗಮನವನ್ನು ಸೆಳೆಯದೇ ಇರಲಿಲ್ಲ. ಅವರ ಗೀತಾಂಜಲಿ, ಹಾರ್‌ವಾರ್ಡಿನಲ್ಲಿ ಅವರು ಮಾಡಿದ್ದ ಉಪನ್ಯಾಸ, ಭಗವದ್ಗೀತೆಯ ಮೇಲಿನ ಅವರ ವ್ಯಾಖ್ಯಾನ, ಅವರ ಇಂಡಿಯಾದ ಪಕ್ಷಿನೋಟ ಮತ್ತು ಜೀವಸಾಧನೆ ಮುಂತಾದ ಅವರ ಗ್ರಂಥಗಳಲ್ಲಿ ಅಡಗಿದ್ದ ತತ್ವವನ್ನು ಶ್ರದ್ಧೆಯಿಂದ ಅಭ್ಯಾಸಮಾಡಿದರು. ತಮ್ಮ ಮನಸ್ಸಿನಲ್ಲಿರುವ ಹಿಂದೂಧರ್ಮದ ಸಾರವನ್ನು ಮತ್ತೊಂದು ರೀತಿಯಲ್ಲಿ, ಕಾವ್ಯಮಯವಾಗಿ ಠಾಕೂರರು ಹೇಳುತ್ತಿರುವುದನ್ನರಿತರು. ಅನಂತರ ಠಾಕೂರರ ವೇದಾಂತ (Philosophy of Tagoor) ಎಂಬ ಗ್ರಂಥವನ್ನು ಬರೆಯಲು ಮನಸ್ಸು ಮಾಡಿದರು.

ಅದೇ ಕಾಲದಲ್ಲಿ ಪ್ರಖ್ಯಾತರಾಗಿದ್ದ ಪ್ರೊ|| ಡಿ. ಎಸ್. ಶರ್ಮಾ ಪ್ರೊ|| ಟಿ. ಕೆ. ದೊರೆಸ್ವಾಮಿ, ಮತ್ತು ರಾಧಾಕೃಷ್ಣನ್ನರು ಆಗಾಗ್ಗೆ ಭೇಟಿಯಾಗುತ್ತಿದ್ದರು. ಠಾಕೂರರ ವೇದಾಂತವನ್ನು ಸರ್ವಪಳ್ಳಿಯವರು ಬರೆಯುತ್ತಿರುವ ವಿಷಯವನ್ನು ಅವರೆಲ್ಲರೂ ತಿಳಿದು ಸಂತೋಷಗೊಂಡರು. ಇವರಿಗೆ ಮತ್ತಷ್ಟು ಉತ್ತೇಜನವನ್ನು ಕೊಟ್ಟು ಪ್ರೋತ್ಸಾಹಿಸಿದರು. ಈ

ಗ್ರಂಥವು ಮದರಾಸಿನಲ್ಲಿ ಪ್ರಕಟವಾಯಿತು. ಇದರಿಂದ ಮದರಾಸು ಪ್ರಾಂತ್ಯದಲ್ಲಿ ರಾಧಾಕೃಷ್ಣನ್‌ರವರು ನಿಜವಾದ ದಾರ್ಶನಿಕರೆಂಬ ವಿಷಯವು ಹರಡಿತು.

ಅಷ್ಟರಲ್ಲಿ ರವೀಂದ್ರರಿಗೂ ರಾಧಾಕೃಷ್ಣರ ಬಗ್ಗೆ ಅಲ್ಪಸ್ವಲ್ಪ ವಿಷಯವು ತಿಳಿದಿತ್ತು. ಈ ಪುಸ್ತಕವೂ ಅವರ ಕೈ ತಲುಪಿತು. ಆ ಪುಸ್ತಕವನ್ನು ಶ್ರದ್ಧೆಯಿಂದ ಓದಿದರು. ಸಂತೋಷಪಟ್ಟು ರಾಧಾಕೃಷ್ಣರಿಗೆ ಕಾಗದ ಒಂದನ್ನು ಬರೆದು—"ನೀವು ಇತರರಿಗಿಂತಲೂ ಉತ್ತಮ ಪುಸ್ತಕವನ್ನು ಬರೆದಿದ್ದೀರಿ! ಎಂದು ಕವಿವರ್ಯರು ಹೊಗಳಿದರು. ರಾಧಾಕೃಷ್ಣನ್ನರ ಸೂಕ್ಷ್ಮಬುದ್ಧಿ ಮತ್ತು ಆಳವಾದ ಜ್ಞಾನವನ್ನು ತಿಳಿದು ಅವರಿಗೆ ಸಂತೋಷ ವಾಗಿತ್ತು. ಇದೇ ರಾಧಾಕೃಷ್ಣನ್ನರ ಪ್ರಥಮ ಕೃತಿಯೆನ್ನಬಹುದು. ಈ ಗ್ರಂಥವು ಇವರೊಬ್ಬ ಉತ್ತಮ ಆಲೋಚನೆಗಾರರು ಮತ್ತು ಉತ್ತಮ ಬರಹಗಾರರು ಎಂಬ ಕೀರ್ತಿಯನ್ನು ಗಳಿಸಿಕೊಟ್ಟಿತು.

ತಾವು ಗಳಿಸಿದ ವೇದಾಂತ ತತ್ವಜ್ಞಾನವನ್ನು ಜಗತ್ತಿಗೆ ತಿಳಿಸುವ ಉದ್ದೇಶದಿಂದ ಅಮೆರಿಕಾ ಮತ್ತಿತರ ಪಾಶ್ಚಿಮಾತ್ಯ ದೇಶಗಳ ಪ್ರಮುಖ ಪತ್ರಿಕೆಗಳಿಗೆ ದಾರ್ಶನಿಕ ವಿಷಯದ ಮೇಲೆ ಲೇಖನಗಳನ್ನು ಬರೆದು ಕಳು ಹಿಸುತ್ತಿದ್ದರು. ಇದರಿಂದ ಇವರಿಗೆ ಪಾಶ್ಚಿಮಾತ್ಯ ದೇಶಗಳಲ್ಲಿ ಒಳ್ಳೆಯ ಹೆಸರು ಬಂದುದಲ್ಲದೆ, ಹಿಂದೂಧರ್ಮದ ಬಗ್ಗೆ ಒಳ್ಳೆಯ ಅಭಿಪ್ರಾಯಗಳೂ ಪ್ರಸಾರವಾದಂತಾಗುತ್ತಿತ್ತು.

ರಾಧಾಕೃಷ್ಣನ್ನರು 1918ರಲ್ಲಿ ರಾಜಮುಂದ್ರಿಯ ಸರ್ಕಾರಿ ಕಾಲೇಜಿಗೆ ತತ್ವಶಾಸ್ತ್ರ ವಿಭಾಗದ ಮುಖ್ಯಸ್ಥರಾಗಿ ಮದರಾಸಿನಿಂದ ವರ್ಗವಾಗಿ ಹೋದರು. ಅಲ್ಲಿ ಅವರು ಕೊಟ್ಟ ಉಪನ್ಯಾಸಗಳು ವೇದಾಂತ ಸಾರವಾಗಿ ದ್ದುವು. ಆದರೆ ಅಲ್ಲಿ ಅವರು ಬಹಳಕಾಲವಿರಲಾಗಲಿಲ್ಲ.

ಮೈಸೂರಿನಲ್ಲಿ ವಿಶ್ವವಿದ್ಯಾನಿಲಯವು ಹೊಸದಾಗಿ ಸ್ಥಾಪಿತವಾಗಿತ್ತು. ಅದರ ಸಂಸ್ಥಾಪಕರಾಗಿದ್ದ ನಾಲ್ವಡಿ ಕೃಷ್ಣರಾಜ ಒಡೆಯರಿಗೆ ರಾಧಾ ಕೃಷ್ಣರ ಪ್ರತಿಭೆಯು ತಿಳಿಯಿತು. ವಿಶ್ವವಿದ್ಯಾನಿಲಯದ ಸಮಿತಿಯಿಂದ ರಾಧಾಕೃಷ್ಣನ್ನರಿಗೆ ಕರೆ ಹೋಯಿತು. ಸರ್ವಪಳ್ಳಿಯವರ ಉದ್ದೇಶವೂ ಜ್ಞಾನ ಪ್ರಸಾರ ಮಾಡುವುದೇ ಆಗಿತ್ತು. ಮೈಸೂರಿಗೆ ಬಂದರು. ತತ್ವ ಶಾಸ್ತ್ರದ ಪ್ರಾಧ್ಯಾಪಕರಾಗಿ ಮೂರು ವರ್ಷಗಳು ಕೆಲಸಮಾಡಿದರು. ಆಗ

ಎಸ್. ಎಸ್. ಸುಬ್ಬರಾಯರು ಮೈಸೂರು ವಿಶ್ವವಿದ್ಯಾನಿಲಯದ ಪ್ರಿನ್ಸಿಪಾಲರು. ಸರ್ವಪಳ್ಳಿಯವರು ಇಲ್ಲಿಯೂ ಉತ್ತಮ ಪ್ರಾಧ್ಯಾಪಕರೆಂದೇ ಕೀರ್ತಿಯನ್ನು ಗಳಿಸಿದರು. ಶಿಷ್ಯರಲ್ಲಿ ಅವರು ಇಟ್ಟಿದ್ದ ಪ್ರೇಮದ ಬಗ್ಗೆ ಆಗ ನಡೆದ ಒಂದು ಸಂದರ್ಭವನ್ನು ತಿಳಿಯಬಹುದು. ಅವರು ಈ ವಿಶ್ವವಿದ್ಯಾನಿಲಯವನ್ನು ಬಿಟ್ಟು ಹೋಗುವಾಗ, ಅವರ ವಿದ್ಯಾರ್ಥಿಗಳು ಸರ್ವಪಳ್ಳಿಯವರು ಕುಳಿತಿದ್ದ ಗಾಡಿಯನ್ನು ರೈಲ್ವೆ ನಿಲ್ದಾಣದವರೆಗೆ ಎಳೆದೊಯ್ಯಲು ಸಿದ್ಧರಾಗಿದ್ದರೆಂದರೆ, ವಿದ್ಯಾರ್ಥಿಗಳು ಅವರಲ್ಲಿಟ್ಟಿದ್ದ ಪ್ರೇಮವೆಷ್ಟೆಂಬುದು ತಿಳಿಯುತ್ತದೆ. ರಾಧಾಕೃಷ್ಣನ್ನರು ಒಂದು ಕಡೆ ಹೇಳುತ್ತಾರೆ "ವಿದ್ಯಾರ್ಥಿಗಳು ತಮಗೆ ಗೌರವವನ್ನು ಕೊಡಬೇಕೆಂದು ಉಪಾಧ್ಯಾಯರು ಅಪ್ಪಣೆ ಮಾಡಬಾರದು. ಅಂತಹ ಪ್ರೀತಿಯನ್ನು ಸಂಪಾದಿಸಿಕೊಳ್ಳಬೇಕು" ಎಂದು.

ಮೈಸೂರಿನಲ್ಲಿದ್ದಾಗ ಪ್ರಪಂಚದ ಎಲ್ಲಾ ತತ್ವಜ್ಞಾನಿಗಳ ಮತಗಳನ್ನೂ ಅಭ್ಯಾಸಮಾಡಿದರು. ಅನಂತರ "ಸಮಕಾಲೀನ ತತ್ವಶಾಸ್ತ್ರದಲ್ಲಿ ಧರ್ಮದ ಅಧಿಕಾರ" (The Reign of Religion in Contemporary Philosophy) ಎಂಬ ಪುಸ್ತಕವನ್ನು ಬರೆದರು.

ಇದರಲ್ಲಿ ವಿಜ್ಞಾನ ಮತ್ತು ವೇದಾಂತಗಳಿಗಿರುವ ವ್ಯತ್ಯಾಸವನ್ನು ತುಲನಾತ್ಮಕ ದೃಷ್ಟಿಯಲ್ಲಿ ಚರ್ಚಿಸಿದ್ದಾರೆ. ವೇದಾಂತವು ಸ್ವಾಭಾವಿಕ ಸತ್ಯದೊಡನೆ ಪಾಲುಗೊಳ್ಳುವುದು. ಸತ್ಯಾನ್ವೇಷಣೆಯೇ ವೇದಾಂತದ ಗುರಿ. ವೇದಾಂತಿಯಾದವನು ಕೀರ್ತಿಗಾಗಲೀ, ಜಯಕ್ಕಾಗಲೀ ಶ್ರಮಿಸುವುದಿಲ್ಲ. ಸತ್ಯಾನ್ವೇಷಣೆಯನ್ನು ಮಾಡುವುದೇ ಅವನ ಕರ್ತವ್ಯ. ವಿಜ್ಞಾನವೂ ಕೂಡ ಇಂದಿನ ಜಗತ್ತಿಗೆ ಅವಶ್ಯಕವಾಗಿದೆ ಎಂಬ ವಿಷಯವನ್ನು ವಿವರಿಸುವರು. ದೇವರ ಇರುವಿಕೆಯ ಬಗ್ಗೆ ಪ್ಲೇಟೋ, ಪ್ಲಾಟಿನಸ್ ಮುಂತಾದ ದಾರ್ಶನಿಕರ ಅಭಿಪ್ರಾಯದಿಂದಲೂ, ವೇದೋಪನಿಷತ್ತುಗಳ ಆಧಾರದಿಂದಲೂ, ಆಧುನಿಕ ತತ್ವಜ್ಞಾನಿಗಳಾದ ಎಂ. ಬರ್ಗಸನ್, ಆಕ್ಸ್‌ಫರ್ಡಿನ ಡಾ|| ಎಫ್. ಸಿ. ಎಸ್. ಷ್ಕಿಲ್ಲರ್, ಅಮೆರಿಕಾದ ಪ್ರೊ|| ಹೌರಿಸನ್, ವಿಲಿಯಂ ಜೇಮ್ಸ್ ಮೊದಲಾದ ಆಧುನಿಕರ ಭಾವನೆಗಳೊಡನೆ ತಾರ್ಕಿಕವಾಗಿ ವಿಷಯಗಳನ್ನು ಸಮರ್ಥಿಸುತ್ತಾರೆ. ವಿಗ್ರಹಾರಾಧನೆ ಮತ್ತು ದ್ವೈತವಾದಗಳನ್ನು ಸ್ಪಷ್ಟಪಡಿಸಿ, ಏಕದೇವತ್ವವನ್ನು ಸಮರ್ಥಿಸುತ್ತಾರೆ.

ಈ ಪುಸ್ತಕದಲ್ಲಿ ಪೌರ್ವಾತ್ಯರ ಮತ್ತು ಪಾಶ್ಚಿಮಾತ್ಯರ, ಪುರಾತನ ಮತ್ತು ಆಧುನಿಕ ವೇದಾಂತಿಗಳೆಲ್ಲರ ಮತವೂ ಇರುವುದರಿಂದ ಪ್ರಪಂಚದ ಎಲ್ಲಾ ವಿಶ್ವವಿದ್ಯಾನಿಲಯದ ತತ್ವಶಾಸ್ತ್ರಾಭ್ಯಾಸಿಗಳಿಗೆ ಈ ಗ್ರಂಥವು ದಾರಿ ದೀಪದಂತಿದೆ.

ಈ ಪುಸ್ತಕವನ್ನು ಸುಪ್ರಸಿದ್ಧ ದಾರ್ಶನಿಕರಾದ ಜೆ. ಎಚ್. ಮೂರ್ ಹೆಡ್; ಜೆ. ಎಸ್. ಮ್ಯಾಕ್ಕೆನ್ ಜೈ; ಜೆ. ಇ. ಸಿ. ಎಂ. ಸಿ. ಟ್ಯಾಗರ್ಟ ಮುಂತಾದವರು ವಿಮರ್ಶಿಸಿದ್ದಾರೆ. ಈ ಗ್ರಂಥವನ್ನೋದಿದ ಅಮೆರಿಕಾದ ಪ್ರೊ॥ ಹ್ಯೂಮುಸ್‌ರವರು, ಅಮೆರಿಕಾದ ದಾರ್ಶನಿಕ ಸಮ್ಮೇಳನದಲ್ಲಿ ಅಧ್ಯಕ್ಷ ಭಾಷಣ ಮಾಡುತ್ತಾ “ಡಾ॥ ರಾಧಾಕೃಷ್ಣನ್‌ರವರು ಪೂರ್ವ ಮತ್ತು ಪಾಶ್ಚಿಮಾತ್ಯಗಳೆರಡರ ವೇದಾಂತ ಪ್ರತಿನಿಧಿಗಳಾಗಿದ್ದಾರೆ” ಎಂದು ಹೊಗಳಿದರು. ಆನಂತರ ಅಮೆರಿಕಾದ ದಾರ್ಶನಿಕ ಸಮ್ಮೇಳನವು ಸರ್ವ ಪಳ್ಳಿಯುವರನ್ನು ಗೌರವಿಸಲು ಆಹ್ವಾನಿಸಿತು.

ಅದೇ ವರುಷ ಮದರಾಸು ಸರ್ಕಾರವು ಒಂದು ದೊಡ್ಡ ಗೌರವವನ್ನು ಸರ್ವಪಳ್ಳಿಯುವರಿಗೆ ಕೊಟ್ಟಿತು. ‘ಭಾರತದ ವಿದ್ಯಾಭ್ಯಾಸದಲ್ಲಿ ಅತ್ಯುತ್ತಮ ಜ್ಞಾನಿಯೆಂದು’ ಮನ್ನಿಸಿತು. ಭಾರತದಲ್ಲಿ ಈ ಗೌರವವು ಪ್ರಪ್ರಥಮವಾಗಿ ಸರ್ವಪಳ್ಳಿಯುವರಿಗೆ ಸೇರಿತು.

ಮೈಸೂರಿನ ಸಂಬಂಧವು ಪ್ರಾಧ್ಯಾಪಕತನದಲ್ಲಿಯೇ ಮುಗಿಯಲಿಲ್ಲ. ಬೀಗತನವನ್ನೂ ಸಂಬಂಧಿಸಿತು. ಸರ್ವಪಳ್ಳಿಯುವರು ತಮ್ಮ ಹಿರಿಯ ಮಗಳನ್ನು ಆಗ ರೈಲ್ವೆ ಇಲಾಖೆಯಲ್ಲಿ ಇಂಜನಿಯರ್ ಆಗಿದ್ದ ನರಸಿಂಹನ್ ರವರ ಮಗ ಶ್ರೀನಿವಾಸಮೂರ್ತಿಯುವರಿಗೆ ಕೊಟ್ಟು ಮದುವೆಯನು ಮಾಡಿದರು.

1921ರಲ್ಲಿ ಕಲ್ಕತ್ತಾ ವಿಶ್ವವಿದ್ಯಾನಿಲಯದಿಂದ ಕರೆ ಬಂದಿತು. ಅಲ್ಲಿ ಮಾನಸಿಕ ಮತ್ತು ನೀತಿವಿಜ್ಞಾನದ ಪ್ರಾಧ್ಯಾಪಕರಾಗಿದ್ದ ಸರ್ ಬ್ರಜೇಂದ್ರನಾಥ್ ಸೀಲ್‌ರವರಿಗೆ ಮೈಸೂರು ವಿಶ್ವವಿದ್ಯಾನಿಲಯದ ಉಪ ಕುಲಪತಿಯ ಸ್ಥಾನವು ದೊರೆಯಿತು. ಆಗ ಅವರು ಆಸ್ಥಾನದಿಂದ ಬಿಡು ಗಡೆಯನ್ನು ಹೊಂದಿದರು. ಅಲ್ಲಿಯ ಮಾನಸಿಕ ಮತ್ತು ನೀತಿ ವಿಜ್ಞಾನದ ಪ್ರಾಧ್ಯಾಪಕ ಸ್ಥಾನವು ಶಿಕ್ಷಣ ತಜ್ಞರಾಗಿದ್ದ ಐದನೇ ಜಾರ್ಜರವರ ಪ್ರತಿನಿಧಿ

ಸ್ಥಾನವಾಗಿತ್ತು. ಶ್ರೀ ರಾಧಾಕೃಷ್ಣನ್ನರು ಮೈಸೂರಿನಿಂದ ಕಲ್ಕತ್ತಾಕ್ಕೆ ಹೊರಟರು.

ಇಷ್ಟರಲ್ಲಾಗಲೇ ಪಾಶ್ಚಿಮಾತ್ಯ ದೇಶಗಳಲ್ಲಿ ಸರ್ವಪಳ್ಳಿಯವರ ಕೀರ್ತಿಯು ಹರಡಿತ್ತು. 'ಮಾನವೀಯತೆಯು ಎಲ್ಲಾ ಸಾಹಿತ್ಯಗಳ ತಾಯಿ' ಎಂದು ಅವರೇ ಹೇಳುವಂತೆ ಇವರ ಎಲ್ಲಾ ಲೇಖನಗಳಲ್ಲೂ ಮಾನವೀಯತೆಯು ಕಾಣುತ್ತದೆ. ತನ್ನ ಧರ್ಮದ ಶ್ರೇಷ್ಠತೆಯನ್ನು ಹೊಗಳಿಕೊಳ್ಳುವಾಗ ಪರಧರ್ಮವನ್ನು ತಿರಸ್ಕರಿಸಿದರೆ, ಅದು ಧರ್ಮಾಂಧತೆಯಾಗುತ್ತದೆ. ಅಂತಹ ಕೀಳುಭಾವನೆಯು ಇವರದಲ್ಲ. ಆದುದರಿಂದಲೇ "ಬ್ರಿಟನ್ನಿನ ಸರ್ವಜ್ಞಾನಕೋಶ (Encyclopedia Britanica)ದಲ್ಲಿ ಅದರ ಸಂಪಾದಕರು ಇವರಿಗೆ ಅವಕಾಶ ನೀಡಿದುದು. ಭಾರತೀಯ ದರ್ಶನವನ್ನು (Indian Philosophy) ಬರೆದುಕೊಡಲು ಕೋರಿದರು. ರಾಧಾಕೃಷ್ಣನ್ನರು ಇಂತಹ ಒಂದು ಗ್ರಂಥವನ್ನು ಬರೆಯಲು ಹಾತೊರೆಯುತ್ತಿದ್ದರು. ಈಗ ಲೋಕವಿಖ್ಯಾತವಾದ ಸರ್ವಜ್ಞನ ಕೋಶದಲ್ಲಿ ಅವಕಾಶ ನೀಡಿದುದರಿಂದ ಅವರಿಗೆ ಮತ್ತಷ್ಟು ಸಂತೋಷವಾಯಿತು. ಭಾರತೀಯ ದರ್ಶನವು ಎರಡು ದೊಡ್ಡ ಸಂಪುಟಗಳಲ್ಲಿ ಪ್ರಕಟವಾಯಿತು. ಮೊದಲನೆಯದು 1923ರಲ್ಲಿ ಹೊರಬಂದಿತು.

ಈ ಗ್ರಂಥದಲ್ಲಿ ಎಂಟು ಮುಖ್ಯ ಅಧ್ಯಾಯಗಳಿವೆ. ಮೊದಲನೆಯ ಭಾಗವು ಪೀಠಿಕೆ. ಭಾರತದ ಸ್ವಾಭಾವಿಕ ಸ್ಥಿತಿ. ಆಲೋಚನೆಯಲ್ಲಿ ಭಾರತೀಯರ ಸ್ವಭಾವ. ಸಾಮಾನ್ಯ ಮನುಷ್ಯನ ಮನಸ್ಸನ್ನು ಶುದ್ಧಿ ಮಾಡಲು ವೇದಾಂತವು ಅನುಭವ ಮಾರ್ಗದಲ್ಲಿಟ್ಟಿರುವ ಆಚರಣೆಗಳು. ದರ್ಶನ ಶಾಸ್ತ್ರವನ್ನು ಓದುವುರಿಂದದಾಗುವ ಪ್ರಯೋಜನ. ಭಾರತೀಯರ ಆಲೋಚನಾ ಕಾಲ. ವೇದಗಳ ಕಾಲ ಮತ್ತು ಪುರಾಣಗಳ ಕಾಲವನ್ನು ವಿವರಿಸುವರು. ಅನಂತರ ಸೂತ್ರಗಳ ಕಾಲವನ್ನು ನಿರ್ಣಯಿಸಿ ಎರಡನೆಯ ಶತಮಾನದಲ್ಲಿದ್ದ ವಿದ್ಯಾಡಂಬರವನ್ನು ತಿಳಿಸುವರು.

'ಭಾರತಿಯ ವೇದಾಂತವು ಪರಾಶ್ರಯವಿಲ್ಲದೆ ತನ್ನ ಸ್ವಂತ ಕಾಲುಗಳ ಮೇಲೆ ನಿಂತಿದೆ. ಉಳಿದ ಎಲ್ಲಾ ಧರ್ಮಗಳೂ ಅದರ ತತ್ವಗಳ ಆಧಾರದ ಮೇಲೆ ಅದರ ಪ್ರಭೆಯನ್ನೇ ನೋಡುತ್ತಿವೆ! ಎಂದು ಹೇಳುವರು. ದೇಶಗಳ

ತಾರತಮ್ಯವಿದ್ದರೂ, ಆಯಾ ಕಾಲದ ಮಾನವರೆಲ್ಲರ ಅನುಭವದಲ್ಲಿ ಹೋಲಿಕೆಯಿರುತ್ತದೆ. ಅವರೆಲ್ಲರ ಗುರಿಯೂ ಒಂದೇ ಆಗಿದೆ ಎಂದು ಇತರ ಧರ್ಮಗಳಲ್ಲಿ ಕಾಣುವ ಸಾಮ್ಯದೃಷ್ಟಿಯನ್ನು ತಿಳಿಸುವರು. ಭಾರತಿಯ ವೇದಾಂತವು ಅಲೌಕಿಕವಾದುದು. ಅನೇಕ ವೇಳೆ, ಅನೇಕ ಪರಕೀಯರ ಧಾಳಿಗಳಾದರೂ ತನ್ನ ಧರ್ಮವನ್ನು ಕಳೆದುಕೊಂಡಿಲ್ಲ. ಭಾರತೀಯ ಧರ್ಮವು ಯಾವಾಗಲೂ ಪುರಾತನವಾದುದು ಮತ್ತು ಅಂತೆಯೇ ಆಧುನಿಕವಾದುದು. ಇಲ್ಲಿ ಆಧ್ಯಾತ್ಮಿಕ ಜೀವನವೇ ಸ್ಥಿರ ವಾದುದು. ಇಲ್ಲಿನ ರಾಜರು ಮತ್ತು ಸಮಾಜ ಸುಧಾರಕರೂ ಕೂಡ ವೇದಾಂತಿಗಳಾಗಿದ್ದಾರೆ. ಇಲ್ಲಿ ಜೀವನಕ್ಕೂ ಮತ್ತು ತತ್ವಕ್ಕೂ ನಿಜವಾದ ಸಂಬಂಧವಿದೆ. ಅದನ್ನರಿಯಲು ಆಧ್ಯಾತ್ಮಿಕ ಮಾರ್ಗವನ್ನವಲಂಬಿಸ ಬೇಕು ಎಂದು ನಮ್ಮ ಪುರಾತನ ವಿದ್ಯಾಭ್ಯಾಸವು ತಿಳಿಸುತ್ತದೆ. 'ನಮ್ಮ ಸುಖ ಮತ್ತು ದುಃಖ, ಸದ್ಗುಣ ಮತ್ತು ದುರ್ಗುಣ, ಒಳ್ಳೆಯದು ಮತ್ತು ಕೆಟ್ಟದ್ದು, ಇವೆಲ್ಲವನ್ನೂ ಮೀರಿದ ಒಂದು ಶಕ್ತಿಯಿದೆ' ಎಂದು ಈ ಅಧ್ಯಾಯ ದಲ್ಲಿ ತಿಳಿಸುವರು.

ಎರಡನೆಯ ಅಧ್ಯಾಯದಲ್ಲಿ ಋಗ್ವೇದ, ಯಜುರ್ವೇದ, ಸಾಮವೇದ ಮತ್ತು ಅಥರ್ವಣ ವೇದಗಳ ಸಾರವನ್ನೂ ಅದರ ಕರ್ತವ್ಯಗಳನ್ನೂ ತಿಳಿಸು ವರು. ಅನಂತರ ಬ್ರಾಹ್ಮಣಗಳ, ಉಪನಿಷತ್ತುಗಳ ಮತ್ತು ವೇದಗಳ ಅಭ್ಯಾಸದ ರೀತಿಯನ್ನೂ, ದಾರ್ಶನಿಕ ಪ್ರವೃತ್ತಿಯನ್ನೂ ವಿವರಿಸುವರು. ಬ್ರಹ್ಮವಿದ್ಯೆಯನ್ನು ತಿಳಿಸುತ್ತಾ ಮನುಷ್ಯನು ತನ್ನ ಭಾವನೆಯಿಂದ ಇಂದ್ರ, ವರುಣ, ಸೋಮ ಮುಂತಾದ ದೇವರುಗಳನ್ನು ಕಲ್ಪಿಸುವುದರಲ್ಲಿ ಮಗ್ನ ನಾದನು. ಕಾಲಾನಂತರ ಜನತೆಯಲ್ಲಿ ಏಕೇಶ್ವರವಾದವು ಹುಟ್ಟಿತು. ಅನೇಕ ದೇವರುಗಳ ಹೆಸರು ಸೃಷ್ಟಿಯಾದುದರಿಂದ ಜನರಿಗೆ ಯಾವ ದೇವರು ಮುಖ್ಯವೆಂಬ ಸಂದೇಹವು ಬಂದಿತು. ವಿವೇಕವು ಬಲಿತಂತೆ, ನಮ್ಮ ಹಿರಿಯರು ವಿಶ್ವಭಾವನೆಗೆ ಅನುಗುಣವಾದ ವಿಶ್ವೋತ್ಪತ್ತಿ ಶಾಸ್ತ್ರ ವನ್ನು ರಚಿಸಿದ ವಿಷಯವನ್ನು ತಿಳಿಸುವರು. ದೇವಸ್ಥಾನಗಳು ಮತೀಯ ದೃಷ್ಟಿಯುಳ್ಳವುಗಳಾದರೂ ದೇವರಿಗೂ ಮನುಷ್ಯನಿಗೂ ಹತ್ತಿರ ಸಂಬಂಧ ವನ್ನುಂಟುಮಾಡುತ್ತವೆ. ಪುರುಷ ಸೂಕ್ತದ ಕಾಲದಲ್ಲಿ ಹಿಂದೂ ಸಮಾಜವು

ಬ್ರಹ್ಮ ಕ್ಷತ್ರಿಯ ವೈಶ್ಯ ಮತ್ತು ಶೂದ್ರರೆಂದು ನಾಲ್ಕು ವರ್ಣಗಳಾಗುತ್ತವೆ. ಎಂದು ಹೇಳಿ ಜನತೆಯಲ್ಲಿ ಪುನರ್ಜನನದ ನಂಬಿಕೆ, ಸ್ವರ್ಗ ಮತ್ತು ನರಕಗಳ ಕಲ್ಪನೆಯಾದ ಬಗೆಯನ್ನು ತಿಳಿಸುವರು.

ಮೂರನೆಯ ಅಧ್ಯಾಯದಲ್ಲಿ—ಉಪನಿಷತ್ತುಗಳ ಸಂಕ್ರಮಣವನ್ನು ಹೇಳುವರು. ಅಥರ್ವಣವೇದವು ಮಾಯಾ, ಮಂತ್ರಗಳ ಮಯವಾಗಿ, ವಿಜ್ಞಾನದ ಮಾತೃಕೆಯಾಗಿರುವುದನ್ನು ವಿವರಿಸುವರು. ಯಜುರ್ವೇದ ಮತ್ತು ಬ್ರಾಹ್ಮಣಗಳು ವಿಷ್ಣುವಿಗೆ ಕೊಟ್ಟ ಪ್ರಾಶಸ್ತ್ಯವನ್ನೂ, ಅನಂತರ ಜನತೆಯಲ್ಲಿ ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ ಮತ್ತು ಸಂನ್ಯಾಸ ಎಂಬ ನಾಲ್ಕು ಆಶ್ರಮಗಳು ರೂಢಿಗೆ ಬಂದ ರೀತಿಯನ್ನು ತಿಳಿಸುವರು.

ನಾಲ್ಕನೆಯ ಅಧ್ಯಾಯದಲ್ಲಿ—ಉಪನಿಷತ್ತುಗಳು ಹುಟ್ಟಿದ ಕಾಲ, ಅದರ ತತ್ವಗಳು ಮತ್ತು ಅದರಿಂದಾದ ಸಮಸ್ಯೆಗಳನ್ನು ತಿಳಿಸುವರು ಆತ್ಮ, ಶರೀರ, ಕನಸು ಇವುಗಳ ಬಗೆಗೆ ಶಂಕರಾಚಾರ್ಯ, ಆನಂದ ಮತ್ತು ರಾಮಾನುಜರ ಅಭಿಪ್ರಾಯದೊಡನೆ ವಿವರಣೆ ಕೊಡುವರು. ಮಾನವನಿಗೆ ಮೋಕ್ಷಕ್ಕಿಂತ ಮಿಗಿಲಾದ ಫಲವಿಲ್ಲ. ಅದನ್ನು ಸಾಧಿಸಲು ಕರ್ಮವೇ ಸಾಧನವೆಂಬುದನ್ನು ಹೇಳುವರು.

ಐದನೆಯ ಅಧ್ಯಾಯದಲ್ಲಿ — ಪುರಾಣಗಳ ಕಾಲವನ್ನು ತಿಳಿಸಿ ಚಾರ್ವಾಕ, ಜೈನ, ಬೌದ್ಧ ಗ್ರಂಥಗಳ ಮತ್ತು ಭಗವದ್ಗೀತೆಗಳ ಅಭಿಪ್ರಾಯ, ವನ್ನು ಹೇಳುವರು ಆರನೆಯ ಅಧ್ಯಾಯದಲ್ಲಿ ಜೈನರ ದ್ವೈತವಾದವನ್ನೂ ಏಳನೆಯ ಅಧ್ಯಾಯದಲ್ಲಿ ಆದಿಕಾಲದ ಆಧ್ಯಾತ್ಮಿಕವಾದವನ್ನೂ ತಿಳಿಸುವರು ಪುರಾತನ ಬೌದ್ಧಮತದ ವಾದವನ್ನೂ, ಅದರ ಕ್ರಾಂತಿ ಮತ್ತು ಅದರ ಸಾಹಿತ್ಯಗಳನ್ನು ವಿವೇಚಿಸುವರು. ಬೌದ್ಧಮತ ಗ್ರಂಥಗಳಿಗೂ, ಉಪನಿಷತ್ತುಗಳಿಗೂ ಇರುವ ಹೋಲಿಕೆಯನ್ನೂ ನಾಗಸೇನ ಮತ್ತು ಮಿಳಂದನ ವಾದಗಳನ್ನೂ ಚರ್ಚಿಸುವರು. ಎಂಟನೆಯ ಅಧ್ಯಾಯದಲ್ಲಿ—ವೇದಾಂತದಲ್ಲಿನ ಆಧ್ಯಾತ್ಮಿಕ ವಿಚಾರಗಳನ್ನೂ, ರಾಮಾಯಣ ಮಹಾಭಾರತಗಳ ಪ್ರಾಮುಖ್ಯತೆಯನ್ನೂ ವಿವರಿಸುವರು.

ಈ ಗ್ರಂಥದಲ್ಲಿ ಎಂದೆಂದೂ ಸ್ಥಿರವಾಗಿರಬಲ್ಲ ವಿಶ್ವಶಾಂತಿಯನ್ನೇ ಸಾಧಿಸಿದ್ದಾರೆ ಪ್ರತಿಯೊಬ್ಬನೂ ಚೈತನ್ಯದಾಯಕ ವಸ್ತುಗಳ ಮೇಲೆ,

ಮಾನವನ ಮನಸ್ಸಿನ ಮೇಲೆ ವಿಶ್ವಾಸವಿಡುವುದು ಒಳ್ಳೆಯದು. ಆಗಲೇ ಪ್ರಪಂಚವು ಬಹಳಕಾಲ ಬಾಳೀತು; ಮಾನವಕುಲವೆಲ್ಲವೂ ಒಂದಾದೀತು! ಭಾರತೀಯ ವೇದಾಂತವು ಯಾವಾಗಲೂ ಹೊರ ಉಡುಪಿನಂತೆ ಕಾಣತಕ್ಕದ್ದಲ್ಲ. ಆದರೆ ಆಯಾ ಕಾಲಕ್ಕನುಗುಣವಾಗಿ ವ್ಯವಹಾರಕ್ಕನುಗುಣವಾಗಿ ಬೆಳೆಯುತ್ತಾ ದೇವರ ಸಾಕ್ಷಾತ್ಕಾರಕ್ಕಾಗಿ ಪ್ರಯತ್ನ ನಡುತ್ತಿದೆ. ಇದರ ಭಾವನೆಗಳು ಅವಿಚ್ಛಿನ್ನವಾಗಿ ಯುಗಾಂತರಗಳಿಂದ ವಿಶಾಲವಾಗುತ್ತಿದೆ. ಎಂಬ ವಿಷಯವನ್ನು ಈ ಸಂಪುಟ ಸ್ಪಷ್ಟಪಡಿಸಿತು.

1924ರಲ್ಲಿ ಶಂಕರಾಚಾರ್ಯರ ಮತ್ತು ರಾಮಾನುಜಾಚಾರ್ಯರ ಅಭಿಪ್ರಾಯದಲ್ಲಿ ವೇದಾಂತ (The Vedantha according to the Shankara and Ramanuja) ಎಂಬ ಮತ್ತೊಂದು ಗ್ರಂಥವನ್ನು ಹೊರತಂದರು.

ಇವರ ಭಾರತೀಯ ದರ್ಶನದ ಎರಡನೆಯ ಸಂಪುಟವು 1927ರಲ್ಲಿ ಮುಕ್ತಾಯವಾಯಿತು. ಇದರಲ್ಲಿ ಹನ್ನೊಂದು ಅಧ್ಯಾಯಗಳಿವೆ. ಮೊದಲನೆಯ ಅಧ್ಯಾಯದಲ್ಲಿ, ನಾಗರೀಕತೆಯ ಹುಟ್ಟು ಮತ್ತು ಸಂಬಂಧವನ್ನು ವಿವರಿಸಿ, ವೇದ ಮತ್ತು ಸೂತ್ರಗಳ ಸಾಮಾನ್ಯ ಜ್ಞಾನವನ್ನು ತಿಳಿಸುತ್ತಾ ತತ್ವಶಾಸ್ತ್ರಾಭ್ಯಾಸವು ನಮ್ಮನ್ನು ಪರಲೋಕದ ಕಡೆಗೆ ಕರೆದೊಯ್ಯುತ್ತದೆ. ಎಂಬ ವಿಷಯವನ್ನು ಹೇಳುವರು.

ಎರಡನೆಯ ಅಧ್ಯಾಯದಲ್ಲಿ ನ್ಯಾಯಶಾಸ್ತ್ರ, ಅದರ ವೈಶಿಷ್ಟ್ಯ, ಅದರ ಪ್ರಾರಂಭ, ಅದರ ಸಾಹಿತ್ಯ, ಅದರ ಚರಿತ್ರೆ, ಅದರ ಗುರಿ, ಅದರ ಸ್ವಭಾವ, ಅದರ ನಿಯಮ, ಅದರ ವಿವರಣೆ, ಅದರಲ್ಲಿ ಬರುವ ಅನುಮಾನ, ಮತ್ತು ಐತಿಹ್ಯ, ಅರ್ಥಾಪತ್ತಿ, ಸಂಭವ, ಅಭವ ಮುಂತಾದುವುಗಳನ್ನು ಚರ್ಚಿಸಿದ್ದಾರೆ. ನ್ಯಾಯಶಾಸ್ತ್ರದ ಇತಿಹಾಸವು ಸುಮಾರು ಇಪ್ಪತ್ತು ಶತಮಾನಗಳಿಗಿಂತ ಹಿಂದಿನಿಂದಲೂ, ಭಾರತದಲ್ಲಿದೆ. ಅದರಲ್ಲಿ ವಾತ್ಸ್ಯಾಯನ, ಗೌತಮ, ಧರ್ಮಕೀರ್ತಿ, ಜಯಂತ ಮತ್ತು ಪ್ರಭಾಕರರ ಪಾತ್ರವು ಹೆಚ್ಚಿನದು ಎಂಬುದನ್ನು ಸಮರ್ಥಿಸಿದ್ದಾರೆ.

ಮೂರನೆಯ ಅಧ್ಯಾಯದಲ್ಲಿ, ದ್ರವ್ಯಗುಣ, ಮತ್ತು ಆತ್ಮದ ವಿವರಣೆಯಿದೆ. ನಾಲ್ಕನೆಯದರಲ್ಲಿ ಪ್ರಕೃತಿಗುಣ, ಪುರುಷ ಮತ್ತು ಪ್ರಕೃತಿಯ

ಸಂಬಂಧಗಳನ್ನು ವಿವರಿಸಿ, ಜೀವ, ಆತ್ಮ, ಭಕ್ತಿ, ಮತ್ತು ಮುಕ್ತಿಯ ರೀತಿ ನೀತಿಗಳನ್ನು ತಿಳಿಸಿ, ದೇವತೆಗಳ ವಿವರಣೆಯನ್ನು ಕೊಡುತ್ತಾರೆ.

ಐದನೆಯದರಲ್ಲಿ ಪತಂಜಲಿಯ ಮತಾನುಸಾರ ಯೋಗದ ವಿವರಣೆಯನ್ನು ಕೊಡುವರು. ಅನಂತರ ಕರ್ಮವನ್ನು ಮಾಡುವ ರೀತಿಯನ್ನು ಹೇಳುವರು. ಎಲ್ಲಿಯತನಕ ಅವಿದ್ಯೆಯು ಹೋಗುವುದಿಲ್ಲವೋ, ಅಲ್ಲಿಯತನಕ ಸಂಸಾರ ಬಂಧನವು ಹೋಗುವುದಿಲ್ಲ ಎಂದು ತಿಳಿಸಿ, ಅದರಲ್ಲಿ ಹೇತುಫಲ, ಆಶ್ರಯ ಮುಂತಾದ ವಿಷಯಗಳನ್ನು ವಿವರಿಸುವರು.

ಆರನೆಯ ಅಧ್ಯಾಯದಲ್ಲಿ ಜ್ಞಾನದ ವಿವರಣೆಯನ್ನು, ಏಳನೆಯ ಅಧ್ಯಾಯದಲ್ಲಿ ವೇದಾಂತ ವಿಷಯವನ್ನೂ, ಸೂತ್ರಗಳ ಸಂಬಂಧವನ್ನೂ ತಿಳಿಸುವರು. ಮುಂದುವರಿದು, ವಿದ್ಯಾಸಂಸ್ಥೆ, ಬ್ರಹ್ಮ, ಪ್ರಪಂಚ, ಮತ್ತು ಮೋಕ್ಷಗಳ ಬಗ್ಗೆ ತಮ್ಮ ಅಭಿಪ್ರಾಯವನ್ನು ಕೊಡುವರು

ಎಂಟನೆಯ ಅಧ್ಯಾಯದಲ್ಲಿ ಶಂಕರಾಚಾರ್ಯರ ಅದ್ವೈತ ವೇದಾಂತವನ್ನೂ ಒಂಭತ್ತನೇ ಅಧ್ಯಾಯದಲ್ಲಿ ರಾಮಾನುಜಾಚಾರ್ಯರ ಮತಾನುಸರಣೆಯನ್ನೂ ಹತ್ತನೆಯ ಅಧ್ಯಾಯದಲ್ಲಿ ಶೈವ, ಶಕ್ತಿ, ಮತ್ತು ವೈಷ್ಣವ ಮತಗಳು ಹುಟ್ಟಿದ ರೀತಿಯನ್ನೂ ಕೇಳಿ ಹನ್ನೊಂದನೆಯ ಅಧ್ಯಾಯದಲ್ಲಿ ಗ್ರಂಥ ಸಮಾಪ್ತಿಯನ್ನು ಮಾಡುವರು.

ಭಾರತೀಯ ತತ್ವಶಾಸ್ತ್ರವು ತಾತ್ಕಾಲಿಕ ಸಮರ್ಥನೆ ಮತ್ತು ಅರ್ಥವನ್ನು ಹೊಂದಿರುವುದಲ್ಲದೆ ಮುಂದೆಯೂ ಮಾನ್ಯತೆಯನ್ನು ಹೊಂದುವ ತತ್ವವುಳ್ಳದ್ದಾಗಿದೆ. ಇದರಲ್ಲಿ ಸಂಕುಚಿತವಾದ ಭಾವನೆಯಿಲ್ಲ. ಬೇರೆ ಬೇರೆ ಜನರ, ಧರ್ಮಗಳ ಉತ್ತಮ ತತ್ವಗಳನ್ನು ಸೇರಿಸಿಕೊಳ್ಳುತ್ತದೆ. ಸದಾ ಚಲನೆಯಲ್ಲಿರುತ್ತದೆ. ಕಾಲಕಾಲಕ್ಕೆ ಹರಿತವಾಗುತ್ತಿರುತ್ತದೆ. ಈ ಧರ್ಮವು ನಾನಾ ಹೆಸರಿನಲ್ಲಿ ಬೆಳೆದರೂ ಒಗ್ಗಟ್ಟನ್ನು ಯಾವಾಗಲೂ ಸೂಚಿಸುತ್ತಿರುತ್ತದೆ. ಇದು ಪೂರ್ವ ಮತ್ತು ಪಶ್ಚಿಮ ತತ್ವಗಳೆಲ್ಲದರ ಸಂಬಂಧವನ್ನು ಹೊಂದಿದೆ. ಎಂಬ ವಿಷಯವನ್ನು ಈ ಗ್ರಂಥದಲ್ಲಿ ಸಮರ್ಥಿಸಿದ್ದಾರೆ.

ಇದರಿಂದ ಪ್ರಪಂಚದ ಎಲ್ಲಾ ವೇದಾಂತಿಗಳೂ ಭಾರತದ ವೇದಾಂತದ ಕಡೆಗೆ ಹೆಚ್ಚು ಆಸಕ್ತಿಯನ್ನು ವಹಿಸಿದರು. ಇಂದು ಈ ಗ್ರಂಥವು ಒಂದೆರಡು ದೇಶಗಳಿಗೆ ಮಾತ್ರ ಉಪಯುಕ್ತವಾಗಿಲ್ಲದೆ ಇಡೀ ಪ್ರಪಂಚಕ್ಕೇ ಉಪ

ಯೋಗವಾಗುತ್ತಿದೆ ಇದಕ್ಕೆ ಕಾರಣ—ಈ ಗ್ರಂಥದಲ್ಲಿ, ಪ್ರಪಂಚದಲ್ಲಿರುವ ಮುಖ್ಯವಾದ ಇಪ್ಪತ್ತು ಧರ್ಮಗಳನ್ನು ಇವರು ವಿಮರ್ಶಿಸಿ, ಅವುಗಳಲ್ಲಿರುವ ಉತ್ತಮ ತತ್ವಗಳನ್ನು ಪ್ರತಿಪಾದಿಸಿದ್ದಾರೆ. ಅವುಗಳಲ್ಲಿರುವ ಲೋಪದೋಷ ಗಳನ್ನೂ ನಿರರ್ಥಕವಾದ ಆಚಾರಗಳನ್ನೂ, ಧರ್ಮಾಂಧತೆಗಳನ್ನೂ ಟೀಕಿಸಿ ದ್ದಾರೆ. ಆಗ ಅವರಿಗೆ ಕೇವಲ ಮೂವತ್ತಮೂರು ವರುಷಗಳು ಮಾತ್ರ. ಇಷ್ಟು ಸಣ್ಣವಯಸ್ಸಿಗೆ ಇತಿಹಾಸದಲ್ಲಾದರೂ, ಇಂತಹ ಒಂದು ಅಮೂಲ್ಯ ಗ್ರಂಥವನ್ನು ಹೊರತಂದಿರಲಿಲ್ಲ.

---

# ಉತ್ತಮ ವಾಗ್ಮಿ

ರಾಧಾಕೃಷ್ಣನ್ನರು ಉತ್ತಮ ಶಿಕ್ಷಕರಾದುದಕ್ಕೂ ಮತ್ತು ಲೋಕ ವಿಖ್ಯಾತರಾದುದಕ್ಕೂ ಅವರಲ್ಲಿರುವ ಉತ್ತಮ ಉಪನ್ಯಾಸ ಕಲೆಯೂ ಒಂದು ಮಹತ್ತರವಾದ ಕಾರಣವಾಗಿದೆ. ಒಬ್ಬ ಮನುಷ್ಯನು ಅಪಾರ ವಿದ್ಯೆಯನ್ನು ಹೊಂದಿ ಮಹಾ ಜ್ಞಾನಿಯೇ ಆಗಿರಬಹುದು. ತನ್ನಲ್ಲಿರುವ ಜ್ಞಾನವನ್ನು ಸಾಮಾನ್ಯ ಜನತೆಗೆ ಅರ್ಥವಾಗುವಂತೆ ಹೇಳುವ ಗುಣವು ಅವನಲ್ಲಿರದಿದ್ದರೆ ಪ್ರಯೋಜನವೇನು ಬಂತು? ಮತ್ತೆ ಕೆಲವರು ಪ್ರಯತ್ನ ಪಟ್ಟು ಸ್ವಚ್ಛವಾದ ಭಾಷೆಯ ಉಚ್ಚಾರಣೆಯನ್ನು ಕಲಿತಿರುತ್ತಾರೆ. ಅವರಲ್ಲಿ ಆಳವಾದ ಪಾಂಡಿತ್ಯವಿಲ್ಲದೇ ಇರಬಹುದು. ಜನತೆಯ ಮನಸ್ಸನ್ನು ಆಕರ್ಷಿಸುವ ಶಕ್ತಿಯೂ ಅದರ ಜೊತೆಗೆ ಇರಬೇಕಲ್ಲವೆ? ಇಷ್ಟೆಲ್ಲವನ್ನೂ ಅಭ್ಯಾಸಮಾಡಿದ್ದರೂ ದೈವದತ್ತವಾದ ಇಂಪಾದ ಧ್ವನಿಯಿರದೆ ಕರ್ಕಶ ಧ್ವನಿಯಿದ್ದರೆ ಪ್ರಯೋಜನವೇನು? ಇದೂ ಕೂಡ ಇದ್ದಿತೆನ್ನಿ! ಆಕರ್ಷಕ ವಾದ ವ್ಯಕ್ತಿತ್ವವಿರದಿದ್ದರೆ ನಿಷ್ಪ್ರಯೋಜನವಾಗುತ್ತದೆ. ಒಣಕಲು ಶರೀರ, ವಕ್ರವಾದ ರೂಪು, ಅತಿ ಆಡಂಬರವಾದ ಉಡುವು ಅಥವಾ ಕೊಳಕುತನ ವಿದ್ದರೆ ಜನತೆಗೆ ತಾತ್ಸಾರ ಭಾವನೆಯು ಬರುತ್ತದೆ. ಇಷ್ಟೆಲ್ಲಾ ಉತ್ತಮ ಗುಣಗಳನ್ನೂ ಹೊಂದಿ, ಆಳವಾದ ವಿಷಯ ಜ್ಞಾನವಿಲ್ಲದಿದ್ದರಂತೂ ಪರಿ ಹಾಸ್ಯಕ್ಕೆ ಕಾರಣವಾಗುತ್ತದೆ. ಇವೆಲ್ಲದರ ಜೊತೆಗೆ, ಉತ್ತಮ ಉಪ ನ್ಯಾಸಕನಿಗೆ ಸಭಿಕರ ಆಶೆ, ಆಕಾಂಕ್ಷೆ, ಸ್ಥಳ, ವಾತಾವರಣ ಮುಂತಾದುವು ಗಳನ್ನು ಅರಿಯಬಲ್ಲ ಮನಶಾಸ್ತ್ರ ಪರಿಚಯವಿರಬೇಕು. ಇವೆಲ್ಲಕ್ಕಿಂತಲೂ ಮಿಗಿಲಾಗಿ, ಒರಿಯ ಗಾಂಭೀರ್ಯವನ್ನು ತೋರಿ ಕೊಳಗದಿಂದ ಧಾನ್ಯವನ್ನು ಸುರಿದಂತೆ ವಿಷಯವನ್ನು ಹೇಳುತ್ತಾ ಹೋದರೂ ಶ್ರೋತೃಗಳ ಮನಸನ್ನು ಗೆಲ್ಲಲಾಗದು. ಅದಕ್ಕಾಗಿಯೇ ಕೆಲವರು ಉಪನ್ಯಾಸವು ಒಂದು ಉತ್ತಮ ಕಲೆಯೆಂದು ಹೇಳುವರು. ಸಂದರ್ಭಕ್ಕನುಸಾರವಾಗಿ ಮುಖಭಾವವನು ಮಾರ್ಪಡಿಸಿಕೊಳ್ಳುವ ಶಕ್ತಿಯಿರಬೇಕು. ವಿಷಯ ಮತ್ತು ಭಾವನೆಗನು ಗುಣವಾಗಿ ಮಾತನಾಡುವ ಶೈಲಿಯನ್ನು ಬದಲಾಯಿಸಿಕೊಳ್ಳಬೇಕು.

ಗಹನವಾದ ವಿಷಯವನ್ನು ಅನುಭವದ ಅಥವಾ ಬಳಕೆಯ ಮಾತುಗಳಿಂದ ಸ್ವಾರಸ್ಯವಾದ ಪುಟ್ಟ ಕಥೆಗಳಿಂದ, ಲೋಕರೂಢಿಯ ಉದಾಹರಣೆಗಳಿಂದ ವಿಷಯಗಳನ್ನು ವಿವರಿಸಬೇಕು. ದೇವರು ಈ ಗುಣಗಳೆಲ್ಲವನ್ನು ಒಬ್ಬ ಉಪನ್ಯಾಸಕನಿಗೆ ಕೊಟ್ಟಿದ್ದಾನೆಂದುಕೊಳ್ಳೋಣ; ಅವನ ಪ್ರತಿಯೊಂದು ಮಾತಿನಲ್ಲೂ ಸತ್ಯತೆಯು ಇದೆ ಎಂದು ಭಾವಿಸೋಣ; ತಾನು ಹೇಳುವುದನ್ನು ತಾನೆ ಆಚರಣೆಯಲ್ಲಿಟ್ಟುಕೊಳ್ಳದೆ, ನಾನು ಹೇಳಿದಂತೆ ಮಾಡು ನಾನು ಮಾಡಿದಂತೆ ಮಾಡಬೇಡವೆಂದರೆ, ಅಂತಹವರ ಉಪನ್ಯಾಸವು ಎಷ್ಟರಮಟ್ಟಿಗೆ ಫಲಕಾರಿಯಾಗಬಹುದು ಎಂಬುದನ್ನು ನಾವೇ ಆಲೋಚಿಸಬಹುದು. ಈ ವಿಶೇಷ ಗುಣಗಳಿದ್ದು, ವಿನಯವಿಲ್ಲದಿದ್ದರೆ ಅವನ ಸರ್ವ ವಿದ್ಯೆಯೂ ವ್ಯರ್ಥವಾದಂತೆಯೇ; ದುರಹಂಕಾರಿಯ, ಅಹಂಭಾವವುಳ್ಳವನ ಉಪದೇಶವನ್ನು ಯಾರು ತಾನೆ ಕೇಳಲಾದೀತು. ಇದರಿಂದ ಉಪನ್ಯಾಸಕರಲ್ಲಿರಬೇಕಾದ ಸಾಮಾನ್ಯ ಗುಣಗಳನ್ನು ತಿಳಿದಂತಾಯಿತು.

ಈ ಗುಣಗಳನ್ನೆಲ್ಲವನ್ನು ನಾವು ಸಾಮಾನ್ಯವಾಗಿ ಸರ್ವಪಳ್ಳಿಯವರಲ್ಲಿ ಕಾಣುತ್ತೇವೆ. ಪಾಂಡಿತ್ಯ ವಿಷಯದಲ್ಲಂತೂ ಜಗತ್ತಿನ ಯಾವ ವಿದ್ವಾಂಸರೂ ಕೂಡ ಇವರಲ್ಲಿ ಕಳಂಕವನ್ನು ತೋರುವಂತಿಲ್ಲ. ಪ್ರಪಂಚದ ಎಲ್ಲಾ ಧರ್ಮಗಳನ್ನೂ ಜೀರ್ಣಿಸಿಕೊಂಡಿದ್ದಾರೆ. ಸಂಸ್ಕೃತದಲ್ಲಂತೂ ಆಳವಾದ ಪಾಂಡಿತ್ಯವಿದೆ. ಆಂಗ್ಲ ಭಾಷೆಯಲ್ಲಿ ಆಂಗ್ಲನಿಗೆ ತಲೆಬಾಗುವಂತಿಲ್ಲ. ಪ್ರಪಂಚದ ಎಲ್ಲಾ ಸಾಹಿತ್ಯ ಪರಿಚಯವನ್ನು ಪಡೆದಿದ್ದಾರೆ. ಇವರಿಗೆ ರಾಜಕೀಯವಾಗಲೀ. ಇತಿಹಾಸವಾಗಲೀ, ವಿಜ್ಞಾನವಾಗಲೀ, ಕಲೆಯೇ ಆಗಲೀ, ನಾಟಕವೇ ಆಗಲೀ, ಗೊತ್ತಿಲ್ಲವೆಂದಲ್ಲ. ಯಾವ ಕ್ಷಣದಲ್ಲಿ ಯಾವ ವಿಷಯದ ಬಗ್ಗೆ ಮಾತನಾಡಬೇಕೆಂದರೂ ಸಿದ್ಧರಾಗುತ್ತಾರೆ. ಅವರಿಗೆ ಪೂರ್ವಸಿದ್ಧತೆಯೇ ಬೇಕಾಗಿಲ್ಲ.

ಇನ್ನು ಅದನ್ನು ತಿಳಿಸುವುದರ ಬಗ್ಗೆ ಯೋಚಿಸುವುದಾದರೆ, ಸಭೆಯಲ್ಲಿ ಅವರು ಎದ್ದು ನಿಂತರೆ ಸಾಕು! ಶ್ರೋತೃಗಳ ಕಣ್ಮನಗಳನ್ನು ಸೂರೆಗೊಳ್ಳುತ್ತಾರೆ. ಅವರ ಸ್ವಚ್ಛವಾದ ಉಡುಪು, ಅವರ ಹೃದಯ ಸ್ವಚ್ಛತೆಯನ್ನು ತಿಳಿಸುತ್ತದೆ. ನಿರಾಡಂಬರವನ್ನು ಪ್ರತಿಬಿಂಬಿಸುತ್ತದೆ. ನೀಳವಾದ

ವೈಕಟ್ಟು, ಜ್ಞಾನವೆಂಬ ಬೆಳಕನ್ನು ಬೆಳಗುವ ಮೆಲುನಗೆಯ ಶಾಂತವಾದ ಮುಖ. ಈ ಗುಣಗಳ ಒಕ್ಕೂಟವು ಯಾರನ್ನು ತಾನೆ ಗೆಲ್ಲಲಾರದು?

ಅವರು ಬಾಯಿತೆಗೆದರೆ ಸಾಕು! ಕಂಚಿನ ನಾದ ಬರುತ್ತದೆ. ಎಲ್ಲರ ಕಿವಿಗಳೂ ಅತ್ತ ತಿರುಗುತ್ತವೆ ಆದರ ಮುಂದೆ ಮತ್ತಾವ ಶಬ್ದವೂ ನಾನೆನ್ನು ವಂತಿಲ್ಲ. ಉಪನ್ಯಾಸದ ವಿಷಯವು ಧಾರೆಯಾಗಿ ಬರುತ್ತಿರುತ್ತದೆ. ಮಾತಿ ನಲ್ಲಿ ಒಂದು ಅಪಶಬ್ಧವಿಲ್ಲ. ಅನವಶ್ಯಕವಾದ ಪದವಿಲ್ಲ. ಪ್ರತಿಯೊಂದು ಪದವೂ ಜೀವಂತವಾಗಿರುತ್ತದೆ. ಅವರ ಮಾತಿನಿಂದ ಮತ್ತಾರಿಗೂ ನೋವಾಗುವಂತಿಲ್ಲ. ಅವರ ಮುಖ ಭಾವವು ಸೌಮ್ಯ ಮೂರ್ತಿಯಾಗಿ ದ್ದರೂ ಸಂದರ್ಭಾನುಸಾರ ಭಾವನೆಗನುಗುಣವಾಗಿ ನಾಟಕೀಯತೆಗೆ ಕಡಿಮೆಯೇನಲ್ಲ. ಅಂದರೆ, ಮುಖಭಾವವು ಮಾರ್ಪಡುವುದು ಕೃತ್ರಿಮ ದಿಂದಲ್ಲ. ಸಂದರ್ಭದ ಭಾವನೆಯನ್ನು ತಾವು ಮನಸ್ಸಿನಲ್ಲಿ ಅನುಭವಿಸುವುದ ರಿಂದ ಮುಖದಲ್ಲಿ ಕಾಣುವ ವಿಕಾರವದು.

ಇವರು ಯಾವ ದೇಶಕ್ಕೆ ಹೋಗಲಿ, ಅವರನ್ನು ತನ್ನವರನ್ನಾಗಿ ಮಾಡಿಕೊಳ್ಳುವ ಶಕ್ತಿಯು ಇವರಿಗಿದೆ. ಎಲ್ಲರ ಹೃದಯವನ್ನು ಹೊಕ್ಕು ತಾವೇ ತಾವಾಗಿ ಉಳಿಯುವರು. ಮಾತನಾಡುವಾಗ ಆಯಾಸ್ಥಳದ, ಆಯಾ ದೇಶದ, ಪ್ರಕೃತಿಯನ್ನು, ಧಾರ್ಮಿಕ ವಿಷಯಗಳನ್ನು ತೆಗೆದು ಕೊಂಡು ಮಾತನಾಡುವರು. ಪ್ರಪಂಚದ ಎಲ್ಲಾ ಧರ್ಮಗಳ ಸಾರವೂ ಒಂದೇ ಎಂಬುದನ್ನು ತೋರುವರು. ಆದರೆ, ಭಾರತಿಯ ಧರ್ಮದ ಗೌರ ವಕ್ಕೆ ಚ್ಯುತಿಯು ಬರುವುದಾದರೆ ಸಹಿಸರು. ಅಸತ್ಯ ಮತ್ತು ಅನ್ಯಾಯ ಗಳನ್ನು ದಿಟ್ಟತನದಿಂದ ವಿರೋಧಿಸುವರು,

ಎಷ್ಟೇ ಗಹನವಾದ ವಿಷಯವಾಗಿರಲಿ, ಅದನ್ನು ಸರಳವಾಗಿ ಶ್ರೋತೃ ಗಳಿಗೆ ಆಯಾಸವಾಗದಂತೆ ಹೇಳುವರು. ಅಲ್ಲಲ್ಲಿ ಸಂದರ್ಭಕ್ಕನುಗುಣ ವಾಗಿ ಪುಟ್ಟಪುಟ್ಟ ಕಥೆಗಳನ್ನು ಹೇಳುವರು. ಉದಾಹರಣೆಗೆ ಒಂದೆರಡನ್ನು ಕೊಡಬಹುದು. ಧರ್ಮಗಳ ಅವಶ್ಯಕತೆ ಎಂಬ ಉಪನ್ಯಾಸದಲ್ಲಿ ಜೀವನ ಸಮಸ್ಯೆಯೇ ಹೆಚ್ಚಾಗಿರುವ ಈ ಕಾಲದಲ್ಲಿ ತತ್ವಶಾಸ್ತ್ರವು ಟೊಳ್ಳು ಭಾವನೆ ಯಾಗಿದೆ ಎಂದು ಹೇಳುವ ಕೆಲವರ ಮಾತನ್ನು ಸಮರ್ಥಿಸಲು ಔರಂಗ ಜೇಬನು ತನಗೆ ಉಪಾಧ್ಯಾಯನಾಗಿದ್ದ ಮುಲ್ಲಾಸಾಹೇಬರಿಗೆ ಬರೆದಿದ್ದ

ಕಾಗದ ಒಂದರ ವಿಷಯವನ್ನು ತಿಳಿಸುವರು. "ನೀವು ನನಗೆ ದರ್ಶನ ಶಾಸ್ತ್ರವನ್ನು ಭೋಧಿಸುತ್ತೇನೆಂದು ನಮ್ಮ ತಂದೆಗೆ ಹೇಳಿದಿರಿ. ಗಾಳಿಯಲ್ಲಿ ತೂರಿಹೋಗುವ ನಿಷ್ಪ್ರಯೋಜಕ ಪ್ರಶ್ನೆಗಳನ್ನು ಹಾಕಿದಿರಿ ಅವೆಲ್ಲವೂ ಮಾನವ ಸಮಾಜಕ್ಕೆ ಉಪಯೋಗವಾದವುಗಳಲ್ಲ. ಕಲಿಯಲು ಬಹಳ ಕಷ್ಟಕರವಾದುವು. ಮರೆಯಲು ಮಾತ್ರ ಬಹಳ ಸುಲಭವಾದವುಗಳು. ನೀವು ಎಂದಾದರೂ ಒಂದು ನಗರವನ್ನು ಆಕ್ರಮಿಸುವ ವಿಧಾನವನ್ನು ತಿಳಿಸಿರುವಿರಾ ?" ಎಂದು ಕೇಳಿದುದನ್ನು ಉದಾಹರಿಸುವರು. ಮತ್ತೊಂದ ಕಡೆ ಪರರ ದುಃಖದಲ್ಲಿ ಭಾಗಿಯಾಗಬೇಕು. ನೊಂದವರ ವಿಷಯದಲ್ಲಿ ಅನುಕಂಪವನ್ನು ತೋರಬೇಕು. ಎಂಬ ವಿಷಯವನ್ನು ಹೇಳುತ್ತಾ "ಒಬ ಸಂನ್ಯಾಸಿಯು ತನ್ನ ಸತ್ಕರ್ಮದ ಫಲವಾಗಿ ಸ್ವರ್ಗಕ್ಕೆ ಹೋದನು. ಅಲ್ಲಿ ಅವನಿಗೆ ಒಂದು ಚಿನ್ನದ ಕಿರೀಟವನ್ನುಕೊಟ್ಟರು ಮತ್ತೆ ಕೆಲವರಿಗೆ ರತ್ನ ಗಳನ್ನು ಜೋಡಿಸಿದ್ದ ಕಿರೀಟಗಳನ್ನು ಕೊಟ್ಟಿದ್ದರು. ಇವನಿಗೆ ಆಶ್ಚರ್ಯ ವಾಯಿತು ಶ್ರಮಪಟ್ಟು ಸ್ವರ್ಗಕ್ಕೆ ಬಂದರೂ, ತಾರತಮ್ಯವೇ ?" ಎಂದೆನಿಸಿತು. ಅದನ್ನೇ ಅವನು ದೇವತೆಗಳನ್ನು ಕೇಳಿದ—"ನನ್ನ ಕಿರೀಟಕ್ಕೆ ರತ್ನಗಳನ್ನೇಕೆ ಜೋಡಿಸಿಲ್ಲ" ಎಂದ. ಆಗ ದೇವತೆಗಳು 'ನೀನು ಅದನ್ನು ಸಂಪಾದಿಸಿಲ್ಲ ಇಲ್ಲಿನ ರತ್ನಗಳು, ಸತ್ಪುರುಷರು ಭೂಮಿಯಲ್ಲಿದ್ದಾಗ ಸುರಿಸಿದ ಕಣ್ಣೀರಿನ ಹನಿಗಳು. ನೀನು ಪರರ ದುಃಖದಲ್ಲಿ ಕಣ್ಣೀರನ್ನು ಸುರಿಸಿಲ್ಲ ಅದಕ್ಕಾಗಿ ರತ್ನಗಳಿಲ್ಲ.' ಎನ್ನುತ್ತಾರೆ." ಎಂದು ಹೇಳುವರು. ಹೀಗೆಯೇ ಮತ್ತೆ ಕೆಲವು ಕಡೆ ವೇದೋಪನಿಷತ್ತುಗಳಲ್ಲಿರುವ ಕಥೆಗಳನ್ನು ಸಂದರ್ಭೋಚಿತವಾಗಿ ಹೇಳುವರು.

ಕೆಲವು ವಿಷಯಗಳನ್ನು ಸೂತ್ರ ರೂಪವಾಗಿ ಹೇಳುವರು. ಅವು ವಿಶಾಲವಾದ ಅರ್ಥಗರ್ಭಿತವಾಗಿ, ಸುಭಾಷಿತಗಳಂತಿರುತ್ತವೆ. ಯುದ್ಧ ಮತ್ತು ಹೊಸಕ್ರಮ ಎಂಬ ಉಪನ್ಯಾಸದಲ್ಲಿ, ಆಧುನಿಕ ಯುದ್ಧವು ಹಿಂದಿನ ಕಾಲದ ಯುದ್ಧದಂತಲ್ಲ. ಅನಾಗರೀಕತೆಗೂ ನಾಗರೀಕತೆಗೂ ನಡೆಯುವ ಹೋರಾಟವಲ್ಲ. ಇಂದಿನ ಯುದ್ಧದಿಂದ ಯುದ್ಧಮಾಡುವ ಎರಡು ಪಂಗಡಗಳ ನಾಗರೀಕತೆಯು ನಾಶವಾಗುತ್ತದೆ. ಎಂಬ ವಿಷಯವನ್ನು ಹೇಳುತ್ತಾ "ಯುದ್ಧವು ಒಂದು ಹುಚ್ಚುತನವಲ್ಲ. ಸಾಮಾಜಿಕ

ಪೀಡೆ" ಎಂದು ಹೇಳುತ್ತಾರೆ. ಮತ್ತೊಮ್ಮೆ ವಿಶ್ವಸಂಸ್ಥೆಯಲ್ಲಿ ಮಾತ ನಾಡುತ್ತಾ "ಪ್ರಪಂಚವು ಕಿರಿದಾದಂತೆ, ಮಾನವರ ಮನಸ್ಸು ಹಿರಿದಾಗ ಬೇಕು." ಎಂದು ಹೇಳುವರು. ಇನ್ನೊಂದು ಕಡೆ ಮಾಯಾ ಮತ್ತು ಅವಿದ್ಯೆ ಎಂಬ ವಿಷಯವನ್ನು ಹೇಳುತ್ತಾ "ಶಬ್ದವಿಲ್ಲದೆ ಪ್ರತಿಧ್ವನಿಯಿಲ್ಲ." ಎನ್ನುವರು. ಹೀಗೆ ಸಣ್ಣ ಸಣ್ಣ ವಾಕ್ಯಗಳಿಂದ ವಿಶಾಲಾರ್ಥವನ್ನು ತುಂಬಿ ಸೂತ್ರ ರೂಪವಾಗಿ ಹೇಳುವರು. ಒಮ್ಮೊಮ್ಮೆ ಪುರಾತನ ಮತ್ತು ಆಧುನಿಕ ದಾರ್ಶನಿಕರು ಹೇಳುವ ಮಾತುಗಳನ್ನು ಸಂಭಾಷಣೆ ರೂಪದಲ್ಲಿ ತಿಳಿಸುವರು.

ಮಾತನಾಡುವಾಗ ಕೆಲವು ಸ್ವಾರಸ್ಯವಾದ ಉದಾಹರಣೆಗಳನ್ನು ಕೊಡುತ್ತಾರೆ. ಜನರು ಅವರವರ ವೈಯುಕ್ತಿಕ ಭಾವನೆಯುಂತೆ, ದೇವರ ಸ್ವರೂಪವನ್ನು ಕಲ್ಪಿಸಿಕೊಳ್ಳುತ್ತಾರೆ. ಎಂದು ಹೇಳುತ್ತಾ 'ಯಾರು ಕೊಬ್ಬಿದ ಕೋಣದಮೇಲೆ ಸವಾರಿ ಮಾಡುತ್ತಾರೋ ಅವರುಕೂಡ ಕೊಬ್ಬಿ ದವರಾಗಿರುತ್ತಾರೆ' ಎಂದು ಹೇಳುವರು. ಹೀಗೆ ತಮ್ಮ ಚತುರತೆಯಿಂದ ಗಹನವಾದ ವಿಷಯುಗಳನ್ನು ಕೂಡ, ಸರಳವಾಗಿ ಹೇಳುವ ವಿಶೇಷಗುಣವು ಇವರಲ್ಲಿದೆ. ಆದರೂ ಸಭಿಕರನ್ನು ನಗಿಸಬೇಕೆಂದು ಕೀಳುದರ್ಜೆಯ ಹಾಸ ಪದಗಳನ್ನು ಉಪಯೋಗಿಸುವುದಿಲ್ಲ. ಇವರ ಬಾಯಿಂದ ಹೊರಟ ಪ್ರತಿ ಪದವೂ ಆಣಿ ಮುತ್ತುಗಳಿದ್ದಂತಿರುತ್ತವೆ.

ಇವರು ಹೇಳುವ ಪ್ರತಿಯೊಂದು ವಿಷಯದಲ್ಲೂ ಸತ್ಯವನ್ನೇ ಕಾಣು ತ್ತೇವೆ. ಅಲ್ಲದೆ ತಾವು ಹೇಳುವುದನ್ನು ತಮ್ಮ ಆಚರಣೆಯಲ್ಲಿಟ್ಟುಕೊಂಡಿರು ತ್ತಾರೆ. ಇವರ ಶಾಂತ ಸ್ವಭಾವ, ಹೃದಯ ಸ್ವಚ್ಛತೆ, ನಿಷ್ಪಕ್ಷಪಾತತೆ, ನಿರ್ಲಿಪ್ತಭಾವನೆ, ಮತ್ತು ಇವರ ಅನವರತ ಕರ್ಮವನ್ನು ಕಂಡ ಜನತೆಯು ಇವರನ್ನು ಸನ್ಯಾಸಿ ಎಂದೇ ಕರೆಯುವಷ್ಟು ನಂಬಿಕೆಯನ್ನು ಹೊಂದಿದ್ದಾರೆ.

ಇವರಲ್ಲಿ ಅಪಾರ ಪಾಂಡಿತ್ಯವಿದ್ದರೂ, ವಿಶ್ವವನ್ನೆಲ್ಲಾ ಸಂಚರಿಸಿದ್ದರೂ, ಲೋಕವಿಖ್ಯಾತರಾಗಿದ್ದರೂ, ಅತ್ಯುನ್ನತ ಸ್ಥಾನದಲ್ಲಿದ್ದರೂ ಕೂಡ, ಇವ ರಲ್ಲಿ ಒಂದು ಅಹಂಕಾರವನ್ನು ಕಾಣುವಂತಿಲ್ಲ. ಇವರ ಪ್ರತಿಯೊಂದು ನಡೆ ಮತ್ತು ನುಡಿಯಲ್ಲೂ ವಿನಯಯುತವಾದ ಗಾಂಭೀರ್ಯವನ್ನೇ ನಾವು ಕಾಣುತ್ತೇವೆ.

ಮದರಾಸಿನಲ್ಲಿ ಇವರು ಪ್ರಾಧ್ಯಾಪಕರಾಗಿದ್ದಾಗ, ಇವರ ಉಪನ್ಯಾಸಗಳ ಸವಿಯು ಕೇವಲ ವಿದ್ಯಾರ್ಥಿಗಳಿಗೆ ಮಾತ್ರ ಮೀಸಲಾಗಿರಲಿಲ್ಲ. ಇತರ ವಿದ್ಯಾಸಂಸ್ಥೆಗಳಲ್ಲಿ, ನಾಲ್ಕು ಜನ ವಿದ್ಯಾವಂತರು ಕೂಡಿದೆಡೆಯಲ್ಲಿ, ಕೊನೆಗೆ ಸಮುದ್ರದ ದಡದಲ್ಲಿ ಹೀಗೆ ಎಲ್ಲೆಲ್ಲಿಯೂ ಇವರ ಮಾತಿನ ವೈಖರಿಯನ್ನು ಹೊಗಳುವವರೇ, ಅನಂತರ ಇವರು ಮೈಸೂರಿಗೆ ಬಂದಮೇಲೆ ಅದೇ ಕೀರ್ತಿ! ಮತ್ತೆ ಕಲ್ಕತ್ತಾಗೆ ಹೋದಮೇಲಂತು ಇಡೀ ಭಾರತಕ್ಕೆಲ್ಲಾ ಇವರ ಉಪನ್ಯಾಸದ ಜೇನುಹೊಳೆ ಹರಿದಂತಾಯಿತು. ಅಷ್ಟಕ್ಕೇ ನಿಲ್ಲಲಿಲ್ಲ. ಇವರ ಲೇಖನಗಳಿಂದ, ಗ್ರಂಥಗಳಿಂದ ರಾಧಾಕೃಷ್ಣನ್ನರ ಮೇಧಾಶಕ್ತಿಯನ್ನು ಅರಿತಿದ್ದ ಪಾಶ್ಚಿಮಾತ್ಯರು, ಇವರೊಬ್ಬ ಉತ್ತಮ ಉಪನ್ಯಾಸಕಾರರೆಂಬ ಸುದ್ದಿಯನ್ನು ಕೇಳರಿತರು. ಪ್ರತಿಯೊಂದು ಧಾರ್ಮಿಕ ತತ್ವವೂ ತನ್ನತನದಲ್ಲೇ ತಾನು ತೊಳಲುತ್ತಿರುವಾಗ ಎಲ್ಲಾ ಧರ್ಮದ ಸಾರವೂ ಒಂದೇ. ಎಲ್ಲಾ ಮತಗಳ ಗುರಿಯೂ ವಿಶ್ವಧರ್ಮದತ್ತ ಸಾಗಿದೆ. ಎಂದು ಹೇಳುವ ಧೀರವಾಣಿಯು ಈ ವರ ಪುರುಷನನ್ನು ಪ್ರತ್ಯಕ್ಷವಾಗಿ ನೋಡುವುದಕ್ಕೆ ಇವರ ಮಾತನ್ನು ಕಿವಿಯಾರ ಕೇಳುವುದಕ್ಕೆ ಹಾತೊರೆಯುತ್ತಿದ್ದರು. ಸರ್ವಪಳ್ಳಿಯವರ ಹೃದಯದಲ್ಲಿದ್ದ ವಿದ್ಯಾಧಿದೇವತೆಯೂ, ಅದರ ಜಿಹ್ವೆಯಲ್ಲಿದ್ದ ಹಿಂದೂ ಧರ್ಮದೇವಿಯೂ, ಭಾರತೀಯ ಜ್ಞಾನ ಕೀರ್ತಿಯ ಜಯಭೇರಿಯನ್ನು ಜಗತ್ತಿನಲ್ಲಿ ಬಾರಿಸಲು ಇವರನ್ನೊಂದು ಕಾರಣವನ್ನಾಗಿ ಮಾಡಿಕೊಂಡರೇನೋ, ರಾಧಾಕೃಷ್ಣನ್ನರ ಅದೃಷ್ಟವೂ ಅದಕ್ಕನುಗುಣವಾದ ಹರಿಗೋಲಾಯಿತು.

1926ರಲ್ಲಿ ಬ್ರಿಟಿಷ್ ಚಕ್ರಾಧಿಪತ್ಯಗಳ ಎಲ್ಲಾ ವಿಶ್ವವಿದ್ಯಾನಿಲಯಗಳ ಸಮ್ಮೇಳನವು ಕೇಂಬ್ರಿಡ್ಜ್ ನಗರದಲ್ಲಿ ನಡೆಯಿತು. ಅದರಲ್ಲಿ ಭಾರತದ ಪರವಾಗಿ ಕಲ್ಕತ್ತಾ ವಿಶ್ವವಿದ್ಯಾನಿಲಯವು ಒಂದು ಸದಸ್ಯತ್ವವನ್ನು ಹೊಂದಿತ್ತು. ದಾರ್ಶನಿಕ ವಿಷಯದಲ್ಲಿ ಹೆಚ್ಚಿನ ಪರಿಶ್ರಮವನ್ನೂ, ಜ್ಞಾನವನ್ನು ಪಡೆದಿದ್ದ ರಾಧಾಕೃಷ್ಣನ್ನರ ಹೊರತು ಬೇರೆ ಯಾರನ್ನೂ ಕಳುಹಿಸಲು ಕಲ್ಕತ್ತಾ ವಿಶ್ವವಿದ್ಯಾನಿಲಯವು ಇಷ್ಟಪಡಲಿಲ್ಲ. ಸರ್ವಪಳ್ಳಿಯವರಿಗೆ ಈ ರೀತಿ ಪರದೇಶಕ್ಕೆ ಹೋಗುವ ಸಂದರ್ಭವು ಒದಗಿದುದು ಇದೇ ಮೊದಲನೆಯದಾಗಿರಲಿಲ್ಲ. ಅನೇಕ ಸಾರಿ, ಅನೇಕ ರಾಷ್ಟ್ರಗಳು ಇವರಿಗೆ

ಆಹ್ವಾನವನ್ನು ಕೊಟ್ಟಿದ್ದವು. ಆದರೆ, ಹೋಗಿರಲಿಲ್ಲ. ಈಗ ಮಾತ್ರ
ಹೋಗಲೇಬೇಕಾಯಿತು. ಭಾರತವೇ ತಮ್ಮನ್ನು ಅಲ್ಲಿಗೆ ಹೋಗಬೇಕೆಂದು
ಕೋರಿದಂತಾಯಿತು. ಭಾರತದ ತತ್ವಶಾಸ್ತ್ರದ ಪ್ರತಿನಿಧಿಯಾಗಿ ಕೇಂಬ್ರಿಡ್ಜ್
ನಗರಕ್ಕೆ ಹೊರಟರು. ಸಮ್ಮೇಳನಕ್ಕೆ ಅನೇಕ ರಾಷ್ಟ್ರಗಳ ಅನೇಕ ವಿಶ್ವ
ವಿದ್ಯಾನಿಲಯಗಳ ಹೆಸರಾಂತ ತತ್ವಜ್ಞಾನಿಗಳು ಬಂದಿದ್ದರು. ಎಲ್ಲರಿಗೂ
ಸರ್ವಪಲ್ಲಿಯವರನ್ನು ನೋಡುವ ಆಸಕ್ತಿ ಇವರ ವಾಕ್‌ಝುರಿಯನ್ನೂ,
ದಿವ್ಯಜ್ಞಾನವನ್ನೂ ಕೇಳಿ ತಿಳಿಯುವ ಕುತೂಹಲ! ಅಲ್ಲಿ 'ಹಿಂದೂ
ದರ್ಶನ'ದ ಬಗ್ಗೆ ಉಪನ್ಯಾಸ ನೀಡಿದರು. ಇಂತಹ ಅದ್ಭುತವಾದ ಭಾಷಣ
ವನ್ನು ಕೇಂಬ್ರಿಡ್ಜಿನ ಜನತೆಯು ಎಂದೂ ಕೇಳಿರಲಿಲ್ಲ. ಇವರ ವಾಕ್ಸಿದ್ಧಿಗೆ
ಆಂಗ್ಲರು ಮುಗ್ಧರಾಗಿ ಹೋದರು.

ರಾಧಾಕೃಷ್ಣನ್‌ರವರು ಇಂಗ್ಲೆಂಡಿಗೆ ಬಂದಿರುವ ಸುದ್ದಿಯು ಹರಡಿದ
ಕೂಡಲೆ ಅನೇಕ ವಿಶ್ವವಿದ್ಯಾನಿಲಯಗಳು ಮತ್ತು ದಾರ್ಶನಿಕ ಸಂಘಗಳು
ಉಪನ್ಯಾಸವನ್ನು ನೀಡಬೇಕೆಂದು ಆಹ್ವಾನಿಸಿದವು. ಎಲ್ಲಾ ಆಹ್ವಾನ
ಗಳನ್ನೂ ಇವರು ಮನ್ನಿಸಲಾಗಲಿಲ್ಲ. ಆದರೆ ಆಕ್ಸ್‌ಫರ್ಡಿನ ಮಾಂಚೆಸ್ಟರ್
ಕಾಲೇಜಿಗೆ ಒಪ್ಪಿಗೆಯನ್ನು ಕೊಡಲೇಬೆಕಾಯಿತು. ಅಲ್ಲಿನ 'ಅಪ್‌ಟನ್
ಉಪನ್ಯಾಸ ಮಾಲೆ'ಯಲ್ಲಿ "The Hindu View of Life"
(ಹಿಂದೂ ಜೀವನದ ದೃಷ್ಟಿ) ಎಂಬ ವಿಷಯದ ಮೇಲೆ ಉಪನ್ಯಾಸವನ್ನು
ಮಾಡಿದರು. ಅದರಲ್ಲಿ ನಾಲ್ಕು ಉಪನ್ಯಾಸಗಳಿವೆ.

ಮೊದಲನೆಯದು ಧಾರ್ಮಿಕ ಅನುಭವ, ಅದರ ಸ್ವಭಾವ, ಮತ್ತು
ತೃಪ್ತಿ—ಅದರಲ್ಲಿ ಹೊರನೋಟಕ್ಕೆ ಹಿಂದೂ ಧರ್ಮವು ಒಂದು ಒಗಟಾಗಿ
ಕಾಣುತ್ತದೆ ಭಾರತಕ್ಕೆ ಹೊರಗಿನಿಂದ ಬಂದ ಭಿನ್ನ ಭಿನ್ನ ಜನತೆಯ
ಆಚಾರ ವ್ಯವಹಾರಗಳು, ಇಲ್ಲಿ ಬೆರೆತುಕೊಂಡಿವೆ. ನಾವು ಅಂಧ ಶ್ರದ್ಧೆ
ಯನ್ನು ಬಿಟ್ಟು ನೋಡಿದರೆ ಪ್ರಪಂಚದ ಯಾವ ಧರ್ಮದಲ್ಲೂ ಅತಿಯಾದ
ವ್ಯತ್ಯಾಸವು ಕಾಣುವುದಿಲ್ಲ. ಚೀನಾ, ಜಪಾನ್, ಟಿಬೆಟ್, ಸಯ್ಯಾಮ್,
ಬರ್ಮಾ ಮತ್ತು ಸಿಲೋನ್‌ಗಳು ಭಾರತವನ್ನು ತಮ್ಮ ಆಧ್ಯಾತ್ಮಿಕ ತೌರೆಂದು
ನೋಡುತ್ತಿವೆ. ಇಲ್ಲಿನ ಜನಾಂಗದ ಇತಿಹಾಸವು ಹೊಸದಲ್ಲ. ಇದಕ್ಕೆ
ದೊರಕುವ ಆಧಾರಗಳು ನಾಲ್ಕುಸಾವಿರ ವರ್ಷಕ್ಕೂ ಹಿಂದಿನದು. ಆಗಲೇ

ಇದು ನಾಗರೀಕತೆಯನ್ನು ಕಂಡಿತ್ತು. ಇಲ್ಲಿನ ವೈದಿಕ ಧರ್ಮವು ನಾಲ್ಕು ಅಥವಾ ಐದು ಲಕ್ಷ ಆಧ್ಯಾತ್ಮಿಕ ಆಲೋಚನೆಗಳನ್ನು ಹೊಂದಿದೆ. ಕಾಲ ಕಾಲಕ್ಕೆ ಪರಿವರ್ತನೆಯನ್ನು ಹೊಂದುವ ರಾಜಕೀಯಗಳು ಪರಧರ್ಮ ಗಳನ್ನು ಒತ್ತಾಯಪೂರ್ವಕವಾಗಿ ಇತ್ತೀಚೆಗೆ ತುಂಬಿವೆ. ಆದರೂ ಹಿಂದೂ ಧರ್ಮವು ಶ್ರೇಷ್ಠವಾಗಿಯೇ ಉಳಿದಿದೆ. ಜೀವಂತ ವೃಕ್ಷವಾಗಿದೆ. ಧರ್ಮದ ಸಾರವನ್ನು ಸದಾ ಚಿಮ್ಮುತ್ತಿದೆ. ಎಂಬುದನ್ನು ಆರ್ಯರು ಇಂಡಿಯಾಕ್ಕೆ ವಲಸೆ ಬಂದ ಕಾಲದಿಂದ ಹೇಗೆ ಆಧ್ಯಾತ್ಮಿಕ ಭಾವನೆಯು ಆಗಾಗ ಬದಲಾವಣೆಯನ್ನು ಹೊಂದುತ್ತಿದೆ. ಎಂಬ ರೀತಿಯನ್ನು ತಿಳಿಸುತ್ತಾರೆ.

ದಕ್ಷಿಣೋತ್ತರ ಎರಡುಸಾವಿರ ಮೈಲಿ ಮತ್ತು ಪೂರ್ವ ಪಶ್ಚಿಮ ಸಾವಿರದ ಎಂಟುನೂರು ಮೈಲಿಯಿರುವ ವಿಶಾಲ ಭಾರತದಲ್ಲಿ ಹಿಂದೂ ಸಂಸ್ಕೃತಿಯು ಹರಡಿತು. ಹಿಂದೂ ಸಂಸ್ಕೃತಿಯಲ್ಲಿ ಅಪನಂಬಿಕೆಗಳಿಗೆ ಕಾರಣವಿಲ್ಲ ವೇದ ಮತ್ತು ಪುರಾಣಗಳೆಲ್ಲದರ ತತ್ವವೂ ಒಂದೇ ಗುರಿಯುಳ್ಳ ಜ್ಞಾನಾಭಿವೃದ್ಧಿಯನ್ನು ಮಾಡುತ್ತಿವೆ. ಅವುಗಳ ಅನುಭವವು ವಿಶ್ವತೋ ಮುಖವಾದವು. ಅನೇಕಾರ್ಥವುಳ್ಳವು. ಮನುಷ್ಯನ ಬುದ್ಧಿಯು ಬೆಳೆದಂತೆ ಜ್ಞಾನಾರ್ಜನೆಯೂ ಸಮಾಜ ಸುಧಾರಣೆಯೂ ಆಗುತ್ತಿರುವುದು ಸ್ವಭಾವ ಸಿದ್ಧವಾಗಿದೆ. ಹಿಂದೂ ಪ್ರವಾದಿಗಳ ಆಲೋಚನೆಗಳು ಪ್ರಯೋಗಶೀಲ ವಾದುವುಗಳು. ಅವರು ಹೊಸ ಹೊಸ ಉತ್ತಮ ಭಾವನೆಗಳನ್ನು ತೋರಿದ್ದಾರೆ, ಎಂಬುದಕ್ಕೆ ಬೌದ್ಧ ಮತ್ತು ಜೈನ ಮತಗಳೇ ಉದಾಹರಣೆ ಗಳು. ಅನಂತರ ಬಂದ ರಾಮಾನಂದ, ಚೈತನ್ಯ, ಕಬೀರ್, ನಾನಕ್ ಮುಂತಾದವರೂ ಕೂಡ ಧರ್ಮ ಸುಧಾರಕರಾದರು. ಬ್ರಹ್ಮಸಮಾಜ, ಆರ್ಯಸಮಾಜ ಮುಂತಾದ ಸಮಾಜಗಳೂ, ಹಿಂದೂ ಧರ್ಮದ ಹಿನ್ನೆಲೆ ಯೆಲ್ಲಿ ವೇದಗಳ ಆಧಾರದ ಮೇಲೆ ಬೆಳೆದವುಗಳಾಗಿವೆ ಎಂಬುದನ್ನು ಸ್ಪಷ್ಟ ಪಡಿಸುವರು.

ಯಾಜ್ಞ್ಯವಲ್ಕನ ಕಾಲದಲ್ಲಿದ್ದ 3306 ದೇವತೆಗಳ ಹೆಸರು ಮನುಷ್ಯನ ಜ್ಞಾನವು ಬೆಳೆದಂತೆ ಏಕದೇವತ್ವವಾದಕ್ಕೆ ಹೇಗೆ ಮನ್ನಣೆ ಕೊಟ್ಟಿತೆಂಬುದನ್ನು ವಿವರಿಸುವರು.

ಎರಡನೆಯ ಉಪನ್ಯಾಸ — Conflict of Religions,

The Hindu Attitude (ಮತಗಳ ಹೋರಾಟ, ಹಿಂದೂ ಮನೋವೃತ್ತಿ) ಎಂಬುದು ಪ್ರಪಂಚದ ಎಲ್ಲಾ ಮತಗಳಿಗೂ, ಪ್ರಪಂಚದ ರಹಸ್ಯವು ಏಕರೀತಿಯದಾಗಿರುತ್ತದೆ. ಎಂಬುದನ್ನು ಸಂತಜಾನ್, ಸಂತಪಾಲ್, ಪ್ಲಾಟಿನಸ್, ಶಂಕರಾಚಾರ್ಯ, ಮತ್ತು ಜರ್ಮನ್ನಿನ ಹೆರ್ಮನ್ ಜ್ಞಾನಿಯು ಒಪ್ಪಿಕೊಂಡಿದ್ದಾರೆ. ಅಗಸ್ಟೀನನೂ ಕೂಡ ತ್ರಿಮೂರ್ತಿ ತತ್ವವಾದವನ್ನು ಖಂಡಿಸಿ, ತಾನೂ ಏಕದೇವತ್ವವಾದಕ್ಕೆ ಮನ್ನಣೆಯನ್ನು ಕೊಟ್ಟಿದ್ದಾನೆ ಎಂಬವಿಷಯಗಳನ್ನು ಉದಹರಿಸಿ ಮಸೀದಿ, ಚರ್ಚು, ಮತ್ತು ದೇವಸ್ಥಾನಗಳು ಹೊರನಂಬಿಕೆಗೆ ಭಿನ್ನವಾಗಿದ್ದರೂ, ಒಂದೇ ಸತ್ಯವನ್ನರಸುವ ಉದ್ದೇಶ ವುಳ್ಳವುಗಳಾಗಿವೆ ಎಂಬುದನ್ನು ಸ್ಪಷ್ಟಪಡಿಸುವರು.

ಮೂರು ಮತ್ತು ನಾಲ್ಕನೆಯ ಉಪನ್ಯಾಸಗಳು ಹಿಂದೂಧರ್ಮವನ್ನು ತಿಳಿಸತಕ್ಕವುಗಳು ಇವುಗಳಲ್ಲಿ ಮಾಯಾ, ಮೋಕ್ಷ, ಸ್ವರ್ಗ, ಮತ್ತು ಮುಕ್ತಿಗಳಮೇಲೆ ಭಾರತೀಯರಿಗಿರುವ ನಂಬಿಕೆಗಳನ್ನು ತಿಳಿಸಿ, ಇದರಬಗ್ಗೆ ಐನ್‌ಸ್ಟೀನ್ ಮತ್ತು ಅರಿಸ್ಟಾಟಲ್‌ರವರ ಅಭಿಪ್ರಾಯವನ್ನು ಉದಾಹರಿಸಿದ್ದಾರೆ. ಹಿಂದೂ ಧರ್ಮವು ತಿಳಿಸುವ ಕರ್ಮದಬಗ್ಗೆ ವಿವರಿಸುತ್ತಾ ಕರ್ಮವು ಯಾಂತ್ರಿಕ ತತ್ವದ್ದಲ್ಲ. ಆಧ್ಯಾತ್ಮಿಕಕ್ಕೂ ಅವಶ್ಯಕವಾದುದ್ದು ಎಂಬುದನ್ನು ತಿಳಿಸುವರು. ಹಿಂದೂ ಧರ್ಮವು ಭಾವನೆಗಿಂತ ಮಿಗಿಲಾಗಿ ಜೀವನದ ಒಂದು ಮಾರ್ಗವಾಗಿದೆ ಎಂದು ಹೇಳುವರು.

ಹಿಂದೂ ಧರ್ಮೀಯನು ಬಯಸತಕ್ಕದ್ದು ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳನ್ನು ಈ ಬಯಕೆಗಳು ಮಾನವಸಹಜ ವಾದುವುಗಳು ಸನಾತನವಾದವುಗಳು ವಿಶಾಲ ಭಾವನೆಗಳನ್ನುಳ್ಳವುಗಳು ಇಹ ಪರಗಳೆರಡನ್ನೂ ಬಿಗಿಯುತಕ್ಕವು. ಇವುಗಳಲ್ಲಿ ಅತ್ಯಂತಶ್ರೇಷ್ಠವಾದ ಫಲವೆಂದರೆ. ಮೋಕ್ಷ. ಇದನ್ನು ಸಾಧಿಸುವ ಮಾರ್ಗಗಳು ಜ್ಞಾನ, ಭಕ್ತಿ ಮತ್ತು ಕರ್ಮಗಳು ಎಂಬ ವಿಷಯವನ್ನು ವಿವರಿಸುವರು.

ಅನಂತರ ವರ್ಣಾಶ್ರಮಗಳನ್ನು ವಿವರಿಸುತ್ತಾ ಅವುಗಳರೀತಿ ನೀತಿ, ಅವು ಜೀವನಕ್ಕೆ ಹೊಂದಿಕೊಳ್ಳುವ ಬಗೆಯನ್ನು ಹೇಳಿ, ಕಾಲಾನುಕ್ರಮೇಣ ಇದರಿಂದ ಸಮಾಜದಲ್ಲಾದ ಆಂದೋಲನ ಮುಂತಾದುವನ್ನು ತಿಳಿಸುವರು.

ಈ ನಾಲ್ಕು ಉಪನ್ಯಾಸಗಳಿಂದ ಹಿಂದೂಗಳ ಜೀವನ ಗುರಿಯನ್ನೇ ವಿವರಿಸಿದಂತಾಯಿತು. ಈ ಉಪನ್ಯಾಸಗಳು ಇಡೀ ವಿಶ್ವಕ್ಕೊಂದು ಜ್ಞಾನ ಜ್ಯೋತಿಯಾದಂತಾಯಿತು. ಅದಲ್ಲವೂ 1927 ರಲ್ಲಿ ಗ್ರಂಥರೂಪವನ್ನು ಹೊಂದಿ ಪ್ರಪ್ರಥಮವಾಗಿ ಪ್ರಕಟವಾಯಿತು. ಈ ಗ್ರಂಥವು ಫ್ರೆಂಚ್, ಜರ್ಮನಿ ಮುಂತಾದ ಅನೇಕ ಭಾಷೆಗಳಿಗೆ ತರ್ಜುಮೆಯನ್ನು ಹೊಂದಿ ರಾಧಾಕೃಷ್ಣನ್ನರ ಕೀರ್ತಿಯನ್ನು ಬೆಳಗಿತು.

ಇಂಗ್ಲೆಂಡಿನ ಪತ್ರಿಕೆಯೊಂದು "ಇಂದು ಕಲ್ಕತ್ತಾ ವಿಶ್ವವಿದ್ಯಾ ನಿಲಯವು ಪುನೀತವಾಯಿತು. ಡಾ॥ ರಾಧಾಕೃಷ್ಣರಂತಹ ಮೇಧಾವಿ ಗಳನ್ನು ಬ್ರಿಟೀಷ್ ಚಕ್ರಾಧಿಪತ್ಯದ ವಿಶ್ವವಿದ್ಯಾನಿಲಯಗಳ ಸಮ್ಮೇಳನಕ್ಕೆ ಕಳುಹಿಸಿ ಅದು ಗೌರವಾನ್ವಿತವಾಯಿತು. ಈ ಆಕ್ಸ್‌ಫರ್ಡಿನ ವಿಶ್ವವಿದ್ಯಾ ನಿಲಯವು ಬಹು ಪುರಾತನವಾದುದು. ಇಲ್ಲಿ ಒಬ್ಬ ಭಾರತೀಯ ಪ್ರಜೆಯು ಮೊಟ್ಟಮೊದಲು ಉಪನ್ಯಾಸ ಮಾಡುವುದನ್ನರಿತು ಆಶ್ಚರ್ಯವಾಗಿತ್ತು" ಎಂದು ಬರೆಯಿತು. ಆ ಕಾಲೇಜಿನ ಪ್ರಿನ್ಸಿಪಾಲರೂ, ಅಲ್ಲಿನ ಪ್ರಸಿದ್ಧವಾದ ತತ್ವಶಾಸ್ತ್ರದ ಸಂಚಿಕೆಯಾದ 'ಹಿಬ್ಬರ್ಟ್ ಜರ್ನಲ್'ನ ಸಂಪಾದಕರೂ ಆಗಿದ್ದ ಡಾ॥ ಜಾಕ್ಸ್ ಎಂಬುವರು ಸರ್ವಪಳ್ಳಿಯವರನ್ನು ಕುರಿತು ಈ ರೀತಿ ಹೇಳಿದರು "ಭಾರತದಿಂದ ಹೊರಗಡೆಗೆ ಉಪನ್ಯಾಸಕ್ಕಾಗಿ ಇದುವರೆಗೆ ಎಲ್ಲಿಯೂ ಹೋಗದ ನೀವು, ನಮ್ಮ ವಿಶ್ವವಿದ್ಯಾನಿಲಯಕ್ಕೆ ಬಂದು ನಮ ಕೋರಿಕೆಯನ್ನು ಮನ್ನಿಸಿದ್ದೀರಿ. ಪರದೇಶಗಳಲ್ಲಿ ಇದೇ ನಿಮ್ಮ ಪ್ರಪ್ರಥಮ ಉಪನ್ಯಾಸ. ನಾನೂ ಹಾಗೂ ನಮ್ಮ ವಿಶ್ವವಿದ್ಯಾನಿಲಯವು ನಿಮಗೆ ಗೌರವವನ್ನು ಸೂಚಿಸುತ್ತಿದ್ದೇವೆ" ಎಂದು ಹೇಳಿದರು.

ಆ ವಿಶ್ವವಿದ್ಯಾನಿಲಯದ ಹೆಸರಾಂತ ತತ್ವಜ್ಞಾನಿಗಳೆಲ್ಲರೂ ರಾಧಾ ಕೃಷ್ಣನ್ನರನ್ನು ಭೇಟಿಮಾಡಿದರು. ಅವರೆಲ್ಲರ ಒಂದು ಬೇಡಿಕೆಯಂತೆ ಆಂಗ್ಲರ ತತ್ವಜ್ಞಾನದಲ್ಲಿ ಪ್ರಸಿದ್ಧರಾದ ಬ್ರಾಡ್ಲೆ ಮತ್ತು ಹಿಂದೂ ತತ್ವ ಜ್ಞಾನಿಯಾದ ಶಂಕರಾಚಾರ್ಯರ ತತ್ವಗಳಲ್ಲಿನ ಸಾಮ್ಯವಾದದ ಬಗ್ಗೆ 'ಮಾರಲ್ ಸೈನ್ಸ್ ಕ್ಲಬ್ಬಿ'ನಲ್ಲಿ ಮಾತನಾಡಿದರು. ಉಪನ್ಯಾಸದ ಮುಖ್ಯ ವಸ್ತು 'ಮಾಯಾ' ಎಂಬುದು. ಇದನ್ನು ಕೇಳಿದ ಶ್ರೋತೃಗಳು ಬಹಳ ವಾಗಿ ಮೆಚ್ಚಿದರು. ಇಂತಹ ಕ್ಲಿಷ್ಟಕರವಾದ ವಿಷಯದ ಮೇಲೆ ಇಷ್ಟು

ಕೇಂಬ್ರಿಡ್ಜ್, ಪ್ರಿನ್‌ಸ್ಟನ್, ಯೇಲ್, ಹಾರ್‌ವಾರ್ಡ್ ಮುಂತಾದ ಅನೇಕ ವಿಶ್ವವಿದ್ಯಾನಿಲಯಗಳಲ್ಲಿ ಉಪನ್ಯಾಸ ಮಾಡಿದರು. ಹೋದ ಕಡೆಯಲ್ಲೆಲ್ಲಾ ಇವರಿಗೆ ಅಭೂತ ಸ್ವಾಗತ! ಅಪಾರ ಗೌರವಗಳು ದೊರಕಿದವು. ಕೇಂಬ್ರಿಡ್ಜಿನ ಹೆಸರಾಂತ ಪ್ರಾಧ್ಯಾಪಕರೊಬ್ಬರು ಇವರನ್ನು ಕುರಿತು "ಇಂಡಿಯಾದಲ್ಲಿರುವ ನಮ್ಮ ಪಾದ್ರಿಗಳನ್ನು ನಮ್ಮ ಧರ್ಮದಲ್ಲಿ ನಂಬಿಕೆಯು ಬರುವಂತೆ ಅಲ್ಲಿನ ಜನರಿಗೆ ಉಪದೇಶಮಾಡಿರೆಂದು ಕೇಳುವುದೇಕೆ? ನಾವುಗಳು ನಮ್ಮ ಧರ್ಮದ ಬಗ್ಗೆ ಪರರಿಗೆ ಉಪದೇಶಮಾಡಬಲ್ಲ ಶಕ್ತಿಯನ್ನು ರಾಧಾಕೃಷ್ಣನ್‌ರವರಲ್ಲಿ ಕಾಣುತ್ತೇವೆ" ಎಂದು ಹೃದಯ ತುಂಬಿಬಂದ ಮಾತಿನಲ್ಲಿ ಹೇಳಿದರು.

ಸರ್ವಪಳ್ಳಿಯವರು ಉತ್ತಮ ಉಪನ್ಯಾಸಕರಾಗಿದ್ದುದರಿಂದಲೂ, ಸರ್ವಧರ್ಮಗಳಲ್ಲಿ ಧೀಮಂತರಾಗಿದ್ದುರಿಂದ, ಬೊಂಬಾಯಿನಲ್ಲಿದ್ದ ಭಾರತದ ದಾರ್ಶನೀಕ ಸಂಘದ ಅಧ್ಯಕ್ಷರಾಗಿ 1927ರಲ್ಲಿ ಚುನಾಯಿಸಲ್ಪಟ್ಟರು. ಅದು ಹಾಗೆಯೇ ಮುಂದುವರಿದು 1937ರ ವರೆಗೂ ಆ ಸಂಘದ ಪ್ರಧಾನಾಧ್ಯಕ್ಷರಾಗಿ ಕೆಲಸಮಾಡಿದರು. 1929 ರಿಂದ 1931ರ ವರೆಗೆ ಕಲೆ ಮತ್ತು ನಾಗರಿಕತೆಯ ಸಂಸ್ಥೆಗೂ ಅಧ್ಯಕ್ಷರಾಗಿದ್ದರು.

1928 ರಲ್ಲಿ "Religions we need (ನಾವು ಬಯಸುವ ಧರ್ಮ)" ಎಂಬ ಗ್ರಂಥವನ್ನು ಹೊರತಂದರು. 1926 ನೇ ಸೆಪ್ಟಂಬರ್ ಮಾಹೆಯಲ್ಲಿ 'ಹಾರ್‌ವಾರ್ಡ' ವಿಶ್ವವಿದ್ಯಾನಿಲಯದಲ್ಲಿ ಮಾಡಿದ ಉಪನ್ಯಾಸಗಳು "Kalki or the future of Civilization (ಕಲ್ಕಿ ಅಥವಾ ನಾಗರೀಕತೆಯ ಭವಿಷ್ಯ" ಎಂಬ ಹೆಸರಿನಲ್ಲಿ 1929ರಲ್ಲಿ ಗ್ರಂಥ ರೂಪಕ್ಕೆ ಬಂದಿತು.

ಇಂದು ನಾಗರಿಕತೆಯು ಒಂದು ನಿಯಮಿತಕಾಲದ ಇಕ್ಕಟ್ಟಿನಲ್ಲಿ ಹಾದುಹೋಗುವಂತೆ ಕಾಣುತ್ತಿದೆ. ಒಟ್ಟಿನಲ್ಲಿ ನಾವು ಮಾನವ ಕುಲದ ನಾಗರಿಕತೆಯ ಬೆಲೆಯನ್ನು ಕಟ್ಟಬೇಕಾದರೆ ಪ್ರತಿಯೊಂದುಕಾಲದ, ಇತಿಹಾಸದ ನಾಗರಿಕತೆಯನ್ನು ಅರಿಯುವುದು ಅವಶ್ಯಕ. ಹಾಗೆ ಮಾಡುವುದರಿಂದ, ಪ್ರಪಂಚದ ನಾಗರಿಕತೆಯ ಭಾವನೆಯು ತಿಳಿಯುತ್ತದೆ. ಇಂದಿನ ವಿಜ್ಞಾನವು ನಮ್ಮ ಹೊರ ಜೀವನವನ್ನು ಕಟ್ಟಲು ಸಹಕಾರವನ್ನಿತ್ತಿದೆ.

ಆದರೆ ಅದು ಸಾಲದು. ಜೀವನದಲ್ಲಿ ಒಂದು ಶಿಸ್ತು ಬೇಕು. ಪ್ರತಿಯೊಂದು ಜೀವಿಯನ್ನೂ ಪ್ರೀತಿಸುವ ಚೈತನ್ಯವೂ ಬೇಕು. ಆಗಲೇ ಬಾಳಿನಲ್ಲಿ ಬಲವು ಬರುವುದು. ನಮ್ಮ ಜ್ಞಾನವನ್ನು ಅಪರಿಮಿತವಾಗಿ ವೃದ್ಧಿಗೊಳಿಸಿ ಕೊಂಡರೂ, ವಿಜ್ಞಾನದಲ್ಲಿ ಅನೇಕ ಸಂಶೋಧನೆಗಳನ್ನು ನಡೆಸಿದರೂ, ಕೂಡ, ನಾವು ನೈತಿಕ ಮತ್ತು ಆಧ್ಯಾತ್ಮಿಕ ಜೀವನದಲ್ಲಿ ಹಿಂದಿನ ಜನತೆಯ ಮಟ್ಟಕ್ಕೇರಲಾರೆವು. ಅದಕ್ಕೆ ಕಾರಣವೆಂದರೆ, ನಾವು ವಿಜ್ಞಾನವನ್ನೇ ನಂಬಿರುವುದಾಗಿದೆ. ಅದು ನಮ್ಮ ಮನಸ್ಸು ಮತ್ತು ಆತ್ಮಕ್ಕೆ ಬೇಕಾದುದನ್ನು ನೀಡಲಾರದು. ಇದು ಇಂದಿರುವ ಭಿನ್ನಭಿನ್ನ ಮತಗಳನ್ನು ಒಂದು ಮಾಡಲಾರದು. ಇದರಿಂದ ಶಾಂತಿಯು ಇಲ್ಲವೇ ಇಲ್ಲ. ಮುಂದಿನ ಜನಾಂಗವು ಬಯಸುವುದು ಒಗ್ಗಟ್ಟನ್ನು; ಮತೀಯ ಬಿನ್ನತೆಯನ್ನಲ್ಲ. ಎಂದು ಹೇಳುವರು. ಮುಂದಿನ ಪೀಳಿಗೆಗೆ ಬೇಕಾದ ಸುಖ ಮತ್ತು ಸಂತೋಷಗಳಿಗೆ ಕಾರಣವಾದ ಪ್ರೇಮ ಮತ್ತು ಭಕ್ತಿಯಿಂದ ಕೂಡಿದ ಪರಿಪೂರ್ಣವಾದ ಮಾನವತೆಯನ್ನು ಹೇಗೆ ನಿರ್ಮಿಸಬಹುದೆಂಬುದನ್ನು ಈ ಗ್ರಂಥದಲ್ಲಿ ಸೂಚಿಸುತ್ತಾರೆ.

ಸರ್ವಪಳ್ಳಿಯವರು ಭಾರತಕ್ಕೆ ಹಿಂತಿರುಗಿದಮೇಲೆ, ಆಂಧ್ರ ವಿಶ್ವ ವಿದ್ಯಾನಿಲಯವು ಸರ್ವಪಳ್ಳಿಯವರನ್ನು ಗೌರವಿಸಲು ಆಹ್ವಾನಿಸಿತು. ಅವರುಪ ಆ ವಿಶ್ವವಿದ್ಯಾನಿಲಯದ ದ್ವಿತೀಯ ಪದವೀದಾನ ಸಮಾರಂಭವು. ಮದರಾಸಿನ ಗೌರ್ನರ್‌ರವರು ಅದರ ಅಧ್ಯಕ್ಷತೆಯನ್ನು ವಹಿಸಿದ್ದರು. ಡಾ|| ರಾಧಾಕೃಷ್ಣನ್‌ರವರಿಗೆ ' D. Litt ' ಎಂಬ ಗೌರವ ಪದವಿಯನ್ನು ಆಂಧ್ರ ವಿಶ್ವವಿದ್ಯಾನಿಲಯವು ನೀಡಿತು. ಇದರಿಂದ ಸರ್ವಪಳ್ಳಿಯವರಿಗೆ ಬಹಳ ಸಂತೋಷವಾಯಿತು. ತಮ್ಮ ಸ್ವಂತ ಜನಗಳಿಂದ, ಮಾತೃ ಭೂಮಿಯಲ್ಲಿ ಉನ್ನತ ಗೌರವವನ್ನು ಪಡೆದುದು ಇದೇ ಮೊಟ್ಟಮೊದಲನೆಯದು. ಅನಂತರ ಭಾರತದ ಮತ್ತು ಹೊರದೇಶಗಳ ನಾನಾ ವಿಶ್ವವಿದ್ಯಾನಿಲಯಗಳಲ್ಲಿ ಇಂತಹ ಗೌರವ ಪದವಿಗಳು ಮಳೆಯಂತೆ ಸುರಿದುವು.

# ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯದಲ್ಲಿ

ಡಾ|| ರಾಧಾಕೃಷ್ಣರು ಇಂಗ್ಲೇಂಡಿನಿಂದ ಬಂದನಂತರ ಬಹಳ ಕಾಲ ಇಂಡಿಯಾದಲ್ಲುಳಿಯಲಿಲ್ಲ. ಮತ್ತೆ ಇಂಗ್ಲೇಂಡಿಗೆ ಹೋಗಬೇಕಾಗಿ ಬಂತು. ಆಕ್ಸ್‌ಫರ್ಡಿನ ಮ್ಯಾಂಚೆಸ್ಟರ್ ಕಾಲೇಜಿನಲ್ಲಿ ಪ್ರೊ|| ಜೆ. ಎಸ್ಟಲಿನ್ ಕಾರ್ಪೆಂಟರ್ ಎಂಬ ವಿದ್ವಾಂಸರು ತುಲನಾತ್ಮಕ ಧರ್ಮಗಳ ಪ್ರಾಧ್ಯಾಪಕ ರಾಗಿದ್ದರು. ಆ ಪೀಠವು ಬಿಡುವಾಯಿತು. ಅಲ್ಲಿಗೆ ಪೌರ್ವಾತ್ಯ ಮತ್ತು ಪಾಶ್ಚಾತ್ಯ ಧರ್ಮಗಳೆಲ್ಲದರ ಪಾಂಡಿತ್ಯವುಳ್ಳ ಮಹಾ ವಿದ್ವಾಂಸರ ಅವಶ್ಯ ಕತೆಯಿತ್ತು. ಇದರ ಜೊತೆಗೆ ವೈಜ್ಞಾನಿಕವಾಗಿ, ರಾಜಕೀಯವಾಗಿ, ಮತ್ತು ಇಂದಿನ ಜನಜೀವನಕ್ಕನುಗುಣವಾಗಿ ತತ್ವಶಾಸ್ತ್ರವನ್ನು ನಡಿಸಬಲ್ಲ ಸಾಮರ್ಥ್ಯವು ಸರ್ವಪಳ್ಳಿಯವರೊಬ್ಬರಿಗೆ ಮಾತ್ರ ಸಾಧ್ಯವಿತ್ತು. ಅದ ನ್ನರಿತ ಮ್ಯಾಂಚೆಸ್ಟರ್ ಕಾಲೇಜಿನ ವ್ಯವಸ್ಥಾ ಮಂಡಲಿಯು, ಆ ಸ್ಥಾನಕ್ಕೆ ಇವರನ್ನು ಆಹ್ವಾನಿಸಿತು.

ಅಂತಹ ಮಹಾಶಾಲೆಯಲ್ಲಿ, ಆ ಪವಿತ್ರ ಹುದ್ದೆಗೆ ಹೋಗಲು ರಾಧಾ ಕೃಷ್ಣನ್ನರಿಗೂ ಸಂತೋಷವೇ ಆಯಿತು. ಆ ಬಯಕೆಗೆ ಮತ್ತೊಂದು ಕಾರಣವೆಂದರೆ — ಹಿಂದೂದೇಶದ ಹಿರಿಮೆಯನ್ನೂ, ಹಿಂದೂಧರ್ಮದ ಮಹತ್ವವನ್ನೂ ಆಕ್ಸ್‌ಫರ್ಡ್, ಬರ್ಮಿಂಗ್ಹಾಮ್, ಮತ್ತು ಮ್ಯಾಂಚೆಸ್ಟರಿನ ಕ್ರೈಸ್ತಿಯನ್ ವಿದ್ಯಾರ್ಥಿಗಳಿಗೆ ತಿಳಿಸುವುದಾಗಿತ್ತು. ಆದರೂ ಆತುರದಲ್ಲಿ ಅಲ್ಲಿಗೆ ಹೋಗಲಾಗಲಿಲ್ಲ. ಕಲ್ಕತ್ತಾ ವಿಶ್ವವಿದ್ಯಾನಿಲಯದವರಿಂದ ಅಪ್ಪಣೆ ಯನ್ನು ಪಡೆಯಬೇಕಾಗಿತ್ತು. ಅದರಿಂದ ಒಂದು ವರ್ಷವು ತಡವಾಯಿತು.

ಇಂಗ್ಲೇಡಿಗೆ ಹೋಗುವ ಮೊದಲು ಗಾಂಧೀಜಿಯವರ ಆಶೀರ್ವಾದ ವನ್ನು ಪಡೆಯಬೇಕೆಂದು ಬಯಸಿದರು. ಗಾಂಧೀಜಿಯವರ ಬಗ್ಗೆ ಇವರಿಗೆ ಅಪಾರ ಭಕ್ತಿ, ಅಪಾರ ಗೌರವ, ಅವರ ನಿಷ್ಕಾಮ ಸೇವೆ, ತಾಯ್ನಾಡಿನಲ್ಲಿ ರುವ ಆಸಕ್ತಿ, ಭಗವದ್ಗೀತೆಯಲ್ಲಿಟ್ಟಿದ್ದ ಅವರ ಅಚಲ ನಂಬಿಕೆ, ಆ ನಂಬಿಕೆ ಯಂತೆ ಆಚರಿಸುತ್ತಿದ್ದ ರೀತಿ, ಇವೆಲ್ಲವನ್ನೂ ತಿಳಿದಿದ್ದ ಇವರಿಗೆ ಬಾಪೂಜಿ ಯವರಲ್ಲಿ ಪೂಜ್ಯ ಭಾವನೆಯು ಬಂದಿದ್ದುದು ಆಶ್ಚರ್ಯವೇನಲ್ಲ. ಆದುದ



ಗಾಂಧೀಜಿ ಮತ್ತು ಡಾ॥ ರಾಧಾಕೃಷ್ಣನ್

ರಿಂದಲೇ ಸೇವಾಗ್ರಾಮಕ್ಕೆ ಹೋದರು. ಮಹಾತ್ಮರಿಗೆ ನಮಸ್ಕರಿಸಿ, "ನಾನು ಪುರಾತನ ಕಾಲದಿಂದ ಬಂದಿರುವ ಹಿಂದೂಧರ್ಮವನ್ನೂ ಪಾಶ್ಚಿಮಾತ್ಯ ಧರ್ಮವನ್ನೂ ಅಧ್ಯಯನ ಮಾಡಿದ್ದೇನೆ; ವಿಷಯವನ್ನು ಗ್ರಹಿಸಿದ್ದೇನೆ. ಆದರೂ ಅವರಂತೆ ಆಚರಿಸುತ್ತಿಲ್ಲ. ಪಾಶ್ಚಿಮಾತ್ಯರಿಗೆ ಹಿಂದೂಧರ್ಮದಲ್ಲಿ ಆಸಕ್ತಿ ಕಡಿಮೆ. ನೀವು ಹಿಂದೂಧರ್ಮದ ಪ್ರತೀಕವಾಗಿದ್ದೀರಿ. ನೀವು ಆಚರಿಸಿ ತೋರಿಸುವ ಮಾರ್ಗದಲ್ಲಿ ನಾವು ನಡೆಯಬೇಕು. ನಿಮ್ಮ ಧಾರ್ಮಿಕ ಮತ್ತು ನೈತಿಕ ನಡವಳಿಕೆಗಳು ನನ್ನ ಮತ್ತು ಭಾರತೀಯರೆಲ್ಲರ ಆದರ್ಶವಾಗಲಿ! ನಿಮ್ಮ ಆಶೀರ್ವಾದದ ಪ್ರಭಾವವು ನನ್ನ ಜಿಹ್ವೆಯಲ್ಲಿ ನೆಲಸಿರಲಿ! ಅದರಿಂದ ಪರದೇಶದಲ್ಲಿ ಹಿಂದೂಧರ್ಮವು ಬೆಳಗಲಿ!" ಎಂದು ಬೇಡಿದರು.

ಗಾಂಧೀಜಿಯವರಿಗೂ ರಾಧಾಕೃಷ್ಣನ್ನರ ಯೋಗ್ಯತೆಯು ತಿಳಿದಿತ್ತು. ಇಂದಿನ ಕಾಲದಲ್ಲಿ ಜನತೆಗೆ ಆಧ್ಯಾತ್ಮಿಕ ಪ್ರಜ್ಞೆಯೂ ಅಗತ್ಯವಿದೆ. ಅದನ್ನಿವರು ಮಾಡಬಲ್ಲರು. ವಿಶ್ವ ಶಾಂತಿಯ ಸಾಧನೆಯಲ್ಲಿ ಸರ್ವಪಲ್ಲಿಯವರೂ ಒಬ್ಬರಾಗುತ್ತಾರೆಂದರಿತೇ ಹರಸಿ ಕಳುಹಿದರು.

ಸರ್ವಪಲ್ಲಿಯವರು ಇಂಗ್ಲೆಂಡನ್ನು ತಲುಪಿದರು. ಈ ಸುದ್ದಿಯು ಆ ದೇಶದ ನಾನಾ ಮೂಲೆ ಮೂಲೆಗಳಿಗೆ ಹರಡಿತು. ಸರಿ! ಆಹ್ವಾನಗಳ ಮೇಲೆ ಆಹ್ವಾನಗಳು ಬಂದುವು. ಎಲ್ಲಾ ಸಂಘಗಳೂ ಇವರ ಉಪನ್ಯಾಸವನ್ನು ಕೇಳಲು ಹಾತೊರೆಯುತ್ತಿದ್ದುವು. ಅವುಗಳಲ್ಲಿ ಮುಖ್ಯವಾದುದು 'ಹಿಬ್ಬರ್ಟ್ ಮಿತ್ರಮಂಡಲಿ' ಆ ಸಂಸ್ಥೆಯು ಹಿಬ್ಬರ್ಟ್ ಉಪನ್ಯಾಸಮಾಲಿಯಲ್ಲಿ ಉಪನ್ಯಾಸ ನೀಡಲು ಸರ್ವಪಲ್ಲಿಯವರನ್ನು ಕೇಳಿತು. ಹಿಂದೊಮ್ಮೆ ರಾಧಾಕೃಷ್ಣನ್ನರು ಇಂಗ್ಲೆಂಡಿಗೆ ಬಂದಿದ್ದಾಗಲೇ ಹಿಬ್ಬರ್ಟ್ ಸಂಚಿಕೆಯ ಸಂಪಾದಕರಾದ ಡಾ|| ಎಲ್. ಪಿ. ಜಾಕ್ಸ್‌ರವರು ಆಹ್ವಾನಿಸಿದ್ದರು. ಆದರೆ, ಆಗ ಅನಿವಾರ್ಯವಾಗಿ ಹೋಗಲಾಗಿರಲಿಲ್ಲ. ಎರಡನೆ ಸಾರಿ ಆಹ್ವಾನಿಸಿದ್ದನ್ನು ಮೀರಲಾಗದೆ ಒಪ್ಪಿಕೊಂಡರು. ಅಲ್ಲಿಯೂ ಕೂಡ ಉಪನ್ಯಾಸ ಮಾಡಿದ ಭಾರತೀಯರಲ್ಲಿ ಸರ್ವಪಲ್ಲಿಯವರೇ ಮೊದಲಿಗರು. ಇವರ ಉಪನ್ಯಾಸಗಳು ಲಂಡನ್ ಮತ್ತು ಮ್ಯಾಂಚೆಸ್ಟರ್ ನಗರಗಳೆರಡರಲ್ಲೂ ನಡೆದುವು. ಮೊದಲೇ ಸರ್ವಪಲ್ಲಿಯವರ ಮಾತಿನ ರುಚಿಯನ್ನು ಕಂಡಿದ್ದ

ಲೀಸ್ಲರು ಮತ್ತಷ್ಟು ಆಸಕ್ತಿಯಿಂದ ಬಹಳ ಮಂದಿ ಶ್ರೋತೃಗಳಾಗಿ ಬಂದು ಸೇರುವರು. ಭಾಷಣದ ವಸ್ತು 'ಜೀವನದ ಆದರ್ಶ ದೃಷ್ಟಿ (The Idealistic View of Life)' ಎಂಬುದು.

ಇದರಲ್ಲಿ ಪ್ರಪಂಚದ ಕೊರತೆಗಳನ್ನು ಪ್ರತಿಪಾದಿಸುತ್ತಾರೆ. ಯಾವ ರಾಜಕೀಯವಾಗಲೀ ಸಾಮಾಜಿಕವಾಗಲೀ ಅಥವಾ ಆರ್ಥಿಕಸ್ಥಿತಿ ಯಾಗಲೀ ಮಾತುಗಳಿಂದ ಸುಧಾರಣೆಯನ್ನು ಹೊಂದಲಾರವು. ಮನಸ್ಸು ಮತ್ತು ಶರೀರಗಳಿಗೆ ಸರಿಯಾದ ಶಿಕ್ಷಣವನ್ನು ಕೊಡಬೇಕು. ಇದರಿಂದ ಆತ್ಮವೂ ಪರಿವರ್ತನೆಯನ್ನು ಹೊಂದುತ್ತದೆ ಹೀಗೆ ಶಿಕ್ಷಿತರಾದ ಹೊಸ ಜನಾಂಗವು ಬಂದಾಗಲೇ ಈ ಸುಧಾರಣೆಗಳು ಸಾಧ್ಯವಾದೀತು. ಎಂದಿದ್ದಾರೆ.

ಲಂಡನ್ನಿನ ವಿಶ್ವವಿದ್ಯಾನಿಲಯದ ವೈಸ್ ಛಾನ್ಸಲರ್ ರವರು ಸಮಾರಂಭದ ಮುಕ್ತಾಯ ಭಾಷಣವನ್ನು ಮಾಡಿದರು. ಅದರಲ್ಲಿ "ನಿಜವಾಗಿಯೂ ಇಂದಿನ ಜನತೆಯಲ್ಲಿ ವೇದಾಂತದ ಬಗ್ಗೆ ಅನುಮಾನವಿದೆ. ಭೀತಿಯಿದೆ. ಅದನ್ನು ಹೇಗೆ ಪರಿಹರಿಸಿಕೊಳ್ಳಬೇಕೆಂಬುದನ್ನು ನೀವು ವಿವರಿಸಿದ್ದೀರಿ. ಭವಿಷ್ಯದಲ್ಲಿ ಬಾಳಲು ಧೈರ್ಯ ಮತ್ತು ಭರವಸೆಗಳನ್ನು ಜನತೆಗೆ ತುಂಬುತ್ತಿದ್ದೀರಿ. ಇದು ನಮ್ಮ ವಿಧ್ಯಾರ್ಥಿಗಳಿಗೆ ಬಹಳ ಉಪಯುಕ್ತವಾದ ವಿಷಯ. ಕ್ಲಿಷ್ಟಕರವಾದ ತತ್ವಶಾಸ್ತ್ರವನ್ನು ಇಷ್ಟು ಸರಳವಾಗಿ, ಪ್ರತಿಯೊಬ್ಬರಿಗೂ ಅರ್ಥವಾಗುವಂತೆ ಮಾತನಾಡಿರುವುದು ಬಹಳ ಆಶ್ಚರ್ಯಕರವಾದುದು. ಎಲ್ಲಕಿಂತಲೂ ಹೆಚ್ಚಾಗಿ ನಿಮಗೆ ಇಂಗ್ಲಿಷ್ ಭಾಷೆಯು ಮಾತೃಭಾಷೆಯಲ್ಲ. ಆದರೂ ನಿಮಗಿರುವ ನಮ್ಮ ಭಾಷಾ ಪಾಂಡಿತ್ಯವನ್ನು ತಿಳಿದು ನಮಗಾಗಿರುವ ಸಂತೋಷವನ್ನು ಹೇಳತೀರದು ಭಾರತ ದೇಶವು ಯಾವಾಗಲೂ, ಧರ್ಮಗಳ ಮತ್ತು ತತ್ವಜ್ಞಾನದ ತೌರೂರಾಗಿದೆ. ಆ ದೇಶದ ಮಹೋಪಾಧ್ಯಾಯರು ನೀವು. ನಿಮ್ಮ ಬಾಯಿಂದ ಈ ವಿಷಯಗಳನ್ನು ಕೇಳಿದುದು ನಮ್ಮ ಪುಣ್ಯ" ಎಂದು ಹೇಳಿದರು.

ಈ ಉಪನ್ಯಾಸಗಳು 1929ರಲ್ಲಿ ಗ್ರಂಥರೂಪವನ್ನು ಹೊಂದಿದವು. ಈ ಗ್ರಂಥದ ಶೀರ್ಷಿಕೆಯು ರಾಧಾಕೃಷ್ಣರ ಆಲೋಚನೆಯು ಹೇಗೆ ಓಡುತ್ತಿದೆ ಎಂಬುದನ್ನು ತಿಳಿಸುತ್ತದೆ. ದೇವರು ಸೃಷ್ಟಿಕರ್ತನಾಗಿರುವಂತೆ

ಪಾಲನಾಶಕ್ತನೂ, ಜಗತ್ತಿನ ಮಿತ್ರನೂ, ನ್ಯಾಯಾನ್ಯಾಯಗಳ ತೀರ್ಪನ್ನು ಕೊಡುವವನೂ ಆಗಿರುತ್ತಾನೆಂದು, ಅವರ ವಾದದ ಸಾರವಾಗಿದೆ. ಈ ಗ್ರಂಥದ ಬಗೆಗೆ ಪ್ರೊ|| ಸಿ. ಯಿ. ಎಮ್. ಜೋಡ್ ಎಂಬುದು 'ಸ್ಪೆಕ್ಟೇಟರ್' ಎಂಬ ತಮ್ಮ ಪತ್ರಿಕೆಯಲ್ಲಿ ಬರೆಯುತ್ತಾ "ಪ್ರೊ|| ರಾಧಾಕೃಷ್ಣನ್ನರು ಅಪರೂಪವಾದ ಒಂದು ವರವನ್ನು ಹೊಂದಿದ್ದಾರೆ. ಆದುದರಿಂದಲೇ ಅವರ ಕೃತಿಯು ಪ್ರಮಾಣಿಕವಾದುದು. ಓದಲರ್ಹವಾದುದು. ನಾನು ತಿಳಿದಮಟ್ಟಿಗೆ ಆಧುನಿಕವಾಗಿ, ಇಷ್ಟರಮಟ್ಟಿಗೆ ಧರ್ಮಗಳನ್ನು ವಿಮರ್ಶೆ ಮಾಡಿ ತಿಳಿಸುವ ಪುಸ್ತಕವು ಮತ್ತೊಂದಿಲ್ಲ. ಇದು ನಮ್ಮ ಕಾಲಕ್ಕೆ ಅತ್ಯಗತ್ಯವಾದ ಹಾಗೂ ಸ್ಥಿರವಾಗುಳಿಯುವ ಗ್ರಂಥವಾಗಿದೆ" ಎಂದಿದ್ದಾರೆ.

ಈ ಗ್ರಂಥದಲ್ಲಿ ಅರವಿಂದಘೋಷರ ಪ್ರಭಾವವು ಸ್ಪಷ್ಟವಾಗಿ ಕಾಣುತ್ತದೆ. ಅವರ ಭಾರತೀಯ ತತ್ವಶಾಸ್ತ್ರ (Indian Philosophy) ಎಂಬುದು ಬಹಳ ಮುಖ್ಯವಾದ ಗ್ರಂಥ. ಅದನ್ನು ರಾಧಾಕೃಷ್ಣನ್ ಮತ್ತು ಸಿ. ಈ. ಮೂರ್ ಎಂಬುವರು "ಭಾರತೀಯ ತತ್ವಶಾಸ್ತ್ರದಲ್ಲಿ ಮೂಲಗ್ರಂಥ (A Source book in Indian Philosophy) ಎಂಬ ಹೆಸರಿನಲ್ಲಿ 1947ರಲ್ಲಿ ಆಗ್ರಂಥವನ್ನು ಪ್ರಕಟಗೊಳಿಸಿದ್ದಾರೆ. ಅದರಲ್ಲಿನ ಹದಿನೇಳನೆಯ ಅಧ್ಯಾಯವು 'ಧಾರ್ಮಿಕ ಅನುಭವ ಮತ್ತು ಅದರ ಧೃಡವಚನಗಳು' ಎಂಬುದು ಇದು ಬಹಳ ಮುಖ್ಯವಾದ ಹಾಗೂ ಸುಂದರವಾದ ಅಧ್ಯಾಯ ಇದರ ಪ್ರಭಾವವೇ ಸರ್ವಪಳ್ಳಿಯವರಿಗಾದುದು. ಒಬ್ಬೊನ ಮತ್ತೊಬ್ಬನ ಜೀವನದ ಭಾರವನ್ನಾಗಲೀ, ನಂಬಿಕೆಯನ್ನಾಗಲೀ, ಶಕ್ತಿಯನ್ನಾಗಲೀ ಅಲ್ಲಾಡಿಸಲು ಸಾಧ್ಯವಿಲ್ಲ ಎನ್ನುತ್ತಾರೆ. ಒಬ್ಬ ತತ್ವಜ್ಞಾನಿ ಪ್ರಪಂಚದ ವಿಷಯಾಸಕ್ತಿಗಳಲ್ಲಿ ದೂರವಾಗ ಬೇಕೆಂಬುದೇನಿಲ್ಲ ಎಂಬ ವಿಷಯವನ್ನು ವಿವರಿಸುವರು. ಸಂಸಾರಿಕ ಜೀವನದಿಂದ ಹಿಂಜರಿಯುವುದು ಧಾರ್ಮಿಕ, ಸಂಪ್ರದಾಯವಲ್ಲ. ಸಂಸಾರದಲ್ಲಿ ಸಹಭಾಗಿಗಳಾಗಬೇಕು, ಎಂಬ ವಿಷಯಗಳಿಗೆ ಈಶೋಪನಿಷತ್ತಿನಿಂದ ಉದಾಹರಣೆಗಳನ್ನು ಕೊಟ್ಟು ಸಮರ್ಥಿಸುತ್ತಾರೆ.

ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯದಲ್ಲಿ ತಮ್ಮ ಕೆಲಸಕಾರ್ಯಗಳನ್ನು ಮುಗಿಸಿ, ಬಿಡುವಾದಾಗ, ತಮ್ಮನ್ನು ಆಹ್ವಾನಿಸುತ್ತಿದ್ದ ಧರ್ಮ ಸಂಸ್ಥೆ

ಗಳಿಗೆ ಹೋಗಿ ಉಪನ್ಯಾಸವನ್ನು ಕೊಡುತ್ತಿದ್ದರು. ಅಂತಹ ಸಂದರ್ಭ ಗಳಲ್ಲಿ ಪ್ರತಿಯೊಂದು ಧರ್ಮವೂ ಪ್ರತಿಯೊಬ್ಬನಿಗೂ ನ್ಯಾಯವನ್ನು ಸಾರುತ್ತದೆ. ಪ್ರಾಣಿಗಳಲ್ಲಿ ದಯೆ, ಮತ್ತು ಬಡವರಲ್ಲಿ ಸಹಾನುಭೂತಿ ಯನ್ನು ತೋರುವಂತೆ ಹೇಳುತ್ತದೆ. ಸಮಾಜದಲ್ಲಿ ಸ್ವತಂತ್ರರಾಗಿ, ಸುಖ ವಾಗಿ ಬಾಳಲು ಅವಕಾಶವನ್ನು [illegible] ಎಂಬ ವಿಷಯಗಳನ್ನು ವಿವರಿಸುತ್ತಿದ್ದರು. ಇಂತಹ ಧರ್ಮೋಪದೇಶಗಳನ್ನ ಕೆಲವು [illegible]ಗಳಲ್ಲಿಯೂ ನೀಡಿದ್ದರೆ [illegible] ಉಪನ್ಯಾಸ [illegible] ಸಂಕುಚಿತತೆಯನ್ನಾಗಲೀ, ಪರ ಧರ್ಮ ದ್ವೇಷದ ಆವೇಶಗಳನ್ನಾಗಲೀ [illegible] ಕಾಣುವಂತಿಲ್ಲ. ಅವನ್ನೇ ಅಲ್ಲಿನ ಒಂದು ಪತ್ರಿಕೆಯು "ರಾಧಾಕೃಷ್ಣರ ಉಪನ್ಯಾಸವನ್ನು ಕೇಳಿದವರೆಲ್ಲರೂ ತಮ್ಮ ಹೃದಯಗಳನ್ನು ಸರ್ವಶಕ್ತಿಯುತನಿಗೆ ನೀಡಿಬಿಡು ತ್ತಾರೆ" ಎಂದು ಹೇಳಿತು.

ಆಗ ಆಕ್ಸ್‌ಫರ್ಡಿನಲ್ಲಿ ಮಾಡಿದ ಉಪನ್ಯಾಸಗಳು ಬಹಳ ಉಪ ಯುಕ್ತವಾದುವುಗಳು. ಅವುಗಳಲ್ಲಿ 1930ನೇ ಜುಲೈ ಎಂಟರಂದು ಮಾಡಿದ "ಕಷ್ಟಗಳಿಂದ ಕ್ರಾಂತಿ (Revolution Through Suffering) ಎಂಬ ಉಪನ್ಯಾಸ ಬಹಳ ಜನಪ್ರಿಯವಾಯಿತು. ಇದು "ಇಜಿಯಾ ಕಿಯಾಲ್" ಎಂಬ ಗ್ರಂಥದ ಇಪ್ಪತ್ತೆಂಟನೆಯ ಅಧ್ಯಾಯದ ಇಪ್ಪತ್ತಾರ ನೆಯ ಚರಣವನ್ನು ಆಧಾರವಾಗಿಟ್ಟುಕೊಂಡು ಮಾತನಾಡಿದುದು. ಆಗ ಅವರು "ಈ ಪುಸ್ತಕವನ್ನು ಮತ್ತೆ ಮತ್ತೆ ಓದುತ್ತೇನೆ. ಮತ್ತಾರಾದರೂ ಓದಲು ಅಪೇಕ್ಷಿಸಿದ್ದರೆ ಇದನ್ನು ಕೊಟ್ಟು, ಅವರು ಓದುವಂತೆ ಪ್ರೋತ್ಸಾಹಿ ಸುತ್ತೇನೆ. ಈ ಗ್ರಂಥದಿಂದ ವಾಕ್ಚಾತುರ್ಯವು ಮತ್ತು ಅರಿವಿನ ಶಕ್ತಿಯು ಉಂಟಾಗುತ್ತದೆ. ಇದರ ಉಪದೇಶವು ಮಾನವ ಚೈತನ್ಯಕ್ಕೆ ಒಂದು ದೊಡ್ಡ ಮಹತ್ವವನ್ನು ನೀಡುತ್ತದೆ. ನಾವು ದೇವರ ಗುಲಾಮರಾಗಬೇಕಾ ದರೆ ಸತ್ಯಕ್ಕಾಗಿ ಕೆಲಸಮಾಡಬೇಕು. ಮಾನವತಕ್ಕ ಸತ್ಕಾರ್ಯವು ಮನುಷ್ಯ ನಿಂದ ಮನುಷ್ಯನಿಗೂ ಸಮಾಜದಿಂದ ಸಮಾಜಕ್ಕೂ, ರಾಷ್ಟ್ರದಿಂದ ರಾಷ್ಟ್ರ ಗಳಿಗೂ ಸೌಹಾರ್ದವನ್ನು ಕೊಡುವ ಸಂಬಂಧವಿರಬೇಕು. ಸ್ವತಂತ್ರ ರಾಗುವ ಬಯಕೆಯು ಸಾಮಾನ್ಯವಾಗಿ ಪ್ರತಿಯೊಬ್ಬರಿಗೂ ಇದೆ. ಆದರೆ, ತನ್ನ ರಾಷ್ಟ್ರಕ್ಕೆ ಎಲ್ಲಿ ಅವಮಾನವಾಗುವುದೋ ಎಂಬ ಅಂಜಿಕೆಯನ್ನು

ರಾಧಾಕೃಷ್ಣರಂತಹ ಮೇಧಾವಿಗಳು ಇಂಗ್ಲೇಂಡಿಗೆ ಆಗಾಗ ಬಂದು ಹೋಗುತ್ತಿರುವುದೊಳ್ಳೆಯದು, ಬರುವವರು ಆದೇಶದ ಕಷ್ಟಸುಖಗಳನ್ನೂ ಸ್ಥಿತಿಗತಿಗಳನ್ನು ತಂದು ನಮಗೆ ತಿಳಿಸುವುದು ಶ್ರೇಷ್ಠ. ಇದೇ ರೀತಿಯಲ್ಲಿ ಕೆಲವು ಆಂಗ್ಲರು ಭಾರತಕ್ಕೆ ಹೋಗಿ, ನಮ್ಮ ದೇಶದ ಸ್ಥಿತಿಗತಿಗಳನ್ನೂ, ಭಾವನೆಗಳನ್ನೂ ತಿಳಿಸುವುದೂ ಸರಿಯೇ. ಹೀಗೆ ಮಾಡುವುದರಿಂದ ಇಂಡಿಯಾಕ್ಕೂ ಇಂಗ್ಲೇಂಡಿಗೂ ಹೆಚ್ಚಿನ ಪರಸ್ಪರ ತಿಳುವಳಿಕೆಯುಂಟಾಗುತ್ತದೆ. ಪರಸ್ಪರ ಗೌರವವೂ ಹೆಚ್ಚುತ್ತದೆ. ಎಂದು ಹೇಳಿದ್ದಾಳೆ.

ರಾಧಾಕೃಷ್ಣನ್ನರು ನಿಜವಾಗಿಯೂ ಭಾರತದೇಶದ ಉನ್ನತಭಾವನೆಯನ್ನು ಬ್ರಿಟನ್ನಿನಲ್ಲಿ ತೋರಿದರು. ಮೊದಲು ಇಂಡಿಯಾದ ಬಗ್ಗೆ ಆಂಗ್ಲರು ತಿಳಿದಿದ್ದ ತಪ್ಪು ಭಾವನೆಗಳನ್ನು ಹೋಗಲಾಡಿಸಿದರು ಎಂದರೂ ತಪ್ಪಾಗಲಾರದು.

# ಆಂಧ್ರ ವಿಶ್ವವಿದ್ಯಾನಿಲಯದಲ್ಲಿ

ಡಾ|| ರಾಧಾಕೃಷ್ಣನ್‌ರವರು ಆಕ್ಸ್‌ಫರ್ಡಿನಿಂದ ಹಿಂದಿರುಗಿದರು. ಕಲ್ಕತ್ತಾ ವಿಶ್ವವಿದ್ಯಾನಿಲಯವನ್ನು ಸೇರಿದಾಗ ಮಾಡಿಕೊಂಡಿದ್ದ ವಾಯಿದೆ ಇನ್ನೂ ಮುಗಿದಿರಲಿಲ್ಲ. ಆದಕ್ಕಾಗಿ ಕಲ್ಕತ್ತಾ ವಿಶ್ವವಿದ್ಯಾನಿಲಯಕ್ಕೆ ಬಂದರು. ಅಲ್ಲಿ ತಮ್ಮ ವೃತ್ತಿಯಾದ, ಮಾನಸಿಕ, ಮತ್ತು ನೀತಿ ವಿಜ್ಞಾನದ ಪ್ರಾಧ್ಯಾಪಕರಾಗಿ ಮುಂದುವರಿದರು. 1931ಕ್ಕೆ ಕಲ್ಕತ್ತಾ ವಿಶ್ವವಿದ್ಯಾನಿಲಯದೊಡನೆ ಮಾಡಿಕೊಂಡಿದ್ದ ಹತ್ತುವರ್ಷಗಳ ಗಡುವು ಮುಗಿಯಿತು. ಅವರು ಕಲ್ಕತ್ತಾದಲ್ಲಿ ಪ್ರಾಧ್ಯಾಪಕರಾಗಿದ್ದಾಗಲೇ ಏಷ್ಯಾಖಂಡದ ವಿದ್ಯಾಭ್ಯಾಸದ ಚರ್ಚಾಗೋಷ್ಠಿಯು ಬೆನಾರಸ್ಸಿನಲ್ಲಿ ನಡೆಯಿತು. ಆ ಗೋಷ್ಠಿಯ ಅಧ್ಯಕ್ಷರಾಗಿ ಕಾರ್ಯವನ್ನು ನಿರ್ವಹಿಸಿದರು.

ಸರ್ವಪಳ್ಳಿಯವರಿಂದ ಕಲ್ಕತ್ತಾ ವಿಶ್ವವಿದ್ಯಾನಿಲಯದ ಕೀರ್ತಿಯು ವಿಶ್ವದಲ್ಲೆಲ್ಲಾ ಹರಡಿತ್ತು. ಆದುದರಿಂದ ವಾಯಿದೆ ಮುಗಿದರೂ, ಕೂಡ ಕಲ್ಕತ್ತಾ ವಿಶ್ವವಿದ್ಯಾನಿಲಯವು ಇವರನ್ನು ಬಿಟ್ಟುಕೊಡಲು ಇಷ್ಟಪಡಲಿಲ್ಲ. ಅವರ ಜೀವನ ಪರ್ಯಂತ ಅಲ್ಲಿಯೇ ಪ್ರಾಧ್ಯಾಪಕರಾಗಿ ಉಳಿಯಬೇಕೆಂದು ಸರ್ವಪಳ್ಳಿಯವರನ್ನು ಪ್ರಾರ್ಥಿಸಿತು. ಇವರು ವಿಶ್ವವಿಖ್ಯಾತಿಯನ್ನು ಗಳಿಸಲು ಕಲ್ಕತ್ತಾ ವಿಶ್ವವಿದ್ಯಾನಿಲಯವೇ ಕಾರಣವಾಗಿತ್ತು. ಪರದೇಶಗಳಿಗೆ ಹೋಗಲು ಇವರಿಗೆ ಅವಕಾಶವನ್ನು ಕಲ್ಪಿಸಿಕೊಟ್ಟಿತ್ತು. ಆದರೆ ನಮ್ಮ ನಾಡಾದ ಆಂಧ್ರದೇಶವು ಇವರಿಗೆ ಒತ್ತಾಯಪೂರ್ವಕವಾಗಿ ಆಹ್ವಾನವನ್ನು ನೀಡಿತ್ತು.

1929ರಲ್ಲಿ ಆಂಧ್ರ ವಿಶ್ವವಿದ್ಯಾನಿಲಯವು ವಿಜಯವಾಡದಲ್ಲಿ ಪ್ರಾರಂಭವಾಗಿತ್ತು. ಅಲ್ಲಿ ಮಾತೃಭಾಷೆಯಾದ ತೆಲಗು, ಚರಿತ್ರೆ, ಭೂಗೋಳ ಮುಂತಾದ ಸಾಮಾನ್ಯ ವಿಷಯಗಳು ಮಾತ್ರ ವಿದ್ಯಾರ್ಥಿಗಳಿಗೆ ಬೋಧಿಸಲ್ಪಡುತಿತ್ತು. ನಾಲ್ಕು ವರ್ಷಗಳು ಕಳೆದಿದ್ದರೂ. ಅನೇಕ ವಿದ್ಯಾರ್ಥಿಗಳಿಗೆ ಪದವಿಗಳನ್ನು ಕೊಟ್ಟಿದ್ದರೂ, ಅದು ಪರಿಪೂರ್ಣವಾದ ವಿಶ್ವವಿದ್ಯಾನಿಲಯವಾಗಿರಲಿಲ್ಲ. ಪರೀಕ್ಷಾದೃಷ್ಟಿಯಿಂದ ಮಾತ್ರ ಪಾಠ

ಪ್ರವಚನಗಳು ನಡೆಯುತ್ತಿದ್ದುವು. ಇದನ್ನು ಸುಧಾರಣೆಮಾಡಿ, ವಿದ್ಯಾರ್ಥಿಗಳು ಅಲ್ಲಿಯೇ ಉಳಿಯುವಂತೆ ವಸತಿ ಸೌಕರ್ಯಗಳನ್ನು ಏರ್ಪಡಿಸಿ, ಒಂದು ಆದರ್ಶ ವಿಶ್ವವಿದ್ಯಾನಿಲಯವನ್ನಾಗಿ ಮಾಡಲು ಅದರ ವ್ಯವಸ್ಥಾಪಕ ಮಂಡಲಿಯು ತೀರ್ಮಾನಿಸಿತ್ತು. ಅದರ ಬೆಳವಣಿಗೆಗೆ ಸರಿಯಾದ ಒಬ್ಬ ಉಪಕುಲಪತಿಯನ್ನು ಹುಡುಕಬೇಕಾಯಿತು. ಸಮಿತಿಯು ತನ್ನ ನಾಡಿನವರೇ ಆದ ಡಾ|| ರಾಧಾಕೃಷ್ಣನ್‌ರವರನ್ನು ಕರೆಯಲು ತೀರ್ಮಾನಿಸಿತು. ಇವರಿಗಿಂತಲೂ ಉತ್ತಮ ಮೇಧಾವಿಯನ್ನು ಅವರು ಕಾಣದಾದರು. ಸರ್ವಪಳ್ಳಿಯವರಲ್ಲಿ ಸಾಕಷ್ಟು ವಿದ್ಯಾಪ್ರೌಢಿಮೆಯು ಇತ್ತು. ಆಷ್ಟರಲ್ಲೇ ಮೂರು ನಾಲ್ಕು ವಿಶ್ವವಿದ್ಯಾನಿಲಯಗಳಲ್ಲಿ ಕೆಲಸ ಮಾಡಿ ಹೆಸರುಗಳಿಸಿದ್ದರು. ಉತ್ತಮ ಶಿಕ್ಷಣತಜ್ಞರೂ ಆಗಿದ್ದರು. ಪರದೇಶಗಳನ್ನು ಸುತ್ತಾಡಿ ಬಂದಿದ್ದುದರಿಂದ, ಅಲ್ಲಿಯ ಶಿಕ್ಷಣ ಕ್ರಮವನ್ನೂ ಅರಿತಿದ್ದರು. ವಿದ್ಯಾರ್ಥಿಗಳ ಹಿತೈಷಿಗಳಾಗಿ ವರ್ತಿಸುವ ಗುಣವು ಇವರಲ್ಲಿದೆ ಎಂಬುದಂತೂ ಸ್ಪಷ್ಟವಾಗಿತ್ತು. ಭಾರತಕ್ಕೆ ಎಂತಹ ವಿದ್ಯಾಭ್ಯಾಸಬೇಕು? ಎಂಬುವದರ ಜ್ಞಾನವೂ ಇವರಲ್ಲಿತ್ತು. ಒಟ್ಟಿನಲ್ಲಿ ಒಂದು ಉತ್ತಮ ವಿಶ್ವವಿದ್ಯಾನಿಲಯದ ವೈಸ್-ಛಾನ್ಸಲರ್ ಆಗಿರಲು ಎಲ್ಲಾ ಯೋಗ್ಯತೆಗಳೂ ಇವರಲ್ಲಿತ್ತು. ಆದುದರಿಂದಲೇ ಆಂಧ್ರ ವಿಶ್ವವಿದ್ಯಾನಿಲಯದ ವ್ಯವಸ್ಥಾ ಸಮಿತಿಯು ಇವರನ್ನು ಒತ್ತಾಯಪೂರ್ವಕವಾಗಿ ಬೇಡಿದರು.

ಸ್ವಜನರ ಸೇವೆಮಾಡಲು ಅವಕಾಶ ಸಿಕ್ಕುದುದಕ್ಕಾಗಿ ಸರ್ವಪಳ್ಳಿಯವರಿಗೂ ಸಂತೋಷವೇ ಆಯಿತು. ಅಲ್ಲದೆ ತಮ್ಮ ಬಂಧು-ಮಿತ್ರರ ಬೇಡಿಕೆಯನ್ನು ಮೀರುವಂತೆಯೂ ಇರಲಿಲ್ಲ.

ನೂತನ ಆಂಧ್ರ ವಿಶ್ವವಿದ್ಯಾನಿಲಯವು ವಾಲ್ಟೈರಿನಲ್ಲಿ ಪ್ರಾರಂಭವಾಯಿತು. ಅಲ್ಲಿಗೆ ಸರ್ವಪಳ್ಳಿಯವರು 1931ರಲ್ಲಿ ಹೋಗಿ ಅಧಿಕಾರ ಸ್ವೀಕರಿಸಿದರು. ಭಾರತದಲ್ಲಿದ್ದ ವೈಸ್-ಛಾನ್ಸಲರುಗಳ ಪೈಕಿ ಇವರೇ ಅತ್ಯಂತ ಕಿರಿಯರಾಗಿದ್ದರು. ಆಗ ಇವರಿಗಿನ್ನೂ ಕೇವಲ ನಲವತ್ತುಮೂರು ವರ್ಷಗಳು.

ಅದೇ ವರುಷ 'The Spirit in Man (ಮನುಷ್ಯನಲ್ಲಿ ಚೈತನ್ಯ)' ಎಂಬ ಇವರ ಮತ್ತೊಂದು ಗ್ರಂಥವು ಪ್ರಕಟವಾಯಿತು. ಇದು

Coxton Hall (ಕಾಕ್ಸಟನ್ ಸಭೆಯಲ್ಲಿ) ಮಾಡಿದ್ದ ಉಪನ್ಯಾಸಗಳ ಸಂಕಲನವು.

ಇವರ ಕಾಲದಲ್ಲಿ ಆಂಧ್ರ ವಿಶ್ವವಿದ್ಯಾನಿಲಯವು ಬಹಳ ಮುಂದುವರಿಯಿತು. ತಮ್ಮ ವಿದ್ಯಾಪರಿಣತಿ, ಲೋಕಾನುಭವಗಳ ಜೊತೆಗೆ ತನ್ನದೆಂಬ ಹೆಚ್ಚಿನ ಅಭಿಮಾನದಿಂದ ದುಡಿದರು. ವಿದ್ಯಾರ್ಥಿಗಳ ಸಂಖ್ಯೆಯು ಮೊದಲಿದ್ದುದಕ್ಕಿಂತಲೂ ಇಮ್ಮಡಿಯಾಗಿ ಮುಮ್ಮಡಿಯಾಯಿತು. ತಾವು ಇಲ್ಲಿನ ವೈಸ್-ಛಾನ್ಸಲರ್ ಎಂಬ ಬಿಗುಮಾನದಿಂದ ಸರ್ವಪಳ್ಳಿಯವರು ದೂರವಿರುತ್ತಿರಲಿಲ್ಲ. ಹುಡುಗರೊಡನೆ ಬೆರೆತು ಪ್ರೀತಿಯಿಂದ ಜ್ಞಾನವನ್ನು ನೀಡುತ್ತಿದ್ದರು. ಯುವಕರಲ್ಲಿ ಕ್ರಿಯಾತ್ಮಕ ಶಕ್ತಿಯನ್ನು ಬೆಳೆಸಲು ಪ್ರೋತ್ಸಾಹಿಸುತ್ತಿದ್ದರು. ಅವರ ವೈಯಕ್ತಿಕ ಆಸಕ್ತಿಗಳಿಗನುಗುಣವಾಗಿ ಸಹಾಯಮಾಡುತ್ತಿದ್ದರು. ಉತ್ತಮ ಉಪಾಧ್ಯಾಯರುಗಳನ್ನೇ ಆರಿಸಿಕೊಂಡಿದ್ದರು. ವಿಜ್ಞಾನದಲ್ಲಿ ಇಂದು ಲೋಕವಿಖ್ಯಾತರಾದ ಸರ್. ಸಿ. ವಿ. ರಾಮನ್‌ರವರು ಸರಿ ಸುಮಾರು ಇವರ ಸಮವಯಸ್ಕರು. ಕಲ್ಕತ್ತಾ ವಿಶ್ವವಿದ್ಯಾನಿಲಯದಲ್ಲಿ ಇವರ ಜೊತೆಯಲ್ಲಿಯೇ ಕೆಲಸ ಮಾಡುತ್ತಿದ್ದರು. ಅವರನ್ನೂ ಸಹ ಆಂಧ್ರ ವಿಶ್ವವಿದ್ಯಾನಿಲಯಕ್ಕೆ ಬರಮಾಡಿಕೊಂಡರು. ಅಲ್ಲಿಯೇ ಸರ್ [illegible] ಎಂಬ ವಿದ್ವಾಂಸರೂ ಇದ್ದರು. ಈ ಮೂವರೂ ಸೇರಿ ವಿದ್ಯಾರ್ಥಿಗಳಲ್ಲಿ ಓದುವ ಆಸಕ್ತಿಯನ್ನು ಹೆಚ್ಚಿಸಿದರು. ನಾನಾ ರಂಗಗಳಲ್ಲಿ ಸಂಶೋಧನೆಗಳನ್ನು ನಡೆಸಲು ಅವಕಾಶಗಳನ್ನು ಕಲ್ಪಿಸಿಕೊಟ್ಟರು.

ಇವರ ದಿನಚರಿಯು ನಡವಳಿಕೆಗಳು ವಿದ್ಯಾರ್ಥಿಗಳಮೇಲೆ ಪ್ರಭಾವ ಬೀರಿತು. ಸರ್ವಪಳ್ಳಿಯವರು ವಿದ್ಯಾರ್ಥಿಗಳಿಗೆ ಜ್ಞಾನವನ್ನು ಹೆಚ್ಚಿಸುವುದರ ಜೊತೆಗೆ ಶರೀರದ ಆರೋಗ್ಯದ ಕಡೆಗೂ ಹೆಚ್ಚುಗಮನವನ್ನು ಕೊಡುತ್ತಿದ್ದರು. ವಿದ್ಯಾರ್ಥಿಗಳಲ್ಲಿ ಪರಸ್ಪರ ಮಿತ್ರತ್ವವು ಬೆಳೆಯುವಂತೆ, ಆಗಾಗ ಆಟಗಳ ಸ್ಪರ್ಧೆಗಳನ್ನು ಏರ್ಪಡಿಸುತ್ತಿದ್ದರು. ಪ್ರತಿಯೊಬ್ಬನಿಗೂ ಅದರಲ್ಲಿ ಸರದಿಯು ಬರುವಂತೆ ಗಮನ ವಿಟ್ಟಿರುತ್ತಿದ್ದರು. ಇದರಿಂದ ಅವರವರ ನಡವಳಿಕೆಗಳು ವಿನಿಮಯವಾಗುವುದರ ಜೊತೆಗೆ ವಿದ್ಯಾರ್ಥಿಗಳಲ್ಲಿ ಐಕ್ಯತೆಯ ಮನೋಭಾವನೆಯುಂಟಾಗುತ್ತಿತ್ತು. ರವೀಂದ್ರನಾಥ ಠಾಗೂರ

ರಂತಹ ಮಹಾ ವಿದ್ವಾಂಸರುಗಳನ್ನು ದೇಶದ ನಾನಾ ಕಡೆಗಳಿಂದ ಆಹ್ವಾನಿಸಿ ಅವಿದ್ಯಾರ್ಥಿಗಳಿಗೆ ಹಲವು ವಿಷಯಗಳ ಮೇಲೆ ಉಪನ್ಯಾಸಗಳನ್ನು ಕೊಡಿಸಿದರು.

ಕುಲಪತಿಗಳಾಗಿಯೂ ತಮ್ಮ ಸಾಹಿತ್ಯ ನಿರ್ಮಾಣವನ್ನು ನಿಲ್ಲಿಸಲಿಲ್ಲ. 1932ರಲ್ಲಿ 'The Heart of Hinduisum (ಹಿಂದೂ ಧರ್ಮದ ಹೃದಯ) ಎಂಬಗ್ರಂಥವನ್ನು ಹೊರತಂದರು. ಅದು ಮದರಾಸಿನಲ್ಲಿ ಪ್ರಕಟವಾಯಿತು.

ಹೀಗೆ ಐದುವರ್ಷಗಳ ಕಾಲ ಆಂಧ್ರ ವಿಶ್ವವಿದ್ಯಾನಿಲಯದಲ್ಲಿ ವೈಸ್-ಛಾನ್ಸಲರ್ ಆಗಿದ್ದು, ಅದನ್ನು ನಿಜವಾದ ಆದರ್ಶವಿಶ್ವವಿದ್ಯಾನಿಲಯವನ್ನಾಗಿ ಮಾಡಿದರು.

ಅಷ್ಟರಲ್ಲಿ ಆಕ್ಸಫರ್ಡಿನಿಂದ ಮತ್ತೆ ಆಹ್ವಾನಬಂದಿತು. ಅಲ್ಲಿ "Eastern Religions and Ethics (ಪೌರ್ವಾತ್ಯ ಧರ್ಮಗಳು ಮತ್ತು ನೀತಿತತ್ವಗಳು" ಎಂಬ ವಿಷಯದ ಪ್ರಾಧ್ಯಾಪಕ ವೃತ್ತಿಗಾಗಿ ಇವರನ್ನು ಆಕ್ಸಫರ್ಡಿನ ಆಡಳಿತ ಮಂಡಳಿಯು ಆಹ್ವಾನಿಸಿತ್ತು. ಇಂತಹ ಮುಖ್ಯ ಹುದ್ದೆಗೆ ಹೀಗೆ ಕರೆಯಲ್ಪಟ್ಟವರ ಪೈಕಿ ಇಡೀ ಏಷ್ಯಾಖಂಡದಲ್ಲೆಲ್ಲಾ ಇವರೇ ಮೊದಲಿಗರು. ಆದುದರಿಂದಲೇ ಇವರು ಆ ಕೋರಿಕೆಯನು ಮನ್ನಿಸಿದುದು.

ಈ ಸುದ್ದಿಯು ಹೊರಬಿದ್ದಕೂಡಲೆ ಭಾರತದ ನಾನಾಭಾಗಗಳಿಂದ ಆಹ್ವಾನಗಳು ಸರ್ವಪಳ್ಳಿಯವರಿಗೆ ಬಂದವು. ಇವರ ಗೌರವಾರ್ಥವಾಗಿ ಅಲ್ಲಲ್ಲಿ ಸಭೆಗಳು ಸೇರಿದುವು. ವಿಶಾಖ ಪಟ್ಟಣದ ಪೌರಸಭೆಯ ಸದಸ್ಯರೂ ಮತ್ತು ಅಧ್ಯಕ್ಷರೂ ಇವರಿಗಾಗಿ ಒಂದು ಸತ್ಕಾರ ಕೂಟವನ್ನು ಏರ್ಪಡಿಸಿದರು. ಇವರು ಜಗತ್ತಿಗೆ ನೀಡಿದ ತತ್ವಗಳು ಮತ್ತು ನಾಗರಿಕತೆಯ ಮಾರ್ಗವನ್ನು ಹೊಗಳಿದರು. "ಭವ್ಯಭಾರತದಲ್ಲಿ ನೀವು ಗಳಿಸಿರುವ ಜ್ಞಾನದಮೂಲಕ ಆಟವಾಡುತ್ತಿದ್ದೀರಿ. ನಿಮ್ಮ ಹೆಸರು ನಮ್ಮದೇಶದಲ್ಲಿ ಎಂದೆಂದೂ ಅಚ್ಚಳಿಯದು. ಆಂಧ್ರ ವಿಶ್ವವಿದ್ಯಾನಿಲಯವನ್ನು ಕಟ್ಟುವುದರಲ್ಲಿ ಅದರ ಸುಧಾರಣೆಯಲ್ಲಿ ನಿಮ್ಮ ಪಾತ್ರವು ಹಿರಿದಾದುದು. ಇಲ್ಲಿನ ವಿದ್ಯಾರ್ಥಿಗಳೆಲ್ಲರೂ ನಿಮಗೆ ಚಿರಋಣಿಗಳು. ನಿಮ್ಮಲ್ಲಿರುವ ಆಡಳಿತ ಶಕ್ತಿ

ಮತ್ತು ಸಂಸ್ಥೆಯನ್ನು ವ್ಯವಸ್ಥೆ ಗೊಳಿಸುವುದರಲ್ಲಿನ ನಿಪುಣತೆಯು ನಿಮ್ಮಂತಹ ಗಣ್ಯವ್ಯಕ್ತಿಗಳಿಗಲ್ಲದೆ ಮತ್ತಾರಿಗೆ ಸಾಧ್ಯವಿದೆ ?" ಎಂದು ಹೇಳಿದರು.

ಇವರು ಬೊಂಬಾಯಿಯನ್ನು ಬಿಡುವ ಮೊದಲು ಅಲ್ಲಿಯ ಕವಿಗಳು ಪ್ರಬಂಧಕಾರರು. ಮತ್ತು ಕಥೆಗಾರರ ಸಂಘವು ಇವರನ್ನು ಬೀಳ್ಕೊಡುವ ಒಂದು ಸಮಾರಂಭವನ್ನು ಏರ್ಪಡಿಸಿತು. ಅದರಲ್ಲಿ ಪ್ರಪಂಚದ ನಾನಾ ಕಡೆಯ ಸಾಹಿತಿಗಳೂ, ಕವಿಗಳೂ, ಇದ್ದರು ಬಹಳ ಕಾಲದಿಂದ ರಾಧಾ ಕೃಷ್ಣನ್‌ರವರೂ ಕೂಡ ಆಸಂಘದ ಸದಸ್ಯರಲ್ಲೊಬ್ಬರಾಗಿದ್ದರು. ಕೆಲವು ಕಾಲ ಈ ಸಂಘದ ಭಾರತದ ಶಾಖೆಗೆ ಉಪಾಧ್ಯಕ್ಷರಾಗಿ ಸೇವೆಯನ್ನು ಸಲ್ಲಿಸಿದ್ದಾರೆ.

---

## ಮತ್ತೆ ಆಕ್ಸ್‌ಫರ್ಡಿಗೆ

ಈ ಸಾರಿ ಸರ್ವಪಳ್ಳಿಯವರು ಇಂಗ್ಲೇಂಡಿಗೆ ಹೋದಾಗ, ಅವರಲ್ಲಿ ಮತ್ತಷ್ಟು ಜ್ಞಾನವು ವೃದ್ಧಿಯಾಗಿತ್ತು. ಈಗಾಗಲೆ ಅನೇಕ ಸಾರಿ ಪರ ದೇಶಗಳನ್ನು ಸುತ್ತಿ ಬಂದಿದ್ದರು. ಆಯಾ ದೇಶದ ಜನಜೀವನ, ಧಾರ್ಮಿಕ ವಿಷಯ ಮತ್ತು ನಾಗರೀಕತೆಗಳ ಪ್ರತ್ಯಕ್ಷ ಅನುಭವವಾಗಿತ್ತು. ಅದರ ಜೊತೆಗೆ ಭಾರತವನ್ನು ತುಲನಾತ್ಮಕ ದೃಷ್ಟಿಯಿಂದ ನೋಡಿ ಆಲೋಚಿಸಿ ಕೊಂಡಿದ್ದರು. ಹೇಳುವುದಾದರೆ, ಈ ಸಾರಿ ಸರ್ವಪಳ್ಳಿಯವರು ನಿಜವಾದ ಭಾರತೀಯ ಸತ್ಪುತ್ರರಾಗಿ ಮತ್ತೊಮ್ಮೆ ಇಂಗ್ಲೇಂಡಿಗೆ ಹೋದರು. ಇವರ ವಿಷಯದಲ್ಲಿ ಯಾವ ದೇಶದವರಿಗೂ ದುರಭಿಪ್ರಾಯವಿಲ್ಲ. ಎಲ್ಲರ ಪ್ರೀತಿ ಗೌರವಗಳಿಗೂ ಪಾತ್ರರಾಗಿದ್ದರು. ಭಾರತದ ನಿಜವಾದ ಹಿರಿಮೆಯನ್ನು ಪರದೇಶೀಯರಿಗೆ ಪ್ರದರ್ಶಿಸುತ್ತಿದ್ದರು. ಇದೇ ಕಾರ್ಯವನ್ನು ಇಷ್ಟರಲ್ಲೇ ಅನೇಕ ಸಲ ಮಾಡಿದ್ದರು. ಇಂಗ್ಲೇಂಡಿನ ಜನತೆಗೆ ಮತ್ತೇ ಮತ್ತೇ ಇವರ ಪೂರ್ಣ ಪಾಂಡಿತ್ಯದ ಮಾತನ್ನು ಕೇಳಬೇಕೆಂಬ ಆಸೆಯಿತ್ತು. ಆದಕ್ಕಾಗಿಯೇ ರಾಧಾಕೃಷ್ಣನ್‌ರವರನ್ನು ಪ್ರೇಮಾದರಗಳಿಂದ ಬರಮಾಡಿ ಕೊಂಡರು. ಅಲ್ಲಿನ ದ್ವಿತೀಯ ಪರ್ಯಟನವೂ ಸಂತಸವಾಗಿತ್ತು.

ಸರ್ವಪಳ್ಳಿಯವರು ಆಕ್ಸ್‌ಫರ್ಡಿನಲ್ಲಿ ಪ್ರಾಧ್ಯಾಪಕರಾಗಿದ್ದು ಪೌರ್ವ ಮತ್ತು ಪಶ್ಚಿಮ ಮತಗಳ ಧರ್ಮಗಳೆಲ್ಲವನ್ನು ಬಗೆದು ಹಿಂದೂಧರ್ಮ [illegible] ಅಧಿಕವಾದ ಕಾರ್ಯವನ್ನೆಸಗಿದರು. ಪ್ರಪಂಚದಲ್ಲಿನ ದಾರ್ಶನಿಕರೆಲ್ಲರ ಹೃದಯಗಳನ್ನೂ ಪರಿಶೋಧಿಸಲು ಅವರ ಕಾರ್ಯ ಮತ್ತು ಲೇಖನಗಳನ್ನು ಅಧ್ಯಯನ ಮಾಡುತ್ತಿದ್ದರು. ಆಗಾಗ ಕೆಲವು ಸಂಸ್ಥೆಗಳು ಉಪನ್ಯಾಸಕ್ಕಾಗಿ ಇವರನ್ನು ಆಹ್ವಾನಿಸುತ್ತಿದ್ದುವು. ಹಾಗೆ 1936 ರಿಂದ 1938 ವರೆಗೆ ಮಾಡಿದ ಭಾಷಣಗಳೆಲ್ಲವೂ ವಿಶಿಷ್ಟತೆಯ ಅವಶ್ಯ ಕಾರಣವಾದುವು.

ಈ ಎರಡು ವರ್ಷಗಳ ಉಪನ್ಯಾಸಗಳು 1939ರಲ್ಲಿ ಪುಸ್ತಕ ರೂಪ ವನ್ನು ತಾಳಿತು. ಅದರ ಹೆಸರು Eastern " Religions and

Western Thought (ಪೌರ್ವಾತ್ಯ ಧರ್ಮಗಳು ಮತ್ತು ಪಾಶ್ಚಿಮಾತ್ಯ ಆಲೋಚನೆಗಳು)" ಎಂದು. ಈ ಗ್ರಂಥದಲ್ಲಿ ಒಟ್ಟು ಹದಿನೈದು ಅಧ್ಯಾಯಗಳಿವೆ.

ಇಲ್ಲಿನ ಮೊದಲನೆಯ ಉಪನ್ಯಾಸವು "The World's unborn Soul (ಉದಯವಾಗದ ವಿಶ್ವಸತ್ವ)" ಎಂಬುದು. ಹೊಸ ಪ್ರಪಂಚವೊಂದು ಹುಟ್ಟಲು ಹೋರಾಡುತ್ತಿದೆ. ಅದು ದೊಡ್ಡ ಬೆಳಕಿನ ಮುಂಬೆಳಕಿನಂತೆ ಕ್ರಮವಾಗಿ ಬಿಡುವಿಲ್ಲದೆ ಬೆಳೆಯುತ್ತಿದೆ. ಒಂದು ಕೇಂದ್ರೀಕೃತವಾದ ಜೀವನಕ್ಕೆ ಪ್ರಯತ್ನವನ್ನು ಪಡುತ್ತಿದೆ. ಭೂಮಿಯಲ್ಲಿ ಮಾನವತ್ವವು ಬಹು ಉತ್ತಮವಾದ ಸಾಧನವೆಂಬ ಸತ್ಯಾಂಶದ ಗುಟ್ಟು ಬಯಲಾಗುತ್ತಿದೆ. ಅದನ್ನರಿಯುವ ಜ್ಞಾನವೂ ಹೆಚ್ಚುತ್ತಿದೆ. ಈ ಜ್ಞಾನದ ಬೆಳಕಿನಲ್ಲಿ ಬಾಳಲು ಎಲ್ಲರ ಬಯಕೆಯಾಗಿದೆ. ವಿಶ್ವದಲ್ಲಿ ಏಕೈಕ ಧರ್ಮದ ಚಕ್ರಾಧಿಪತ್ಯವನ್ನು ಸ್ಥಾಪಿಸುವ ಪ್ರಯತ್ನವು ನಡೆಯುತ್ತಿದೆ. ಹಿಂದೂಗಳ ಅನುಭವದ ಬೆಲೆಯು ಜೀವಂತವಾದ ಸಾಮರ್ಥ್ಯವುಳ್ಳದ್ದು. ಆಧುನಿಕ ಮಾನವನ ಆತ್ಮವನ್ನು ರೂಪಿಸತಕ್ಕದ್ದು ಎಂಬುದೇ ಈ ಉಪನ್ಯಾಸದ ಸಾರಾಂಶ. ಇದು ಇಂಗ್ಲೇಂಡಿನಲ್ಲಿ ಕೊಟ್ಟ ಉಪನ್ಯಾಸ.

ಇದರಲ್ಲಿ ಚರಿತ್ರೆಯ ಅರ್ಥ, ವಿಜ್ಞಾನದ ಶಕ್ತಿ ಮತ್ತು ರಾಷ್ಟ್ರೀಯ ಭಾವನೆಯನ್ನೂ, ಲೌಕಿಕ ಮತ್ತು ನಾಗರಿಕತೆಯನ್ನೂ, ದೇಶಭಕ್ತಿಯನ್ನೂ ತಿಳಿಸುವರು. ಮಧ್ಯಕಾಲದಲ್ಲಿದ್ದ ನಾಗರಿಕತೆಯನ್ನು ವಿವರಿಸಿ, ಕ್ರೈಸ್ತ ಧರ್ಮವನ್ನೂ, ಅದರ ತತ್ವಗಳನ್ನೂ ಚರ್ಚಿಸುವರು. ಧಾರ್ಮಿಕ ಮತ್ತು ರಾಜಕೀಯ ವಿಷಯಗಳಿಗಿರುವ ಸಂಬಂಧವನ್ನು ವಿವರಿಸುವರು. ನಮ್ಮ ಕಾಲದಲ್ಲಿ ಪೂರ್ವದೇಶಗಳಿಗೆ ಬೇಕಾಗಿರುವ ಧರ್ಮವನ್ನೂ ಆಧ್ಯಾತ್ಮಿಕ ಅನುಭವದಲ್ಲಿ ಹಿಂದೂಗಳ ದೃಷ್ಟಿಯನ್ನೂ ತಿಳಿಸುವರು. ಮನುಷ್ಯ ಜಾತಿಯು ಈಗಲೂ ಮನುಷ್ಯತ್ವವನ್ನು ಹೊಂದುತ್ತಿದೆ ಎಂಬ ವಿಷಯಗಳನ್ನು ಚರ್ಚಿಸುವರು.

ಎರಡನೆಯ ಅಧ್ಯಾಯದಲ್ಲಿ — ಹಿಂದೂಗಳು ಅತ್ಯುತ್ತಮ ಆಧ್ಯಾತ್ಮಿಕ ಭಾವನೆಯನ್ನು ಸಿಂಧೂನದಿಯ ಬಯಲಿನಲ್ಲಿ ಹೊಂದಿದ್ದರು. ಆಗಲೇ ಹಿಂದೂ ಸಮಾಜವು ಉತ್ತಮ ನಾಗರಿಕತೆಯನ್ನೂ ಜೀವನದ ಗುರಿ

ಯನ್ನೂ ಪಡೆದು, ಅಭಯ ಮತ್ತು ಅಹಿಂಸೆಗಳಲ್ಲಿ ಧಾರ್ಮಿಕವಾದ ವಿವೇಚನೆಯನ್ನು ಹೊಂದಿತ್ತು. ಅಜ್ಞಾನದಿಂದ ತಪ್ಪು ಭಾವನೆಗಳನ್ನೂ ಸ್ವತಂತ್ರವಾದ ಯೋಗದಿಂದುಂಟಾಗುವ ಒಂದು ಶಿಸ್ತನ್ನೂ ಅವುಗಳ ಹಂತ ಗಳನ್ನೂ, ಅವುಗಳಿಂದಾಗುವ ಅತ್ಯುತ್ತಮ ಭಾವನೆಗಳನ್ನೂ ಆಲೋಚಿಸಿ, ಧಾರ್ಮಿಕ ವಿಷಯವು ಪ್ರತ್ಯೇಕತೆ ಮತ್ತು ಸಾಮಾಜಿಕತೆಗಳೆಂಬ ಎರಡು ಮುಖಗಳನ್ನು ಹೊಂದಿದೆ ಎಂದು ಸರ್ವಪಳ್ಳಿಯವರು ತಿಳಿಸುವರು. ಹಿಂದೂದರ್ಶನ ಶಾಸ್ತ್ರಗಳಲ್ಲಿ ರಾಜಕೀಯವಾಗಿ ಸಾಕಷ್ಟು ವಿಷಯವು ಬೆಳೆದಿಲ್ಲ. ಇದರಿಂದ ಬಹಳ ಹಾನಿಯಾಗುತ್ತಿದೆ ಎಂದು ಹೇಳುವ ಕೆಲವರ ಆಕ್ಷೇಪಗಳನ್ನು ಚರ್ಚಿಸುವರು.

ಮೂರನೆಯ ಅಧ್ಯಾಯದಲ್ಲಿ — ಹಿಂದೂಗಳ ಆಲೋಚನೆಯನ್ನು ವಿವರಿಸುತ್ತಾ, ಬ್ರಹ್ಮಜ್ಞಾನ ಮತ್ತು ನೀತಿತತ್ವಗಳು ಎಂಬ ವಿಷಯದ ಮೇಲೆ ತಮ್ಮ ಅಭಿಪ್ರಾಯವನ್ನು ಹೇಳುವರು. ಇತ್ತೀಚೆಗೆ ತಾರ್ಕಿಕ ಬೆಳವಣಿಗೆಗಳಿಗಿಂತಲೂ, ಆಧ್ಯಾತ್ಮಿಕ ಜ್ಞಾನದಲ್ಲಿ ಆಳವಾದ ಸಂಶೋಧನೆ ಯನ್ನು ಮಾಡುವುದರಲ್ಲಿ ಧರ್ಮವು ತೊಡಗಿದೆ. ಇತಿಹಾಸ ಖಂಡನೆ ಮತ್ತು ವಿಜ್ಞಾನದ ಬೆಳವಣಿಗೆಯು ಮತೀಯ ವಿಷಯಗಳ ಹೊರಗಡೆಗೆ ಪರಿಣಾಮ ಬೀರುತ್ತಿದೆ. ಮತಗಳಿಗನುಗುಣವಾದ ಆಧ್ಯಾತ್ಮಿಕ ವಿಷಯದ ಕಡೆಗೆ ಅಥವಾ ಬ್ರಹ್ಮಜ್ಞಾನವೆಂದರೇನೆಂಬುದರ ಕಡೆಗೆ ಜನತೆಯ ಗಮನವು ಹೆಚ್ಚುತ್ತಿದೆ

ಪರದೇಶಿಯರ ಖಂಡನೆಯಂತೆ ಹಿಂದೂಧರ್ಮವು ಪ್ರಪಂಚದಿಂದ ಬೇರೆಯಾಗಿಲ್ಲ ಇದು ಜೀವನಕ್ಕೆ ತೊಡಕಾಗಿಲ್ಲ. ನಿಜವಾಗಿಯೂ ಹಿಂದೂಮತಗಳು ವ್ಯಕ್ತಿಗತವಾಗಿ ಮಾನವತ್ವವನ್ನು ನೀಡತಕ್ಕವುಗಳಾ ಗಿವೆ ಎಂಬುದನ್ನು ಸಮರ್ಥಿಸುವರು

ನೀತಿ ಮತ್ತು ಆಧ್ಯಾತ್ಮಿಕ ವಿಷಯಗಳ ಪರಸ್ಪರ ಸಂಬಂಧವನ್ನು ತಿಳಿಸಿ, ಅವುಗಳ ತತ್ವಗಳು ಪ್ರಪಂಚದಲ್ಲೆಲ್ಲಾ ಬೇರು ಬಿಡಬೇಕಾಗಿದೆ. 'ಮಾಯಾ' ಎಂಬುದರ ಉಪದೇಶವು ನೀತಿಗೆ ಚಿಹ್ನೆಯಾಗಿದೆ. ಅದು ಅನೀತಿಯುತವಾದುದಲ್ಲ. ಆಧ್ಯಾತ್ಮಿಕ ಜ್ಞಾನವು ನೀತಿಗಿಂತಲೂ ಮುಖ್ಯ ವಾದುದು. ಆದರೆ, ನೈತಿಕ ಜೀವನವು ಆಧ್ಯಾತ್ಮಿಕ ಪ್ರಯತ್ನಕ್ಕೆ ಬಹಳ

ಆವಶ್ಯಕವಾದುದು. ಪ್ರಪಂಚದಿಂದ ಬಿಡುಗಡೆಯನ್ನು ಹೊಂದಲು ನಾವು ಬಯಸುವಂತೆಯೇ ವಿಮೋಚನೆಯೂ ಖಂಡನೀಯವಾದುದು. ಸ್ವಾತಂತ್ರ್ಯಕ್ಕಿಂತಲೂ ಮುಕ್ತಿಯು ಶ್ರೇಷ್ಠವಾದುದು. ಪುನರ್ಜನ್ಮದ ನಂಬಿಕೆಯು ಆಧ್ಯಾತ್ಮಿಕದ ಬೆಲೆಯಲ್ಲೂ ಸಹ ಗಣನೀಯವಾದುದು ಎಂಬ ವಿಷಯಗಳನ್ನು ವಿವರಿಸುವರು.

ನಾಲ್ಕನೆಯ ಅಧ್ಯಾಯದಲ್ಲಿ — "India and Western Thought (ಭಾರತ ಮತ್ತು ಪಾಶ್ಚಿಮಾತ್ಯ ಆಲೋಚನೆಗಳು)" ಎಂಬ ವಿಷಯವನ್ನು ವಿವರಿಸುವರು. ಇದರಲ್ಲಿ ಪಾಶ್ಚಿಮಾತ್ಯ ದೇಶಗಳಲ್ಲಿನ ಕಲೆಗಳಿಗೂ ಪೌರ್ವಾತ್ಯ ಕಲೆಗಳಿಗೂ ಇರುವ ಸಾಮ್ಯವನ್ನು ಹೊಂದಿಸಲು ಪ್ರಯತ್ನಿಸಿದ್ದಾರೆ. ಸಿಂಧೂನದಿಯ ನಾಗರಿಕತೆಯು ಈಜಿಪ್ಟ್ ದೇಶದ ನಾಗರಿಕತೆಗೆ ಹೋಲುತ್ತದೆ. ಋಗ್ವೇದಗಳಲ್ಲಿ ಕಾಣುವ ದೇವತೆಗಳನ್ನು ಗ್ರೀಕ್ ಮತ್ತು ಇರಾನಿನಲ್ಲಿ ಅದೇ ಕಾಲದಲ್ಲಿ ನಾವು ಕಾಣುತ್ತೇವೆ. ನಮ್ಮ ಉಪನಿಷತ್ತುಗಳು ಪ್ಲೇಟೋ ಮುಂತಾದವರ ಮತಗಳನ್ನು ಹೋಲುತ್ತವೆ ಎಂಬ ವಿಷಯಗಳನ್ನು ಸ್ಪಷ್ಟಪಡಿಸುತ್ತಾರೆ.

ಐದನೆಯ ಅಧ್ಯಾಯದಲ್ಲಿ—ಇಂಡಿಯಾದ ಹಿಂದೂಮತ ಮತ್ತು ಪಶ್ಚಿಮ ದೇಶಗಳ ಆದಿಯ ಕ್ರೈಸ್ತ ಮತವನ್ನು ಪರಸ್ಪರ ಹೋಲಿಸುವರು. ಅಲೆಕ್ಸಾಂಡರನ ದೃಷ್ಟಿಯಲ್ಲಿ ಭಾರತವು ಅಂದು ಹೇಗಿತ್ತು ? ಎಂಬುದನ್ನು ವಿವರಿಸುವರು. ಪ್ಯಾಲಸ್ಟೈನಿನಲ್ಲಿದ್ದ ಜಾನ್ ಬಾಪ್ಟಿಸ್ಟ್ ಮತ್ತು ಜೀಸಸ್‌ರ ಜೀವನಕ್ಕೂ ಸರಿ ಸುಮಾರು ಅದೇ ಕಾಲದಲ್ಲಿದ್ದ ಬುದ್ಧನ ಜೀವನಕ್ಕೂ ಇದ್ದ ಹೋಲಿಕೆಯನ್ನು ತಿಳಿಸುವರು. ರೋಮ್ ಚಕ್ರಾಧಿಪತ್ಯ ಮತ್ತು ವೈತ್ರಾಯಿಸಮ್ಮಿನ ನಾಗರೀಕತೆಯನ್ನು ತಿಳಿಸಿ ಅದೇ ಕಾಲವಲ್ಲಿ ಈಜಿಪ್ಟಿನಲ್ಲಿದ್ದ ಬ್ರಹ್ಮಜ್ಞಾನ ಮತ್ತು ಅಲೆಕ್ಸಾಂಡರನ ತತ್ವಗಳನ್ನು ಹೋಲಿಸುತ್ತಾರೆ.

ಆರನೆಯ ಅಧ್ಯಾಯದಲ್ಲಿ ಭಾರತ ಮತ್ತು ಪಶ್ಚಿಮದ ಕ್ರೈಸ್ತಮತದ ಎರಡನೆಯ ಕಾಲವನ್ನು ಹೋಲಿಸುವರು. ಸಂತಪಾಲ್ ನಾಲ್ಕನೆಯ ಗಾಸ್ಪೆಲ್‌ರ ಅಭಿಪ್ರಾಯ, ಬೇಡಿಕೆಗಳ ಮೂಲತತ್ವ, ಮತ್ತು ಅವುಗಳ ಉತ್ಪತ್ತಿಗಳನ್ನು ಚರ್ಚಿಸುವರು. ಹಿಂದೂ, ಪರ್ಶಿಯನ್, ಮತ್ತು ಕ್ರಿಶ್ಚಿಯನ್ ಮತಗಳಲ್ಲಿನ ದೈವ ಜ್ಞಾನವನ್ನು ವಿಮರ್ಶಾತ್ಮಕವಾಗಿ ಹೋಲಿಸುತ್ತಾರೆ.

ಜಾನ್‌ಸ್ಕಾಟ್ಸ್, ಇರಿಗಿನಾ, ಹ್ಯೂಗೋ, ಮತ್ತು ರಿಚಾರ್ಡ ಡಾಮಸ್, ಅಕ್ವಿನಸ್ ಮುಂತಾದವರ ಅಭಿಪ್ರಾಯಗಳು ಭಾರತದ ಹೋಲಿಕೆಗಳಿಗೆ ಸುಮಾರು ಸರಿ ಹೋಲಿಕೆಯಾಗಿವೆ ಎಂಬುದನ್ನು ಸ್ಪಷ್ಟಪಡಿಸಿದರು.

ಏಳನೆಯ ಅಧ್ಯಾಯದಲ್ಲಿ ಗ್ರೀಕ್‌ಪ್ಯಾಲಸ್ಟೈನ್ ಮತ್ತು ಭಾರತವನ್ನು ಹೋಲಿಸುವರು. ಆಗ ಪಾಶ್ಚಾತ್ಯ ನಾಗರೀಕತೆಯ ಗುಣಗಳು, ಹಿಂದೂ ಮತ್ತು ಚೀಣಾದೇಶದ ನಾಗರಿಕತೆಗಳಿಗೆ ಸ್ವಲ್ಪ ದೂರವಾಗಿತ್ತೆಂದು ತಿಳಿಸುವರು. ಗ್ರೀಕೋರೋಮನ್, ಹಿಬ್ರೋ ಮತ್ತು ಇಂಡಿಯಾ ಈ ಮೂರು ಧರ್ಮಗಳ ಪರಸ್ಪರ ಹೋಲಿಕೆಯನ್ನು ತೋರುವರು.

ಎಂಟನೆಯ ಅಧ್ಯಾಯದಲ್ಲಿ ಧಾರ್ಮಿಕ ಸಭೆಗಳನ್ನು ತಿಳಿಸುವರು. ಸಿಂಧೂಬಯಲಿನ ನಾಗರೀಕತೆ, ಹಿಂದೂಗಳ ಮನೋವೃತ್ತಿ, ಅದಕ್ಕನು ಗುಣವಾದ ಚಾರಿತ್ರಿಕ ವಾತಾವರಣ ಮುಂತಾದುವನ್ನು ಹೇಳುವರು. ಇಸ್ಲಾಂ ಮತ್ತು ಕ್ರೈಸ್ತಮತಗಳು ಭಾರತಕ್ಕೆ ಬಂದ ಮೇಲೆ, ಅವುಗಳಲ್ಲಾದ ಹಿಂದೂಮತದ ಪರಿಣಾಮವನ್ನು ವಿವರಿಸುವರು.

ಹಿಂದೂ ಮನೋವೃತ್ತಿಯು ನಾಸ್ತಿಕವಾದದಲ್ಲಾಗಲೀ, ಸ್ವಾರ್ಥ ಬೋಧನೆಯಲ್ಲಾಗಲೀ ವರ್ತಿಸುವುದಿಲ್ಲ. ಮತೀಯ ಧರ್ಮತತ್ವಗಳಲ್ಲಿ ಶ್ರದ್ಧೆಯನ್ನಿಟ್ಟಿರುವಂತೆಯೇ ಆಧ್ಯಾತ್ಮಿಕ ಅನುಭವಗಳಲ್ಲೂ ನಂಬಿಕೆಯನ್ನಿಟ್ಟಿದೆ. ಪರಧರ್ಮಗಳ ಬಗ್ಗೆ ತಿರಸ್ಕಾರವನ್ನು ತೋರುವುದಿಲ್ಲ. ಉದಾರ ಭಾವನೆಯನ್ನೇ ತೋರಿ ಅವುಗಳ ಅಭಿವೃದ್ಧಿಗಾಗಿ ಅವಕಾಶವನ್ನು ನೀಡುತ್ತಿದೆ ಎಂಬ ವಿಷಯವನ್ನು ವಿವರಿಸುವರು

ಒಂಭತ್ತನೆಯ ಅಧ್ಯಾಯದಲ್ಲಿ — ಹಿಂದೂ ಸಮಾಜದಲ್ಲಿನ ವೈಯಕ್ತಿಕ ಮತ್ತು ಸಾಮಾಜಿಕ ಕ್ರಮಗಳನ್ನು ತಿಳಿಸಿ, ಜೀವನದ ನಾಲ್ಕು ಆಶ್ರಮ ಧರ್ಮಗಳನ್ನೂ ಅಲ್ಲಿನ ಅಧ್ಯಾತ್ಮಿಕ ಆಸಕ್ತಿ, ಕಲಾಭಿಲಾಷೆ, ಆರ್ಥಿಕ ಸ್ಥಿತಿ ಮತ್ತು ನೈತಿಕ ಸ್ಥಿತಿಗಳನ್ನು ವಿವರಿಸಿರುವರು. ನಾಲ್ಕು ವರ್ಣಗಳು ವಿಂಗಡಣೆಯಾದ ಬಗೆಯನ್ನೂ ಅದರಿಂದಾದ ಒಳ್ಳೆಯ ಮತ್ತು ಕೆಟ್ಟ ಪರಿಣಾಮಗಳನ್ನು ವಿವರಿಸಿರುವರು.

ಈ ಗ್ರಂಥದಿಂದ ಪಶ್ಚಿಮದ ತತ್ವಜ್ಞಾನಿಗಳೆಲ್ಲರೂ ಆಕರ್ಶಿಸಲ್ಪಟ್ಟರು. ಅವರ ಮನಸ್ಸಿನ ಮೇಲೆ ಇದು ಬಹಳವಾಗಿ ಪರಿಣಾಮ ಬೀರಿತು. ತಮ್ಮ

ಮೊದಲ ಭಾವನೆಗಳನ್ನು ಬದಲಾಯಿಸಿಕೊಳ್ಳಲು ಕಲಿಯಂತಾಯಿತು. ಬಹು ಮಂದಿ ವಿದ್ವಾಂಸರು ಇದರ ಮೇಲೆ ವಿಮರ್ಶೆಗಳನ್ನು ಬರೆದರು. 'ದಿ ಟೈಮ್ಸ್' ಎಂಬ ಪತ್ರಿಕೆಯು ಈ ಗ್ರಂಥವನ್ನು ಬಹಳ ದೀರ್ಘವಾಗಿ ವಿಮರ್ಶಿಸಿತು. ಆಕ್ಸ್‌ಫರ್ಡಿನ ಸಂಚಿಕೆಯೊಂದು "ಅಪರೂಪ ಮನಸ್ಸಿನ ಅಪರೂಪವಾದ ಪುಸ್ತಕ" ಎಂದು ಕೆಲವೇ ಮಾತುಗಳಲ್ಲಿ ವಿಶಾಲವಾದ ಅರ್ಥವುಳ್ಳ ತನ್ನ ಅಭಿಪ್ರಾಯವನ್ನು ಕೊಟ್ಟಿತು.

ಅದೇ ವರುಷ "Freedom and Culture (ಸ್ವತಂತ್ರ ಮತ್ತು ಸಂಸ್ಕೃತಿ)" ಎಂಬ ಮತ್ತೊಂದು ಗ್ರಂಥವನ್ನು ಬರೆದರು.

ಬ್ರಿಟಿಷ್ ಪಂಡಿತ ಸಮ್ಮೇಳನವು, ಅದರ ವಾರ್ಷಿಕೋತ್ಸವಕ್ಕೆ ರಾಧಾಕೃಷ್ಣನ್‌ರವರನ್ನು ಆಹ್ವಾನಿಸಿತು. ಅಲ್ಲಿ 1938 ನೇ ಜೂನ್ ತಿಂಗಳಲ್ಲಿ 'ಗೌತಮ ಬುದ್ಧ' ಎಂಬ ವಿಷಯದ ಮೇಲೆ ಮಾತನಾಡಿದರು. 'ಕೆಲವು ಭಾರತೀಯರು ಗೌತಮ ಬುದ್ಧನನ್ನು ಅವತಾರ ಪುರುಷರೆಂದು ನಂಬುತ್ತಾರೆ. ಅದು ಉನ್ನತಗುಣಕ್ಕೆ ಮನ್ನಣೆಯನ್ನು ಕೊಡುವ ಉತ್ತಮ ಭಾವನೆಯು. ವಿವೇಚಿಸುವುದಾದರೆ. ಬುದ್ಧನು ನಮ್ಮಂತೆಯೇ ಒಬ್ಬ ಮಾನವನು. ದೇವರಲ್ಲ. ನರಕದಲ್ಲಿದ್ದವರನ್ನು ಸ್ವರ್ಗಕ್ಕೆ ಕಳುಹಿಸ ತಕ್ಕವನಲ್ಲ ಅವನೊಬ್ಬ ಆಚಾರ್ಯನಷ್ಟೆ. ಅವನು ಸ್ಥಾಪಿಸಿದ ಮತವೂ ಕೂಡ ಹೊಸದಲ್ಲ. ವಿಭಿನ್ನವಾದ ಧರ್ಮವೂ ಅಲ್ಲ. ತನ್ನ ಸ್ವಂತದ್ದೆಂದು ಅವನು ಯಾವಾಗಲೂ ಹೇಳಿಲ್ಲ. ಅವನು ಹಿಂದೂ ಆಗಿ ಹುಟ್ಟಿದನು. ಹಿಂದೂ ಆಗಿಯೇ ಬೆಳೆದನು. ಹಿಂದೂ ಆಗಿಯೇ ಸತ್ತನು. ಬೌದ್ಧ ಮತವು ಹಿಂದೂ ಮತದಲ್ಲಿ ಒಂದು ಸುಧಾರಿಸಿದ ಮತವು" ಎಂದು ಅಭಿಪ್ರಾಯ ತೋರುವರು.

ಬುದ್ಧನು ಸ್ವಾರ್ಥ ಭಾವನೆಯನ್ನು ಒಪ್ಪುವುದಿಲ್ಲ. ಮಾನವನು ತನ್ನ ಭವಿಷ್ಯದಬಗ್ಗೆ ಒಂದು ಹತೋಟಿಯನ್ನು ಹೊಂದಲಾರನೆಂಬುದನ್ನು ನಂಬುವುದಿಲ್ಲ. "ಉನ್ನತಗುರಿಯಲ್ಲಿ ಮನವಿಟ್ಟು ಕೆಲಸವನ್ನು ಮಾಡಿದರೆ, ಪ್ರತಿಯೊಬ್ಬನೂ ಅರ್ಹಂತನಾಗಬಹುದು, ನಿರ್ವಾಣವನ್ನು ಹೊಂದ ಬಹುದು" ಎಂದು ಅವನು ಹೇಳುತ್ತಾನೆ.

ಬುದ್ಧನು ನಮಗೆ ಬೋಧಿಸುವುದು ಪ್ರಜ್ಞೆಯನ್ನು! ಆ ಪ್ರಜ್ಞೆಯನ್ನು ಪಡೆಯಲು ದಿನನಿತ್ಯದ ಕರ್ಮದಲ್ಲಿ ಕರುಣೆಯನ್ನು ಅಭ್ಯಾಸ ಮಾಡಿಕೊಳ್ಳಬೇಕು ಎನ್ನುತ್ತಾನೆ. ನಾವು ಆಚರಿಸುವ ಪಂಥದಿಂದ, ನಾವು ಧರಿಸುವ ಗುರುತಿನಿಂದ ಅಥವಾ ಸಾರಿ ಹೇಳುವ ಮಾತಿನಿಂದ, ಸರಿಯಾದ ಪ್ರಜ್ಞೆಯೆಂದು ತೀರ್ಮಾನವನ್ನು ಹೊಂದ ಬಾರದು. ಆದರೆ, ಅನ್ಯರಲ್ಲಿ ಸಹೋದರ ಭಾವನೆಯಿಂದ ವರ್ತಿಸುವುದರಿಂದ, ನೆರೆಯುವರ ದುಃಖದಲ್ಲಿ ಭಾಗಿಯಾಗುವುದರಿಂದ, ನಾವು ಮಾಡುವ ಕಾರ್ಯವು ಪವಿತ್ರ ವಾಗುತ್ತದೆ. ನೋವಿನ ಅನುಭವದ ಜ್ಞಾನವು ನಮಗುಂಟಾದರೆ ದುಃಖದಲ್ಲಿರುವವರೆಲ್ಲರಿಗೂ ಸಹೋದರರಾಗುತ್ತೇವೆ ಎಂದು ಬುದ್ಧನ ಅಭಿಪ್ರಾಯ.

ಸ್ವತಂತ್ರವಾದ ಮನುಷ್ಯನನ್ನು ನಿರ್ಮಾಣ ಮಾಡುವುದು, ಮನುಷ್ಯನನ್ನು ದುರಭಿಮಾನದಿಂದ ದೂರವಿಡುವುದು ಮತ್ತು ತನ್ನ ಭವಿಷ್ಯದಬಗ್ಗೆ ತಾನೇ ಸ್ವಾವಲಂಬನ ಕಾರ್ಯದಲ್ಲಿ ತಲ್ಲೀನನಾಗುವಂತೆ ಮಾಡುವುದು ಬುದ್ಧನಗುರಿ ಎನ್ನಬಹುದು. ಇದನ್ನು ಪ್ರತಿಯೊಬ್ಬನೂ ಅರಿತರೆ, ಒಂದು ಜನಾಂಗವು ಮೊದಲು ಸುಧಾರಣೆಯನ್ನು ಹೊಂದುತ್ತದೆ. ಅದರ ಮೂಲಕ ರಾಷ್ಟ್ರದ ಏಳ್ಗೆಯಾಗುತ್ತದೆ. ಹಾಗೆಯೇ ವಿಶ್ವದ ಏಳ್ಗೆ ಯಾಗುತ್ತದೆ ಎಂಬುದೇ ಬುದ್ಧನ ಭಾವನೆ.

ಮಾನವ ಕುಲದಲ್ಲಿ ಸಚ್ಚೈತನ್ಯವನ್ನು ಪ್ರೇರೇಪಿಸಿದವರಲ್ಲಿ ಗೌತಮ ಬುದ್ಧನೇ ಹಿರಿಯನು. ಅವನನ್ನು ಜಗತ್ತು ಎಂದೆಂದೂ ಮರೆಯುವಂತಿಲ್ಲ. ಅವನ ತತ್ವಜ್ಯೋತಿಯು ಕೋಟ್ಯಾಂತರ ಜೀವಿಗಳ ಮೇಲೆ ಪ್ರಭಾವವನ್ನು ಬೀರುತ್ತದೆ. ಪ್ರಪಂಚದಲ್ಲಿ ಸಾಮಾಜಿಕ ಸಂಬಂಧದಲ್ಲಿ ಮಾನವನಾಗಿ ಬಾಳಲು ಬುದ್ಧನ ಸಂದೇಶವು ಅಮರವಾಗಿದೆ. ಎಂಬುದನ್ನು ಸರ್ವಪಳ್ಳಿಯುವರು ವಿವರಿಸಿದರು.

ಆಸಭೆಯಲ್ಲಿದ್ದ ಶ್ರೋತೃಗಳಲ್ಲಿ ಬಹಳ ಮಂದಿ ಈ ಉಪನ್ಯಾಸದಿಂದ ತಮ್ಮ ತಿಳುವಳಿಕೆಯ ಏರುಪೇರುಗಳನ್ನು ಸರಿಮಾಡಿಕೊಂಡರು "ಪಾಂಡಿತ್ಯವುಳ್ಳ ಮನಸ್ಸಿನಿಂದ ಪಾಂಡಿತ್ಯವುಳ್ಳ ಮನಸ್ಸು ಇಂತಹ ಉಪನ್ಯಾಸವನ್ನು ಕೇಳಬೇಕು" ಎಂದು ಒಬ್ಬ ಆಂಗ್ಲ ಜ್ಞಾನಿಯು ಹೇಳಿದನು.

ಬ್ರಿಟಿಷ್ ಅಕಾಡೆಮಿಯ ಸದಸ್ಯರು ಸಾಮಾನ್ಯರಲ್ಲ; ಮಹಾಜ್ಞಾನಿಗಳು. ಅತ್ಯಂತ ಸಮರ್ಥರು. ಅಕಾಡಮಿಯ ಫೆಲೋ ಪದವಿಯು ಬ್ರಿಟನ್ನಿನ ಅತ್ಯಂತ ದೊಡ್ಡ ಗೌರವವು. ಅದನ್ನು ಇಂಗ್ಲೇಂಡಿನಲ್ಲಿ ಮಹಾ ವಿದ್ವಾಂಸರಿಗೆ ಮಾತ್ರ ಕೊಡುತ್ತಿದ್ದರು. ಅದನ್ನು ರಾಧಾಕೃಷ್ಣನ್ನರಿಗೆ ಕೊಡಲು ಅಲ್ಲಿನ ಸಭೆಯು ತೀರ್ಮಾನಿಸಿತು. ಆ ಪದವಿಯನ್ನು ಪಡೆದ ಅನ್ಯದೇಶೀಯರಲ್ಲಿ ಸರ್ವಪಳ್ಳಿಯವರೇ ಮೊದಲಿಗರು. ಇದರಿಂದ ಭಾರತಕೆ ಒಂದು ದೊಡ್ಡ ಕೀರ್ತಿಯು ಬಂದಂತಾಯಿತು.

ಸರ್ವಪಳ್ಳಿಯವರು ಎರಡನೆಯ ಸಾರಿ ಆಕ್ಸ್‌ಫರ್ಡಿಗೆ ಹೋದುದು ಸಾರ್ಥಕವಾಯಿತು. ಆಕ್ಸ್‌ಫರ್ಡಿನಂತಹ ದೊಡ್ಡ ವಿಶ್ವವಿದ್ಯಾನಿಲಯಕ್ಕೆ ಪ್ರಾಧ್ಯಾಪಕರಾಗುವುದು ಸಾಮಾನ್ಯವಲ್ಲ. ಇಂಗ್ಲೇಂಡಿನ ಉನ್ನತ ಗೌರವವಾದ ಫೆಲೊ ಪದವಿಯನ್ನು ಪಡೆದುದಂತೂ ಮಹಾಸಾಹಸದ ಕಾರ್ಯವೇ ಸರಿ. ಇದಿಷ್ಟೂ ಮತ್ತೊಬ್ಬರ ಹಿಂಬಲದಿಂದ, ಅಥವಾ ದಾಕ್ಷಿಣ್ಯಕ್ಕಾಗಿ ದೊರೆತವುಗಳಲ್ಲ. ಸರ್ವಪಳ್ಳಿಯವರ ಸ್ವಪ್ರತಿಭೆ ಮತ್ತು ಸ್ವಶಕ್ತಿಗಳಿಗೆ ಸನ್ಮಾನಪೂರ್ವಕವಾಗಿ ಬಂದವುಗಳು.

---

# ಬೆನಾರಸ್ ವಿಶ್ವವಿದ್ಯಾನಿಲಯದಲ್ಲಿ

ಮೂರು ವರ್ಷಗಳ ಕಾಲ ಇಂಗ್ಲೇಂಡಿನ ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯದಲ್ಲಿ ಪ್ರಾಧ್ಯಾಪಕರಾಗಿದ್ದು ಅನಂತರ ಮತ್ತೆ ಭಾರತಕ್ಕೆ ಹಿಂತಿರುಗಿದರು. ಅವರು ಬರುವಷ್ಟರಲ್ಲಿ ಬೆನಾರಸ್ ವಿಶ್ವವಿದ್ಯಾನಿಲಯದ ಉಪಕುಲಪತಿಯ ಸ್ಥಾನವು ಇವರಿಗಾಗಿ ಕಾದಿತ್ತು. ಅದರ ವ್ಯವಸ್ಥಾಪಕರೂ ಆಡಳಿತಗಾರರೂ ಆಗಿದ್ದ ಪಂಡಿತ ಮದನಮೋಹನ ಮಾಲವೀಯರು ವೃದ್ಧರಾಗಿದ್ದರು. ಅಲ್ಲಿನ ಕೆಲಸಕಾರ್ಯಗಳನ್ನು ಮೊದಲಿನಷ್ಟು ದಕ್ಷತೆಯಿಂದ ನಿರ್ವಹಿಸಲು ಸಾಧ್ಯವಿರಲಿಲ್ಲ. ಸರ್ವಪಳ್ಳಿಯವರು ಮಾಲವೀಯರವರನ್ನು, ತಾವು ವಿದ್ಯಾರ್ಥಿಯಾಗಿದ್ದಾಗಲೇ ಮದರಾಸಿನಲ್ಲಿ ನೋಡಿದ್ದರು. ಅವರ ವಾಗ್ಝರಿಯಲ್ಲೂ ಸಹ ಮಿಂದು ಅವರ ಪ್ರಭಾವಕ್ಕೊಳಗಾಗಿದ್ದರು. ಮತ್ತೊಮ್ಮೆ ಬೆಂಗಳೂರಿನಲ್ಲಿ ಮಾಲವೀಯರ ಉಪನ್ಯಾಸ ಮಾಲೆಯನ್ನು ಕೇಳಿದ್ದರು. ಧರ್ಮಕ್ಕೆ ಅವರು ಎಷ್ಟು ಪ್ರಾಧಾನ್ಯತೆಯನ್ನು ಕೊಟ್ಟಿದ್ದರು? ಅವರಲ್ಲಿದ್ದ ಜಾತ್ಯತೀತ ಭಾವನೆ, ಸರ್ವರಲ್ಲೂ ಅವರು ತೋರುತ್ತಿದ್ದ ಸಮಾನ ಪ್ರೇಮ ಮುಂತಾದ ಅವರ ಸದ್ಗುಣಗಳಿಗಾಗಿ, ಅವರ ವಿಷಯದಲ್ಲಿ ಇವರಿಗೆ ಅಪಾರ ಗೌರವವಿತ್ತು. ಅಂತಹವರ ಒಂದು ಆಹ್ವಾನವನ್ನು ಸುಲಭವಾಗಿ ತೆಗೆದುಹಾಕುವಂತಿರಲಿಲ್ಲ.

ಭಾರತದಲ್ಲಿ ಹಿಂದೂ ವಿಶ್ವವಿದ್ಯಾನಿಲಯವೆಂದು ಪ್ರಖ್ಯಾತಿಯನ್ನು ಪಡೆದಿದ್ದ ಬೆನಾರಸ್ ವಿಶ್ವವಿದ್ಯಾನಿಲಯದ ಆಡಳಿತಕ್ಕೆ ಸಾಮಾನ್ಯರನ್ನು ನಿಯಮಿಸುವಂತಿರಲಿಲ್ಲ. ತಾವು ಶ್ರಮಪಟ್ಟು ಕಟ್ಟಿ ವೃದ್ಧಿಗೊಳಿಸಿದ ಸಂಸ್ಥೆಯ ಅಭ್ಯುದಯಾಕಾಂಕ್ಷೆಯಿಂದ ಮಾಳವೀಯಾರವರು ಶಿಕ್ಷಣ ತಜ್ಞರೂ, ದಾರ್ಶನಿಕರೂ, ಪ್ರಪಂಚ ಪರ್ಯಟನವನ್ನು ಮಾಡಿದವರೂ, ಆದ ರಾಧಾಕೃಷ್ಣನ್‌ರವರನ್ನು ತಮ್ಮ ಸ್ಥಾನಕ್ಕೆ ಆಹ್ವಾನಿಸಿದ್ದರು.

1939ರಲ್ಲಿ ಸರ್ವಪಳ್ಳಿಯವರು ಬೆನಾರಸ್ ವಿಶ್ವವಿದ್ಯಾನಿಲಯದ ಉಪಕುಲಪತಿ ಸ್ಥಾನವನ್ನು ವಹಿಸಿಕೊಂಡರು. ಅಲ್ಲಿ ಅವರಿಗೆ ಹೆಚ್ಚು ಸಂಭಾವನೆಯನ್ನು ಕೊಡುವ ಏರ್ಪಾಡಾಗಿತ್ತು. ಆದರೆ, ರಾಧಾಕೃಷ್ಣನ್ನರು

ಹೆಚ್ಚು ಸಂಬಳಕ್ಕಾಗಿ ಕೆಲಸಮಾಡಲು ಅಪೇಕ್ಷೆಯನ್ನು ಪಡಲಿಲ್ಲ. ಗೌರವಯುತವಾಗಿ ಉಚಿತವಾಗಿ ಕೆಲಸಮಾಡಲು ಒಪ್ಪಿಕೊಂಡರು. ಇದರಿಂದ ಇವರು ಅತಿಯಾಸೆಗೆ ಬಲಿಯಾಗದೆ, ಜ್ಞಾನಪ್ರಸಾರಣೆಯ ದೃಷ್ಟಿಯಲ್ಲಿ, ಸೇವಾ ಮನೋಭಾವನೆಯನ್ನು ಹೊಂದಿದ್ದರೆಂದು ಧಾರಾಳವಾಗಿ ಹೇಳಬಹುದು.

ಬೆನಾರಸ್ಸಿನಲ್ಲೂ ವಿದ್ಯಾರ್ಥಿಗಳ ಶ್ರೇಯೋಭಿವೃದ್ಧಿಗಾಗಿ, ದೇಶದ ಹಿತದೃಷ್ಟಿಯಿಂದ ದುಡಿದರು. ವಿಶ್ವವಿದ್ಯಾನಿಲಯವು ಮಾಳವೀಯರ ಮೇಲ್ವಿಚಾರಣೆಯ ಕಾಲಕ್ಕಿಂತಲೂ ಹೆಚ್ಚಿನ ಮಟ್ಟದಲ್ಲಿ ಸುಧಾರಣೆಯನ್ನು ಹೊಂದಿತೆಂದೇ ಹೇಳಬಹುದು.

1939ನೇ ಅಕ್ಟೋಬರ್ ಎರಡನೆಯದಿನಕ್ಕೆ ಮಹಾತ್ಮಗಾಂಧೀಜಿಯವರಿಗೆ 70 ವರ್ಷಗಳು ತುಂಬುವುದರಲ್ಲಿತ್ತು. ಗಾಂಧೀಜಿಯವರ ವಿಷಯದಲ್ಲಿ ಸರ್ವಪಳ್ಳಿಯವರಿಗೆ ಬಹಳ ಭಕ್ತಿ. ಆದಕ್ಕಾಗಿ ಗಾಂಧೀಜಿಯವರ, ರಾಜಕೀಯ, ಧಾರ್ಮಿಕ ವಿಷಯಗಳನ್ನೊಳಗೊಂಡ ಅವರ ಜೀವನ ಚಿತ್ರವನ್ನು "ಮಹಾತ್ಮಗಾಂಧೀ" ಎಂಬ ಪುಸ್ತಕದಲ್ಲಿ ಬರೆದು ಮಹಾತ್ಮರಿಗೆ ಅವರ 70ನೇ ಹುಟ್ಟು ಹಬ್ಬದಂದು ಅರ್ಪಿಸಿದರು.

ಆ ಗ್ರಂಥವನ್ನು ವಿಮರ್ಶೆ ಮಾಡಿದ ಆಂಗ್ಲರೊಬ್ಬರು ಹೀಗೆ ಹೇಳುತ್ತಾರೆ. "ಅಪೂರ್ಣವಾದ, ಎಂದಾದರೂ ಮೊಗಚಿ ಬೀಳುವ ರಾಜಕೀಯ ಜೀವನದಲ್ಲಿ ಸರ್ವಪಳ್ಳಿಯವರು ಅಲ್ಪ ಅನುಭವವನ್ನು ಹೊಂದಿದ್ದಾರೆ. ಆದರೂ ಅತ್ಯಂತ ಅಧಿಕವಾದ ಬೌದ್ಧಿಕ ಶಕ್ತಿಯನ್ನು ಪಡೆದಿದ್ದಾರೆ. ಜ್ಞಾನದದೃಷ್ಟಿಯಿಂದ ಯೋಚಿಸುವುದಾದರೆ, ಬಹುಶಃ ಗಾಂಧೀಜಿಯವರಿಗಿಂತಲೂ ಉತ್ತಮ ಪಾಂಡಿತ್ಯವನ್ನು ಹೊಂದಿರುವ ರಾಧಾಕೃಷ್ಣನ್‌ರವರ ಶ್ರದ್ಧೆಯನ್ನು ಸೆಳೆದುದು ಗಾಂಧೀಜಿಯವರ ಜಯಗಳಲ್ಲೊಂದು" ಎಂದು ಹೇಳಿದ ಅವರ ಮಾತಿನಿಂದ ರಾಧಾಕೃಷ್ಣನ್‌ರವರ ಪ್ರತಿಭೆಯನ್ನು ನಾವು ಯೋಚಿಸಿ ತಿಳಿಯಬಹುದು.

ಈ "ಮಹಾತ್ಮಗಾಂಧಿ" ಎಂಬ ಗ್ರಂಥವು ಪ್ರಕಟವಾದಮೇಲೆ ಅದನ್ನು ನೋಡಿದ ಆಫ್ರಿಕಾ ದೇಶದವರು ರಾಧಾಕೃಷ್ಣನ್‌ರವರನ್ನು ತಮ್ಮ ದೇಶಕ್ಕೆ ಆಹ್ವಾನಿಸಿದರು. ದಕ್ಷಿಣ ಆಫ್ರಿಕಾಕ್ಕೆ ಸರ್ವಪಳ್ಳಿಯವರು ಹೋಗಿ

ಗಾಂಧೀಜಿಯವರ ಮೇಲೆ ಮತ್ತು ದಾರ್ಶನಿಕ ವಿಚಾರದ ಮೇಲೆ ಅನೇಕ ಉಪಯುಕ್ತ ಉಪನ್ಯಾಸಗಳನ್ನು ಕೊಟ್ಟರು.

ಭಾರತದ ಸಂಸ್ಕೃತಿ ಮತ್ತು ನಾಗರಿಕತೆ ಎಂಬ ಸಂಸ್ಥೆಯ ಅಧ್ಯಕ್ಷ ಸ್ಥಾನವನ್ನು 1941ರಲ್ಲಿ ವಹಿಸಿಕೊಂಡರು. ಆ ಪೀಠವು ಎಸ್. ವಿ. ಸಯ್ಯಾಜಿರಾವ್ ಎಂಬುವರ ಹೆಸರಿನಲ್ಲಿದ್ದಿತು. ಆ ಸಂಸ್ಥೆಯನ್ನು ಬರೋಡಾದ ಗಾಯಾಕ್ವಾರ್ ವಂಶದವರು ಸ್ಥಾಪಿಸಿದ್ದರು. ಅವರ ವಂಶದ ಪ್ರಸಿದ್ಧ ಪೂರ್ವಾಧಿಕಾರಿಯ ಜ್ಞಾಪಕಾರ್ಥವಾಗಿ ಆ ಪೀಠವನ್ನು ಏರ್ಪಡಿಸಿದ್ದರು.

1926 ರಿಂದ ಮೊದಲ್ಗೊಂಡು ಬೆನಾರಸ್ ವಿಶ್ವವಿದ್ಯಾನಿಲಯದ ವೈಸ್‌ಛಾನ್ಸಲರ್ ಆಗುವ ತನಕ ಅಮೆರಿಕಾ, ಇಂಗ್ಲೇಂಡ್ ಮತ್ತು ಆಫ್ರಿಕಾ ಮುಂತಾದ ಪಾಶ್ಚಾತ್ಯ ದೇಶಗಳನ್ನು ಸುತ್ತಿ ತಮ್ಮ ವಿದ್ಯಾಪ್ರೌಢಿಮೆಯನ್ನು ತೋರುವುದರ ಜೊತೆಗೆ ಹಿಂದೂಧರ್ಮದ ಭವ್ಯಗುಣಗಳನ್ನು ತೋರಿದ್ದರು. 1944ರಲ್ಲಿ ಚೀಣಾ ಸರ್ಕಾರವು ಸರ್ವಪಳ್ಳಿಯವರನ್ನು ತಮ್ಮ ದೇಶಕ್ಕೆ ಬರಲು ಆಹ್ವಾನಿತು. ಚೀಣಾದ ಕಾನ್‌ಫ್ಯೂಷಿಯಾನಿಸಂ, ಟಾವೋಯಿಸಂ ಮತ್ತು ಬೌದ್ಧ ಧರ್ಮಗಳಲ್ಲಿನ ಜ್ಞಾನವು ಸರ್ವಪಳ್ಳಿಯವರಲ್ಲಿ ಸಾಕಷ್ಟು ಇದೆ. ಭಾರತದಲ್ಲಿ ಹುಟ್ಟಿ ಬೆಳೆದ ಬೌದ್ಧಮತವು ಚೀಣಾ ದೇಶದಲ್ಲಿ ಬೀಡು ಬಿಟ್ಟು ಪ್ರಬುದ್ಧ ಸ್ಥಿತಿಯನ್ನು ಹೊಂದಿತ್ತು. ಬೌದ್ಧ ಮತದ ತೌರೂರಾದ ಭಾರತಿಯ ಆಧುನಿಕ ಪ್ರಸಿದ್ಧ ದಾರ್ಶನಿಕರಾದ ಇವರಿಂದ ಬೌದ್ಧ ಧರ್ಮದ ಬಗ್ಗೆ ವಿಷಯಗಳನ್ನು ಕೇಳುವ ಆಸಕ್ತಿಯು ಚೀಣೀಯರಿಗಿತ್ತು. ಅದಕ್ಕಾಗಿಯೇ ಉತ್ತಮ ದಾರ್ಶನಿಕರೆಂದು ಲೋಕ ವಿಖ್ಯಾತರಾದ ಡಾ॥ ರಾಧಾಕೃಷ್ಣನ್‌ರವರನ್ನು ಚೀಣಾ ಸರ್ಕಾರವು ಆಹ್ವಾನಿಸಿತ್ತು.

ಮೇ ತಿಂಗಳಿನಲ್ಲಿ ವಿಮಾನದ ಮೂಲಕ ಸರ್ವಪಳ್ಳಿಯವರು ಪ್ರಯಾಣ ಬೆಳಸಿ 'ಚುಂಗ್‌ಕಿಂಗ್' ಅನ್ನು ಸೇರಿದರು. ಅಲ್ಲಿ 6–5–44 ರಿಂದ 21–5–44ರ ವರೆಗೆ ಹನ್ನೆರಡು ಉಪನ್ಯಾಸಗಳನ್ನು ಬೇರೆ ಬೇರೆ ವಿಷಯಗಳ ಮೇಲೆ ಕೊಟ್ಟರು. ಆ ಎಲ್ಲಾ ಉಪನ್ಯಾಸಗಳೂ 'India and China' (ಭಾರತ ಮತ್ತು ಚೀಣಾ) ಎಂಬ ಹೆಸರಿನಲ್ಲಿ ಗ್ರಂಥರೂಪವನ್ನು ತಾಳಿದೆ.

ಈ ಉಪನ್ಯಾಸ ಮಾಲೆಯಲ್ಲಿ, ಬೌದ್ಧಮತವು ಭಾರತದಲ್ಲಿ ಹೇಗೆ ಹುಟ್ಟಿ ಬೆಳೆಯಿತು? ಅನಂತರ ಅದು ಹೇಗೆ ಭಾರತದಲ್ಲಿ ತಟಸ್ಥವಾಯಿತು ಎಂಬ ವಿಷಯವನ್ನು ಸ್ಪಷ್ಟಪಡಿಸುವರು. ಭಾರತದಲ್ಲಿ ಇತ್ತೀಚೆಗೆ ಬೌದ್ಧ ಮತದ ಪುನರುಜ್ಜೀವನದ ಬಗೆಗೆ ಹೆಚ್ಚು ಆಸಕ್ತಿಯನ್ನು ನಾವು ವಹಿಸುತ್ತಿದ್ದೇವೆ. ಎಚ್ಚೆತ್ತ ಭಾರತಕ್ಕೆ ಗೌತಮಬುದ್ಧನ ತತ್ವಗಳು ಮತ್ತು ಸಂದೇಶಗಳ ಅರಿವು ಉಂಟಾಗಿದೆ. ಇಂದಿನ ಸ್ವಾತಂತ್ರ್ಯದ ಹೋರಾಟವು ಕೂಡ ಶಾಂತಿಯಿಂದಲೇ ನಡೆಯುತ್ತಿದೆ. ಹಿಂಸೆಗೆ ಪ್ರಪಂಚದಲ್ಲಿರುವ ಯಾವ ಜ್ಞಾನಿಯೂ ಕೂಡ ಮನ್ನಣೆಯನ್ನು ಕೊಡುತ್ತಿಲ್ಲ. ಬುದ್ಧನು ಹಿಂದೂಧರ್ಮವನ್ನು ಪರಿಶುದ್ಧಗೊಳಿಸಿದನೇ ಹೊರತು, ಹಿಂದೂ ಮತಕ್ಕೆ ವಿರುದ್ಧವಾದ ಮತ್ತೊಂದು ಹೊಸ ಮತವನ್ನು ಸ್ಥಾಪಿಸಲಿಲ್ಲ ಎಂಬ ಭಾವನೆಯು ದೇಶದಲ್ಲೆಲ್ಲಾ ಬೆಳೆಯುತ್ತಿದೆ ಎಂಬ ವಿಷಯಗಳನ್ನು ಚೀಣಾ ಜನತೆಗೆ ವಿವರಿಸಿದರು.

1946ರಲ್ಲಿ ಅಮೇರಿಕಾದ ಸಂಯುಕ್ತಪ್ರಾಂತ್ಯವು ಸರ್ವಪಳ್ಳಿಯವರನ್ನು ಉಪನ್ಯಾಸಕ್ಕಾಗಿ ಆಹ್ವಾನಿಸಿತು. ಸರ್ವಪಳ್ಳಿಯವರೂ ಕೂಡ ಸಂತೋಷದಿಂದಲೇ ಹೋದರು. ಹಾರ್‌ವಾರ್ಡ್, ಯಾಲೆ, ಲಾಸ್ ಎಂಜಲೀಸ್, ಮಿಚಿಗಾನ್, ಮತ್ತು ಕಾರ್ನೆಲ್ ವಿಶ್ವವಿದ್ಯಾನಿಲಯಗಳಲ್ಲಿ ಉಪನ್ಯಾಸಗಳನ್ನು ನೀಡಿದರು. ಅದೇ ವರ್ಷ ಯುನೆಸ್ಕೋ ಸಂಸ್ಥೆಯಲ್ಲಿ ಭಾಗವಹಿಸಲು ಪ್ಯಾರೀಸ್ ನಗರಕ್ಕೂ ಭೇಟಿಯನ್ನು ಕೊಟ್ಟರು. ಆ ವರ್ಷದ ಕೊನೆಯಲ್ಲಿ ' Indian Culture (ಭಾರತೀಯ ಸಂಸ್ಕೃತಿ' ) ಎಂಬ ಗ್ರಂಥವನ್ನು ಬರೆದು ಜಗತ್ತಿಗೆ ನೀಡಿದರು.

1947ನೇ ಆಗಸ್ಟ್ ಹದಿನೈದನೆಯ ತಾರೀಖು ಮಧ್ಯರಾತ್ರಿಯಲ್ಲಿ ಇಂಡಿಯಾ ದೇಶವು ಭಾರತ ಮತ್ತು ಪಾಕಿಸ್ಥಾನವೆಂದು ಇಬ್ಭಾಗವಾಗಿ ಸ್ವಾತಂತ್ರ್ಯವನ್ನು ಪಡೆಯಿತು. ಸಿ. ರಾಜಗೋಪಾಲಾಚಾರ್ಯರು ಸ್ವತಂತ್ರ ಭಾರತದ ಪ್ರಥಮ ವೈಸ್‌ರಾಯ್ ಆದರು. ಶತಮಾನಗಳ ಹೋರಾಟದ ಫಲವು ಕೈಗೂಡಿತ್ತು. ಭಾರತೀಯರೆಲ್ಲರ ಸಂತೋಷಕ್ಕೆ ಪಾರವೆಲ್ಲಿಂದ ಬಂತು? ಹೀಗಿರುವಾಗ ಸರ್ವಪಳ್ಳಿಯವರ ಕವಿ ಹೃದಯಕ್ಕಾದ ಸಂತಸಕ್ಕೆ ಮಿತಿಯುಂಟೆ? ಪರರ ಆಡಳಿತದ ಹಂಗಿನಲ್ಲಿ ತಲೆಬಾಗಿದ್ದ ಹಿಂದೂ

ಧರ್ಮವು ಮತ್ತೆ ತನ್ನ ಉನ್ನತ ಸ್ಥಾನವನ್ನು ಗಳಿಸಿಕೊಳ್ಳುವುದೆಂದು ಹಿಗ್ಗಿದರು.

1948ನೇ ಜನವರಿಯಲ್ಲಿ ಬನಾರಸ್ಸಿನ ಹಿಂದೂ ವಿಶ್ವವಿದ್ಯಾನಿಲಯದ ವೈಸ್ ಛಾನ್ಸಲರ್ ಹುದ್ದೆಗೆ ರಾಜೀನಾಮೆಯಿತ್ತರು ಆ ವಿಶ್ವವಿದ್ಯಾನಿಲಯದಲ್ಲೂ ನಿಸ್ವಾರ್ಥ ಸೇವೆಯನ್ನು ಮಾಡಿದ್ದರು. ಮಾಳವೀಯರ ದಕ್ಷತೆ ಮತ್ತು ಪ್ರೇಮಾದರಗಳಿಗೆ ಕುಂದಿಲ್ಲದಂತೆ ವಿಶ್ವವಿದ್ಯಾನಿಲಯವನ್ನು ಅಭಿವೃದ್ಧಿ ಪಡಿಸಿದರು. ಅದೇ ವರುಷ ಭಾರತದ ವಿಶ್ವವಿದ್ಯಾನಿಲಯಗಳ ಸಂಘದ ಅಧ್ಯಕ್ಷರಾಗಿ ನಿಯಮಿಸಲ್ಪಟ್ಟರು.

---

# ಕಮಲಾ ಉಪನ್ಯಾಸಗಳು

ಸರ್ವಪಳ್ಳಿಯವರು ಬೆನಾರಸ್ಸಿನಲ್ಲಿ ಉಪಕುಲಪತಿಗಳಾಗಿದ್ದಾಗ ಕಲ್ಕತ್ತಾ ವಿಶ್ವವಿದ್ಯಾನಿಲಯದ ವ್ಯವಸ್ಥಾಪಕ ಮಂಡಲಿಯು ಅಲ್ಲಿಯ ಕಮಲಾ ಉಪನ್ಯಾಸಮಾಲೆಯಲ್ಲಿ ಉಪನ್ಯಾಸ ನೀಡಲು ಆಹ್ವಾನಿಸಿತು. ಸರ್ವಪಳ್ಳಿಯವರಿಗೆ ಆ ವಿಶ್ವವಿದ್ಯಾನಿಲಯದ ಸಂಪರ್ಕವು ಸುಮಾರು ಇಪ್ಪತ್ತು ವರ್ಷಗಳಿಂದಲೂ ಇತ್ತು. ತಮ್ಮ ಅದೃಷ್ಟದ ಬಾಗಿಲೇ ಆ ವಿಶ್ವವಿದ್ಯಾನಿಲಯವೆಂದು ಅವರ ಭಾವನೆ. ಆದರೆ, ಅದರ ವ್ಯವಸ್ಥಾಪಕ ರಾಗಿದ್ದ ಅಶುತೋಷ ಮುಖರ್ಜಿಯವರು, ಅಷ್ಟರಲ್ಲೇ ದೈವಾಧೀನರಾಗಿ ದ್ದರು. ಅವರಿದ್ದಾಗಲೇ ಕಾಲವಾಗಿದ್ದ ತಮ್ಮ ಅಚ್ಚುಮೆಚ್ಚಿನ ಮಗಳಾಗಿದ್ದ ಕಮಲಾದೇವಿಯವರ ಹೆಸರಿನಲ್ಲಿ, ಒಂದು ಉಪನ್ಯಾಸ ಮಾಲೆಯನ್ನು ಆ ವಿಶ್ವವಿದ್ಯಾನಿಲಯದಲ್ಲಿ ಏರ್ಪಡಿಸಿದ್ದರು. ಅದು 1924 ರಿಂದಲೂ ನಡೆದು ಬರುತ್ತಿತ್ತು. 1947ರಲ್ಲಿ ಕಲ್ಕತ್ತಾ ವಿಶ್ವವಿದ್ಯಾನಿಲಯದ ಮೇಲ್ವಿಚಾರ ಕರು ಶ್ರೀ ರಾಧಾಕೃಷ್ಣನ್‌ರವರನ್ನು ಆ ಉಪನ್ಯಾಸ ಮಾಲೆಯಲ್ಲಿ ಉಪ ನ್ಯಾಸ ನೀಡಲು ಆಹ್ವಾನಿಸಿದರು. ಸರ್ವಪಳ್ಳಿಯವರು ಆಹ್ವಾನವನ್ನು ಸಂತೋಷದಿಂದಲೇ ಒಪ್ಪಿಕೊಂಡರು. ಅಲ್ಲಿ ಒಟ್ಟು ಐದು ಉಪನ್ಯಾಸ ಗಳನ್ನು ಕೊಟ್ಟರು.

ಮೊದಲನೆಯದು ಧರ್ಮದ ಆವಶ್ಯಕತೆ (Need of Religion) ಇಂದಿನ ಸ್ಥಿತಿಯಲ್ಲಿ ಪ್ರಪಂಚವು ಬಹು ವ್ಯಸನದಲ್ಲಿದೆ. ಸರ್ವನಾಶವನ್ನು ಹೊಂದುವ ಭೀತಿಯಲ್ಲಿ ತಲ್ಲಣಿಸುತ್ತಿದೆ. ಅತಿಯಾಗುತ್ತಿರುವ ಪ್ರಜಾ ಸಂಖ್ಯೆ, ಆರ್ಥಿಕ ಸ್ಥಿತಿಯ ಮುಗ್ಗಟ್ಟು, ಮಿತಿಯಿಲ್ಲದ ಯುದ್ಧ, ಯುದ್ಧಕ್ಕೆ ಪ್ರೋತ್ಸಾಹವನ್ನು ನೀಡುತ್ತಿರುವ ವಿಜ್ಞಾನ ಮುಂತಾದುವು ಭವಿಷ್ಯದ ಸಂಶಯಾತ್ಮಕಗಳಾಗಿವೆ. ಸ್ವಾರ್ಥಕ್ಕಾಗಿ ಹೆಣಗಾಡಿದ ಹಿಟ್ಲರ್, ಮುಸ ಲೋನಿ ಮುಂತಾದವರು ಮುಳುಗಿಹೋದರು. ಮುಖ್ಯವಾಗಿ ನಾವು ಜಯಿಸಬೇಕಾದುದು ಶಾಂತಿಯನ್ನು. ದುಸ್ಸಮಾಜದಲ್ಲಿನ ಕೆಟ್ಟದ್ದನ್ನು ನಿವಾರಿಸಬಲ್ಲ ಮದ್ದನ್ನು ಸಮಾಜದ ಒಡೆಯರಾದ ನಾವು ಕಂಡುಹಿಡಿಯ ಬೇಕಾಗಿದೆ ಎಂಬ ವಿಷಯಗಳನ್ನು ತಿಳಿಸುತ್ತಾರೆ.

ಎರಡನೆಯ ಉಪನ್ಯಾಸವು—"ಧರ್ಮದ ಪ್ರೇರಣೆ ಮತ್ತು ಹೊಸ ಪ್ರಪಂಚದ ಕ್ರಮ (Relgion and the New World Order)" ಎಂಬುದು. ಜನತೆಯು ಸ್ವಾರ್ಥಕ್ಕಾಗಿ ಧರ್ಮವನ್ನು ವಿರೋಧಿಸುತ್ತಾರೆ. ಧರ್ಮವು ಆಗಾಗ ರಾಜಕೀಯಕ್ಕೆ ಬಲಿಯಾಗುತ್ತದೆ. ಇದರಿಂದ ದೇವರುಗಳನ್ನೆ ಬದಲಾವಣೆಯನ್ನು ಮಾಡುವ ಮಾನವನ ಮನೋಭಾವನೆಯನ್ನು ತಿಳಿಸುತ್ತಾರೆ.

ಇತ್ತೀಚೆಗೆ ಧರ್ಮದಿಂದಲೇ ಮೈತ್ರಿಯುಂಟಾಗುವ ವಿಷಯವನ್ನು ಚರ್ಚಿಸುವರು. ಪ್ರಪಂಚದಲ್ಲಿ ನಾನಾ ಜನಾಂಗಗಳೂ, ಭಿನ್ನಭಿನ್ನ ಧರ್ಮೀಯರೂ, ಇದ್ದಾರೆ. ಇದು ವಿಜ್ಞಾನದ ಯುಗ. ಎಲ್ಲಾ ಧರ್ಮಗಳೂ ಹತ್ತಿರ ಹತ್ತಿರ ಸರಿಯುತ್ತಿವೆ. ಎಲ್ಲದರ ಗುರಿಯೂ ಒಂದೇ ಎಂಬ ಅರಿವಾಗುತ್ತಿದೆ. ಇನ್ನುಮುಂದೆ ಮತಗಳ ಹೆಸರಿನಲ್ಲಿ ನಡೆಯುವ ದೌರ್ಜನ್ಯವು ಕಡಿಮೆಯಾದೀತು! ಎಂದು ಆಶಿಸುತ್ತಾರೆ

ಒಳ್ಳೆಯ ಮತ್ತು ಕೆಟ್ಟದರ ಅರಿವು ಮನುಷ್ಯನಿಗಿದೆ. ಆದುದರಿಂದಲೇ ಇವನನ್ನು ಪ್ರಾಣಿಗಿಂತಲೂ ಶ್ರೇಷ್ಠನೆಂದು ಹೇಳುವರು. ಆ ಮಾತು ಸಾರ್ಥಕವಾಗಬೇಕಾದರೆ, ಸಹ ಮನುಷ್ಯರ ಸುಖ ಮತ್ತು ದುಃಖಗಳಲ್ಲಿ ಸಹಭಾಗಿಯಾಗಬೇಕು. ಹಾಗಿಲ್ಲದವನು ಮೂಕಪ್ರಾಣಿಗಿಂತಲೂ ಕೀಳಾಗುತ್ತಾನೆ. ಎಂದು ಹೇಳಿ ಮನುಷ್ಯರಲ್ಲಿ ಬೇಕಾದ ನಡವಳಿಕೆಯನ್ನು ತಿಳಿಸುವರು.

ಇಂದಿನ ಹೊಸಕ್ರಮವನ್ನು ವಿವರಿಸುತ್ತಾ, ಮನುಷ್ಯನು ಚರಿತ್ರೆಯ ಪ್ರಾರಂಭ ದೆಸೆಯಲ್ಲಿ ಈಗಲೂ ಇದ್ದಾನೆ. ಚರಿತ್ರೆಯ ಅಂತ್ಯದಲ್ಲಿದ್ದೇವೆಂಬುದು ಸುಳ್ಳು. ಪ್ರೇಮ ಮತ್ತು ತ್ಯಾಗಮನೋಭಾವನೆಯುಳ್ಳ ಪ್ರಪಂಚವನ್ನು ಕಟ್ಟಲು ಹೋರಾಡುತ್ತಿದ್ದೇವೆ.

ಪ್ರಸ್ತುತ ಕಾಲದಲ್ಲಿ ಪ್ರಪಂಚವು ಅತೃಪ್ತಿದಾಯಕವಾದುದು. ಮಾನವ ಸ್ವಭಾವವು ಅಪೂರ್ಣವಾದುದೆಂದು ಆಧ್ಯಾತ್ಮಿಕ ಅನುಭವದಲ್ಲಿ ಹೇಳುತ್ತೇವೆ. ಇದು ಕೇವಲ ಕಲ್ಪನೆ. ಮಾನವನ ಕರ್ಮಗತಿಯು ಅಪೂರ್ಣತೆಯಿಂದ ಪಾರಾಗಲಾರದಾದರೂ, ಅಭಿವೃದ್ಧಿ ಹೊಂದಲು ಸದಾ ಪ್ರಯತ್ನಪಡುತ್ತಿದೆ. ಅಜ್ಞಾನ ಮತ್ತು ಅಪೂರ್ಣತೆಗಳನ್ನು ನಾವು ಮೊದಲು ತ್ಯಜಿಸಬೇಕು. ಮಿತಿ ಮತ್ತು ಅಮಿತಿ. ಪೂರ್ಣ ಮತ್ತು

ಆಘೂರ್ಣಗಳು ಸ್ಥಿರವಾದ ವಿರೋಧಗಳೆಂದು ಭಾವಿಸಬಾರದು. ಅದನ್ನೇ ನಮ್ಮ ಅದ್ವೈತ ವೇದಾಂತವು ಸತ್ ಮತ್ತು ಅಸತ್‌ಗಳು ಸ್ಥಿರವಾದ ವಿರುದ್ಧತೆಗಳಲ್ಲವೆನ್ನುತ್ತದೆ.

ನಾವು ಸೌಂದರ್ಯ ಮತ್ತು ಪೂರ್ಣತೆಗೆ ಮತ್ತೊಂದು ಪ್ರಪಂಚವನ್ನು ಹುಡುಕಬೇಕಾಗಿಲ್ಲ. ಪ್ರತಿಯೊಬ್ಬ ಮಾನವನ ಜೀವವೂ ಬೆಲೆಯುಳ್ಳದ್ದಾಗಿದೆ. ಕಾಲವೆಂಬ ಸರಪಳಿಯಲ್ಲಿ ನಿರಂತರವಾದ ಪ್ರೇಮವಿದೆ. ಪ್ರೇಮವಿಲ್ಲದೆ ಅನೇಕ ಯುಗಗಳು ಕಳೆಯುವಂತಿರಲಿಲ್ಲ. ಮಾನವ ಜನಾಂಗವು ಉಳಿಯುತ್ತಲೂ ಇರಲಿಲ್ಲ. ದೇವರು ಸ್ವರ್ಗವನ್ನು ನೀಡಬಲ್ಲನು. ಮನುಷ್ಯನಾದರೋ ದುರಾಶೆಯಿಂದ ಭೂಮಿಯನ್ನೇ ಪ್ರೀತಿಸುತ್ತಾನೆ. ಸ್ವರ್ಗವೆಂಬುದು ಬೇರೊಂದು ಲೋಕವಲ್ಲ. ಅದು ಭೂಮಿಯಲ್ಲಿಯೇ ಇದೆ. ಮಾನವನ ನಿಜವಾದ ಪರಮಶ್ರೇಷ್ಠ ಗುರಿಯೆಂದರೆ, ಸ್ವರ್ಗಕ್ಕಿಂತಲೂ ಮಿಗಿಲಾದ ಮೋಕ್ಷ ಸಾಧನೆಯು. ಅದನ್ನೇ ಪರಮ ಪುರುಷಾರ್ಥವೆಂದೂ, ಪರಮಧರ್ಮವೆಂದೂ ಹೇಳುವರು.

ಧರ್ಮದ ಕಲ್ಪನೆ—ಜೀವನ ಚರಿತ್ರೆಯಲ್ಲಿ ಮಾನವನ ಬುದ್ಧಿಯು ಅದ್ಭುತ ಫಲವಾಗಿದೆ. ಸನ್ನಿವೇಶಕ್ಕನುಗುಣವಾಗಿ, ಹೊಂದಿಕೊಳ್ಳುವ ರೀತಿಯನ್ನರಿತಿದೆ. ಪ್ರಕೃತಿಯಿಂದ ತನಗಾದ ಅನುಭವಗಳನ್ನು ನೆನಪಿನಲ್ಲಿಟ್ಟುಕೊಳ್ಳುತ್ತದೆ. ಮಾನವೇತರ ಪ್ರಾಣಿಗಳಾದರೋ ವಂಶಾನುಗತವಾಗಿ ಬಂದ ಗುಣಗಳಿಂದಲೇ ಜೀವಂತವಾಗುಳಿದಿರುತ್ತವೆ. ಪ್ರಕೃತಿಯಿಂದ ಅವು ಕಲಿತರೂ ಅತ್ಯಲ್ಪವನ್ನು ಮಾತ್ರ ಕಲಿಯಬಲ್ಲವು. ತಮಗಾದ ಅನುಭವಗಳನ್ನು ಮರೆತು, ಕಷ್ಟಪಡುತ್ತಿರುತ್ತವೆ. ಉದಾಹರಣೆಗೆ ಹುಲಿಯು ನೂರಾರು ಆರುಸಾವಿರ ವರ್ಷಗಳಿಂದಲೂ ಇದೆ. ಆದರೂ ತನ್ನ ವರ್ತನೆಯನ್ನು ಮಾತ್ರ ಅದು ಬದಲಾಯಿಸಿಕೊಂಡಿಲ್ಲ. ಮನುಷ್ಯನು ಹಾಗಲ್ಲ. ತನಗಾದ ಅನುಭವವನ್ನು ನೆನಪಿನಲ್ಲಿಟ್ಟುಕೊಂಡು ಸಮಯಾನುಸಾರ ಉಪಯೋಗಿಸಿಕೊಳ್ಳುತ್ತಾನೆ. ಆದುದರಿಂದ ಬುದ್ಧಿಯು ಮಾನವನ ಏಕೈಕ ಸಂಪತ್ತು. ಅದೇ ಅವನ ವೈಶಿಷ್ಟ್ಯ. ಅದೇ ಅವನ ಹಕ್ಕು. ಮನುಷ್ಯನು ಶಿಕ್ಷಣವನ್ನು ಪಡೆಯಬಲ್ಲ ಪ್ರಾಣಿ. ಅವನಿಗೆ ಸಾಮಾಜಿಕ ಹಿಡಿತವಿದೆ. ಅವನ ಉಡುಪು, ತಿನ್ನುವ ಆಹಾರ, ನಡೆಯುವ ರೀತಿ,

ಮುಂತಾದುವುಗಳು, ಶಿಕ್ಷಣದಿಂದಲೇ ದೊರಕಿವೆ. ಮಾನವ ಸಹಜವಾದ ಸ್ವಾಭಾವಿಕ ಪ್ರೇರಣೆಯಿಂದ ಸುಸಂಸ್ಕೃತ ನಡವಳಿಕೆಯು ಬರುವುದಿಲ್ಲ. ಮಾನಸಿಕ ಘಟನೆಗಳಿಂದ ಕೃತಕವಾಗಿ ಬರುತ್ತವೆ.

ನಮ್ಮ ಹಿಂದೂಧರ್ಮದ ಕಲ್ಪನೆಯು ಜೀವನಕ್ಕೆ ಆಧಾರವಾಗಿರುವಂತೆ, ಕರ್ಮದ ಮೂಲಕ ಮಾನವೀಯತೆಯನ್ನು ನೀಡುತ್ತದೆ. ನಮ್ಮ ಅರ್ಥ ಮತ್ತು ಕಾಮಗಳನ್ನು ಆಧ್ಯಾತ್ಮಿಕ ಹಿಡಿತದಲ್ಲಿ ಬೆಳೆಸುತ್ತದೆ. ನಿತ್ಯ ಜೀವನದ ಸಾಮಾನ್ಯ ವೃತ್ತಿಗಳಲ್ಲಿ ನಿಜವಾದ ಸೇವಾ ಭಾವನೆಯನ್ನು ತೋರುತ್ತದೆ. ನಿಜವಾದ ಕರ್ಮವು ಸಂನ್ಯಾಸಕ್ಕಿಂತಲೂ ಶ್ರೇಷ್ಠವಾದುದು, ಹಿಂದೂಧರ್ಮವು ವೈರಾಗ್ಯವನ್ನು ಅತ್ಯಂತ ಶ್ರೇಷ್ಠವೆಂದು ಹೇಳುವುದಿಲ್ಲ. ಮನುಷ್ಯನು ಸರಿಯಾಗಿರಬೇಕು. ಸಂತೋಷವು ಉತ್ತಮ ಜೀವನದ ಒಂದು ಅಂಗ. ಉತ್ತಮವಾದ ದೃಢಕಾಯವಾದ ಶರೀರ ಮತ್ತು ಸಂತೋಷದ ಮನಸ್ಸು ಧಾರ್ಮಿಕ ವಿಷಯಕ್ಕೆ ಅತ್ಯವಶ್ಯಕ. ಇವೆರಡನ್ನೂ ಬೇಡವೆನ್ನುವಂತಿಲ್ಲ. ಉತ್ತಮ ಆರ್ಥಿಕ ಸ್ಥಿತಿಯು ಜೀವನಕ್ಕೆ ಬೇಕೇ ಬೇಕು. ಐಶ್ವರ್ಯದಿಂದ ಪಾಪವೂ ಇಲ್ಲ. ಬಡತನದಿಂದ ಪುಣ್ಯವೂ ಇಲ್ಲ. ಆದರೆ ಸಂಪತ್ತನ್ನು ಗಳಿಸುವ ರೀತಿಯು ನೀತಿಗೆ ವಿರುದ್ಧವಾಗಿರಬಾರದು. ಪರರ ಕಿರುಕುಳಕ್ಕೆ ಕಾರಣವಾಗಿರಬಾರದು. ನಮ್ಮ ಶರೀರವು ದೇವರ ದೇವಸ್ಥಾನ. ಯಾವುದೋ ಭ್ರಮೆಯಲ್ಲಿ ಪ್ರಪಂಚದಿಂದ ಮುಕ್ತರಾಗುತ್ತೇವೆಂದು ಆರೋಗ್ಯ, ಐಶ್ವರ್ಯ, ಸ್ಥಾನಮಾನ, ಆಸ್ತಿ ಮತ್ತು ಮನೆ ಮಠಗಳನ್ನು ಕೆಲವರು ದೂರ ತಳ್ಳುತ್ತಾರೆ. ಆದರೂ ಅವರುಗಳು ಅವುಗಳಿಂದ ದೂರವಾಗುವುದಿಲ್ಲ. ಅಂತಹವರು ತಮ್ಮನ್ನು ತಾವೇ ಕೊಲೆಮಾಡಿಕೊಳ್ಳುತ್ತಾರೆ. ಮನಸ್ಸಿನಲ್ಲಿ ಅಶಾಂತಿಯನ್ನು ತುಂಬಿಕೊಳ್ಳುತ್ತಾರೆ.

ಮಾನವ ಚೈತನ್ಯಕ್ಕೆ ಗೌರವವನ್ನು ತರುವುದೇ ಧರ್ಮದ ಮೂಲತತ್ವವು. ಅದು ಸರ್ವದಾ ಮನುಷ್ಯನನ್ನು ಅತ್ಯುನ್ನತ ಸ್ಥಾನಕ್ಕೆ ಕರೆದೊಯ್ಯುತ್ತಿರುತ್ತದೆ. ಧರ್ಮವೆಂಬ ಪದವೇ ಪರಿವರ್ತನ ಶೀಲವುಳ್ಳದ್ದು. ನಮಗಾಗದುದನ್ನು ಮತ್ತೊಬ್ಬರಿಗೆ ಮಾಡಬಾರದು ನಮ್ಮಂತೆಯೇ ಪರರನ್ನು ಕಾಣಬೇಕು ಕಾರ್ಯದಲ್ಲಿ, ಮನಸ್ಸಿನಲ್ಲಿ, ಮಾತಿನಲ್ಲಿ ಪರರಿಗೆ ಅಹಿ

ವನ್ನು ಬಯಸದಿರುವುದೇ ನಿಜವಾದ ಧರ್ಮ. ಧರ್ಮವೆಂಬುದು ಮತ್ತೊಂದಿಲ್ಲ. ಇದೇ ನಮ್ಮ ಹಿಂದೂ ಧರ್ಮಸಾರವೆಂದು ಸರ್ವಪಳ್ಳಿಯವರು ಇಲ್ಲಿ ವಿವರಿಸುತ್ತಾರೆ

ಧರ್ಮದ ನಿಯಮಗಳನ್ನು ಅನುಸರಿಸಲು ಮತ್ತು ಮಾರ್ಪಡಿಸಲು ಜೀವಂತ ಸಮಾಜವು ಶಕ್ತಿಯುಳ್ಳದಾಗಿರಬೇಕು. ಹಿಂದೂ ಧರ್ಮವು ಕಾಲಾನುಗುಣವಾಗಿ ಬದಲಾವಣೆಯನ್ನು ಹೊಂದುತ್ತಿದೆ. ಧರ್ಮದಲ್ಲಿನ ಮೂಲತತ್ವಗಳು ಸ್ಥಿರವಾಗಿದ್ದರೂ ಅದರ ನಿಯಮಗಳು ಮಾರ್ಪಾಡಾಗಿವೆ ಪೂರ್ವದ ನಮ್ಮ ಸಂಸ್ಥೆಗಳು ಕಳೆದು ಹೋಗಿವೆ. ಅವುಗಳ ನಿಯಮಗಳನ್ನು ನಾವೀಗ ಕಣ್ಣು ಮುಚ್ಚಿ ಅನುಸರಿಸಬೇಕಾಗಿಲ್ಲ. ಧರ್ಮವು ಪ್ರಯೋಗಾನುಸಾರವಾದುದು. ಕೃತ, ತ್ರೇತ, ದ್ವಾಪರಾ, ಯುಗಗಳು ಕಳೆದು ಕಲಿಯುಗವು ಕಳೆಯುತ್ತಿದೆ. ಆಗಿನ ಮನು ಗೌತಮ, ಶಂಖಲಿಖಿತ ಮತ್ತು ಪರಾಸರು, ಅವರವರ ಕಾಲಕ್ಕನುಗುಣವಾಗಿ ಧರ್ಮವನ್ನು ಸುಧಾರಣೆ ಮಾಡಿದರು. ಆದುದರಿಂದ ಒಂದು ಕಾಲದ ನಂಬಿಕೆ ಮತ್ತು ಬಳಕೆಗಳು ಮತ್ತೊಂದು ಕಾಲಕ್ಕೆ ಸರಿಹೊಂದಲೇ ಬೇಕೆಂಬ ನಿಯಮ ವೇನಿಲ್ಲ.

ಮೊದಮೊದಲು ದ್ರಾವಿಡ ಧರ್ಮವು ಆರ್ಯ ಧರ್ಮಕ್ಕೆ ಸಮನಾಗಿ ಬೆರೆಯಿತು. ಅನಂತರ ಹೂಣರು, ಗ್ರೀಕರು, ಮುಸಲ್ಮಾನರು, ಮತ್ತು ಕ್ರೈಸ್ತರು ದೇಶಕ್ಕೆ ಬಂದರು ಅವರ ಧರ್ಮಗಳ ಸಂಪರ್ಕದಿಂದ ಹಿಂದೂ ಧರ್ಮದಲ್ಲಿ ವರ್ಣಸಂಕರವಾಯಿತು ಒತ್ತಾಯಪೂರ್ವಕವಾಗಿ ಮತಾಂತರ ಹೊಂದಿದವರನ್ನು ಮತ್ತೆ ಹಿಂದೂ ಧರ್ಮಕ್ಕೆ ಸೇರಿಸಿಕೊಳ್ಳುವ ನಿಯಮಗಳು ನಿರ್ಮಾಣವಾದುವು. ಹೀಗೆ ಆಗಾಗ ಧರ್ಮದಲ್ಲಿ ಮಾರ್ಪಾಡಾಗುತ್ತಿದೆ. ಹಾಗಿಲ್ಲದಿದ್ದರೆ ನಮ್ಮ ಸಂಸ್ಕೃತಿಯು ಸತ್ತುಹೋಗುತ್ತಿತ್ತು ಎಂಬ ವಿಷಯಗಳನ್ನು ತಿಳಿಸುವರು.

ಅನಂತರ ಜಾತಿ ಮತ್ತು ಅಸ್ಪೃಶ್ಯತೆಯ ವಿಷಯವನ್ನು ಪ್ರಸ್ತಾಪಿಸುವರು. ಅಸ್ಥಿರವಾದ ವೈಯುಕ್ತಿಕ ಸ್ವಭಾವದ ಆಧಾರದಿಂದ ಜಾತಿ ಪಂಗಡವಾಗಿದೆ. ಪ್ರಾರಂಭದಲ್ಲಿ ಒಂದೇ ಜಾತಿಯಿತ್ತು. ಎಲ್ಲರೂ ಬ್ರಾಹ್ಮಣರೇ ಆಗಿದ್ದರು ಅಥವಾ ಶೂದ್ರರೇ ಆಗಿದ್ದರು. ಹುಟ್ಟಿನಲ್ಲಿ ಶೂದ್ರರಾದರೂ ಶುದ್ಧತೆಯಿಂದ ಬ್ರಾಹ್ಮಣರಾಗಬಹುದೆಂದು ಸ್ಮೃತಿಯು ಹೇಳುತ್ತದೆ.

ಸಮಾಜದ ಅವಶ್ಯಕತೆಗಳಿಗನುಗುಣವಾಗಿ, ವೈಯಕ್ತಿಕ ಕರ್ತವ್ಯಗಳಿಗನು ಗುಣವಾಗಿ ಜಾತಿಗಳು ಭಿನ್ನ ಭಿನ್ನವಾಗಿದ್ದುವು. ಪೌರೋಹಿತ್ಯಮಾಡು ವವರು ಬ್ರಾಹ್ಮಣರು. ಅವರಿಗೆ ಆಸ್ತಿಪಾಸ್ತಿಗಳಾಗಲೀ ಅಡಳಿತ ಶಕ್ತಿ ಯಾಗಲೀ ಇರುತ್ತಿರಲಿಲ್ಲ. ಸಮಾಜ ಸುಧಾರಣೆಯೇ ಅವರ ಕರ್ತವ್ಯ ವಾಗಿತ್ತು. ದೇಶದ ಆಡಳಿತಗಾರರಾಗಿದ್ದವರು ಕ್ಷತ್ರಿಯರಾದರು. ವ್ಯಾಪಾರ ಮತ್ತು ಬೇಸಾಯ ಮಾಡುತಿದ್ದವರು ವೈಶ್ಯರೆನಿಸಿಕೊಂಡರು. ಉಳಿದವರು ಶೂದ್ರರು ಮೇಲಿನವರ ಸೂಚನೆಯಂತೆ ವರ್ತಿಸತಕ್ಕವರು. ಒಟ್ಟಿನಲ್ಲಿ ಹೇಳುವುದಾದರೆ ಜಾತೀಯತೆಯು ಅವರವರ ಸಂಸ್ಕೃತಿ, ರಾಜಕೀಯ ಆರ್ಥಿಕಸ್ಥಿತಿ ಮತ್ತು ಕರ್ತವ್ಯಗಳಿಗನುಗುಣವಾಗಿ ಭಿನ್ನ ಭಿನ್ನವಾದುವು.

ಆದಿಯಿಂದಲೂ ಹಿಂದೂಗಳಲ್ಲದ ಗ್ರೀಕರೂ ಕಿರಾತರೂ, ಚೀಣೀ ಯರು, ಶಕರು, ಹೂಣರು, ಪಾರ್ಥಿಯನ್ನರು ಮತ್ತು ದ್ರಾವಿಡರು ಕ್ರಮೇಣ ಹಿಂದೂಗಳಾಗಿ ಬೆರತಿದ್ದಾರೆ. ಕಾಲಕ್ರಮೇಣ ಅಷ್ಟಾಗಿ ಭಿನ್ನತೆ ಯನ್ನೇ ಪರಿಗಣಿಸುತ್ತಿರಲಿಲ್ಲ. ಉದಾಹರಣೆಗೆ ಗುಪ್ತರಾಜನು ಮ್ಲೇಚ್ಛ ಸ್ತ್ರೀಯೊಬ್ಬಳನ್ನು ಮದುವೆಯಾಗಿರುವ ಆಧಾರ ದೊರಕುತ್ತದೆ. ಯೋಚಿಸಿ ನೋಡುವುದಾದರೆ ಜಾತಿಪಂಗಡಗಳಾದುದು ಸಮಾಜದ ಏಳಿಗೆಯನ್ನು ಸಾಧಿಸುವುದಕ್ಕಾಗಿ! ಒಗ್ಗಟ್ಟನ್ನು ಸ್ಥಾಪಿಸುವುದಕ್ಕಾಗಿ! ವೈಯಕ್ತಿಕವಾಗಿ ಅಭ್ಯುದಯವನ್ನು ಹೊಂದುವುದಕ್ಕಾಗಿ! ತಮ್ಮ ತಮ್ಮ ಕರ್ಮಗಳಲ್ಲಿ ಕುಶ ಲತೆಯನ್ನು ಗಳಿಸುವುದಕ್ಕಾಗಿ! ಅದು ಹೊರತು ಜಾತಿಯ ಹೆಸರನ್ನು ದುರುಪಯೋಗ ಪಡಿಸಿಕೊಂಡು ಸಮಾಜದಲ್ಲಿ ಭಿನ್ನತೆಯನ್ನು ಕಲ್ಪಿಸಿ ಕೊಳ್ಳಲೆಂದಲ್ಲ ಹಿಂದಿನ ಕಾಲದಲ್ಲಿ, ತಮ್ಮ ವರ್ಣಗಳನ್ನು ಬದಲಾಯಿಸಿ ಕೊಳ್ಳಲು ಅವಕಾಶವಿತ್ತು. ಉದಾಹರಣೆಗೆ ವಿಶ್ವಾಮಿತ್ರ, ಅಜಮಿಲ, ಪುರಾಮಿದ ಮುಂತಾದ ಕ್ಷತ್ರಿಯರು ಬ್ರಾಹ್ಮಣರಾದರು. ಒಡಹುಟ್ಟಿದ ಸಂತ ಮತ್ತು ದೇವಾಪಿ ಎಂಬ ಅಣ್ಣತಮ್ಮಂದಿರಿಬ್ಬರಲ್ಲಿ ಒಬ್ಬನು ಬ್ರಾಹ್ಮಣ ನಾಗುತ್ತಾನೆ; ಮತ್ತೊಬ್ಬನು ಕ್ಷತ್ರಿಯನಾಗುತ್ತಾನೆ. ಜನಕನು ಹುಟ್ಟಿನಲ್ಲಿ ಕ್ಷತ್ರಿಯನಾದರೂ, ತನ್ನ ಕರ್ತವ್ಯ ಮತ್ತು ಜ್ಞಾನದಿಂದ ಬ್ರಾಹ್ಮಣನೆಂದು ಪರಿಗಣಿಸಲ್ಪಟ್ಟಿದ್ದನು. ಆದುದರಿಂದ ಶೂದ್ರನಾದರೂ, ಉತ್ತಮ ಕರ್ತವ್ಯ ಗಳಿಂದ ಬ್ರಾಹ್ಮಣನಾಗಬಹುದು. ಕೇವಲ ಹುಟ್ಟಿನಲ್ಲಿ ಬ್ರಾಹ್ಮಣನೆನ್ನುವುದು ಸೂಕ್ತವಲ್ಲ ಎನ್ನುತ್ತಾರೆ.

ಮಾನವೀಯತೆಗೆ ಯಾವಾಗಲೂ ಸಂಕೋಲೆಯು ಇರಬಾರದು ದೈಹಿಕ ಮತ್ತು ಸಾಮಾಜಿಕ ಚಲನೆಯು ಇರಬೇಕು. ಈ ನಾಲ್ಕು ವರ್ಣಗಳು ವಂಶಾನುಗುಣವಾಗಿ ಬರತಕ್ಕವಲ್ಲ. ಆದರೂ ಬರುತ್ತಿವೆ. ಆದರೆ ಇವು ದೇವರ ಸೃಷ್ಟಿ ಎಂದು ಭ್ರಮಿಸಬಾರದು. ಹಿಂದಿನಕಾಲದಲ್ಲಿಯೂ ಅದು ಸ್ಥಿರವಾದ ಭಿನ್ನತೆಯನ್ನು ಹೊಂದಿರಲಿಲ್ಲವೆಂಬುದನ್ನು ಅರಿಯಬಹುದು. ಉದಾಹರಣೆಗೆ ಮೆಗಾಸ್ತನೀಸನು ಅವನ ಕಾಲದಲ್ಲಿದ್ದ ಅನೇಕ ಜಾತಿಗಳನ್ನು ತಿಳಿಸುವನು. ಆದರೂ ಅವನು ಪ್ರತಿಯೊಂದರಲ್ಲೂ ಅಭೇದ್ಯ ಭಿನ್ನತೆಗಳನ್ನು ಅವನು ಹೇಳುವುದಿಲ್ಲ. ಪತಂಜಲಿಯ ಕಾವ್ಯದಲ್ಲಿ, ಬ್ರಾಹ್ಮಣರಾಜನನ್ನೂ, ಮನು ಧರ್ಮಶಾಸ್ತ್ರದಲ್ಲಿ ಶೂದ್ರರಾಜನನ್ನೂ ತಿಳಿಯಬಹುದು ಅಲೆಗ್ಜಾಂಡರನು ಭಾರತಕ್ಕೆ ಬಂದಾಗ ಬ್ರಾಹ್ಮಣ ಸಿಪಾಯಿಗಳಿದ್ದರಂತೆ.

ಜಾತಿಯ ಭಾವನೆಯು ಒಂದು ಸುಳ್ಳು ಹೆಮ್ಮೆಯನ್ನು ಬೆಳೆಸುತ್ತದೆ. ಕೆಳದರ್ಜೆಯವರು ಎಂದು ಕರೆಯುವವರ ತೇಜೋವಧೆಯನ್ನು ಮಾಡಿ ಅವರನ್ನು ತಳಕ್ಕೆ ತುಳಿಯುತ್ತಿವೆ. ಉಚ್ಛ ಮತ್ತು ನೀಚ ಜನ್ಮಗಳೆಂಬ ಸಮಾಜವಿರೋಧ ಭಾವನೆಯುಂಟಾಗಿವೆ. ಇದು ವರ್ಣಧರ್ಮದ ವಿಕಟರೂಪ ಮನುವು ಬ್ರಹ್ಮಸೂತ್ರಗಳನ್ನು ಓದಲು ಶೂದ್ರರಿಗೆ ತಡೆಹಾಕಿದನು. ಅದರಿಂದ ಜೈನ ಮತ್ತು ಬೌದ್ಧ ಮತಗಳು ಕವಲಾದುವು. ಇತ್ತೀಚೆಗೆ ಇಸ್ಲಾಂ ಮತ್ತು ಕ್ರೈಸ್ತಧರ್ಮಕ್ಕೆ ಹಿಂದೂಗಳ ಹೆಚ್ಚಿನ ಸಂಖ್ಯೆಯು ಸೇರುತ್ತಿದೆ. ಇದಕ್ಕೆ ಅರ್ಥವಿಲ್ಲದ ಬಿಕ್ಕಟ್ಟುಗಳು ಜಾತಿಗಳಲ್ಲಿರುವುದೇ ಕಾರಣ. ಇದರಿಂದ ಹಿಂದೂ ಸಮಾಜದಲ್ಲಿ ಸಹೋದರ ಭಾವನೆಯು ಮಾಯವಾಗಿ ಚೈತನ್ಯವು ಕುಗ್ಗುತ್ತಿದೆ. ಅದನ್ನರಿತೇ ರಾಜಾರಾಮ ಮೋಹನರಾಯ ದಯಾನಂದ ಸರಸ್ವತಿ, ಮತ್ತು ಗಾಂಧೀಜಿಯವರು ಹಿಂದೂ ಸಮಾಜವು ಜಾತ್ಯಾತೀತವಾಗಬೇಕೆಂದು ಹೇಳಿದ್ದಾರೆ.

ದೈಹಿಕ ಶುದ್ಧಿಯು ಅಂತರ್ಯ ಶುದ್ಧಿಗೆ ಸೂಚನೆ. ಶುದ್ಧತ್ವವು ದೇವತ್ವಕ್ಕೆ ದಾರಿ. ಮೊದಮೊದಲು ಚಾತುರ್ವರ್ಣ್ಯಗಳಲ್ಲಿ ಭೋಜನಾದಿಗಳಿಗೆ ಕಟ್ಟಿರಲಿಲ್ಲ. ಮನುವು, ದ್ವಿಜನಾದವನು ಶೂದ್ರನು ಮಾಡಿದುದನ್ನು ತಿನ್ನಬಾರದೆಂದು ಹೇಳಿದನು. ಆದರೆ ವಂಶದ ಮಿತ್ರನಾದ, ಶೂದ್ರನ ಮನೆಯಲ್ಲಿ

ತಿನ್ನಬಹುದೆಂದು ಸೂಚಿಸಿದನು. ಇದರಿಂದ ಹಿತೈಷಿಗಳಾದವರಲ್ಲಿ ತಿನ್ನ ಬಹುದು. ಅಹಿತರಲ್ಲಿ ತಿನ್ನಬಾರದೆಂಬ ಭಾವನೆಯು ತಿಳಿಯುತ್ತದೆ.

ಮಲಿನತೆಯು ಯಾವಾಗಲೂ ತಿರಸ್ಕಾರ ಯೋಗ್ಯವಾದುದೇ. ಆದರೆ ಕೇವಲ ಹರಿಜನರು ಅಸ್ಪೃಶ್ಯರೆನ್ನುವುದು ನ್ಯಾಯವಲ್ಲ. ನಾನಾ ವೃತ್ತಿ ಗಳಿಂದ ಮತ್ತು ಅನಾರ್ಯಭಾವನೆಯಿಂದ ಜಾತಿಗಳ ಕ್ರಾಂತಿಯಾಯಿ ತೆಂದರೂ ಬ್ರಾಹ್ಮಣಗಳು ಮತ್ತು ಮನುಧರ್ಮಶಾಸ್ತ್ರವು ನಾಲ್ಕು ವರ್ಣಗ ಳನ್ನು ಮಾತ್ರ ತಿಳಿಸುತ್ತವೆ. ಐದನೆಯ ವರ್ಣವನ್ನು ಎಲ್ಲಿಯೂ ಯಾರು ತಿಳಿಸುವುದಿಲ್ಲ. ಆದುದರಿಂದ ಹರಿಜನರ ಬಗ್ಗೆ ತೋರುವ ಅಸ್ಪೃಶ್ಯತಾ ಭಾವನೆಯು ಹಿಂದೂ ಸಮಾಜಕ್ಕೆ ಗೌರವವನ್ನು ತರತಕ್ಕದ್ದಲ್ಲವೆಂದು ಸರ್ವ ಪಳ್ಳಿಯವರು ಹಿಂದೂ ಗ್ರಂಥಗಳೆಲ್ಲದರ ಆಧಾರದಿಂದ ಸ್ಪಷ್ಟಪಡಿಸಿದರು.

"ಹಿಂದೂ ಸಮಾಜದಲ್ಲಿ ಸ್ತ್ರೀ" ಎಂಬುದು ನಾಲ್ಕನೆಯ ಉಪನ್ಯಾಸ. ಇದರಲ್ಲಿ ಪುರಾತನ ಭಾರತ ಸ್ತ್ರೀಯ ವಿಷಯವನ್ನು ತಿಳಿಸುತ್ತಾರೆ. ಪುರುಷ ರಂತೆಯೇ ಸ್ತ್ರೀಗೂ ಹಕ್ಕುಭಾಧ್ಯತೆಗಳಿತ್ತು. ಸಹ ವಿದ್ಯಾಭ್ಯಾಸವಿತ್ತು. ಎಂಬುದನ್ನು ವಿವರಿಸುವರು. ಮಾನವ ಜೀವನದಲ್ಲಿ ಪ್ರೇಮವನ್ನು ವಿವರಿ ಸುತ್ತಾ ಪ್ರಪಂಚದ ಮಹತ್ಕಾರ್ಯಗಳು ಹೆಂಗಸಿನ ಪ್ರೀತಿಗಾಗಿ ನಡೆದಿವೆ. ಎಂಬುದನ್ನು ನೆಪೋಲಿಯನ್, ರಾಮಾಯಣ, ಮಹಾಭಾರತ ಮತ್ತು ಕಾಳಿದಾಸನ ಕಾವ್ಯಗಳಿಂದ ಉದಾಹರಿಸುವರು. ಮುಂದುವರಿದು ವಿವಾಹ ಪದ್ಧತಿಗಳನ್ನು ತಿಳಿಸುವರು. ಶಿಶುವಿವಾಹ ಮತ್ತು ಬಾಲ್ಯವಿವಾಹಗಳಿಂದ ಆಗುವ ಕೆಟ್ಟ ಪರಿಣಾಮಗಳನ್ನು ಚರ್ಚಿಸುವರು. ಅನಂತರ ವಿಧವೆಯರ ಸ್ಥಾನಮಾನಗಳನ್ನು ಚರ್ಚಿಸಿ ವಿಧವಾ ವಿವಾಹಕ್ಕೆ ತೈತ್ತರಿಯ ಉಪನಿ ಷತ್ತು, ಬ್ರಾಹ್ಮಣಗಳು ಮತ್ತು ಪುರಾಣಗಳ ಆಧಾರವನ್ನು ತಿಳಿಸಿ, ವಶಿಷ್ಟ ಮುಂತಾದವರ ಅಭಿಪ್ರಾಯಗಳನ್ನು ಹೇಳುತ್ತಾರೆ.

ಐದನೆಯ ಉಪನ್ಯಾಸವು ಯುದ್ಧ ಮತ್ತು ಅಹಿಂಸೆಯನ್ನು ಕುರಿ ತದು—ಅನೇಕ ಶತಮಾನಗಳ ಹಿಂದೆ ಯುದ್ಧವು ಸ್ವಾಭಾವಿಕವಾಗಿ ಪರಾ ಕ್ರಮದ ಪ್ರದರ್ಶನವಾಗಿತ್ತು. ಹೊಗಳಿಕೆಯ ಮಾತಾಗಿತ್ತು. ಒಂದು ರಾಷ್ಟ್ರದ ಶಕ್ತಿಯನ್ನು ತಿಳಿಯಲು ಮತ್ತು ದೇಶದಲ್ಲಿ ಶಾಂತಿಯನ್ನು ಸ್ಥಾಪಿ ಸಲು ಯುದ್ಧವು ಅನಿವಾರ್ಯವಾಗುತಿತ್ತು. ಆದರೆ ಇಂದು ಹಾಗಲ್ಲ. ಕಾಲ

ದೊಡನೆ ಮನುಷ್ಯನ ಜ್ಞಾನವೂ ಬೆಳೆದಿವೆ. ವಿಜ್ಞಾನದ ಕುಯುಕ್ತಿಯಿಂದ ಪಂಗಡಗಳೆರಡು ಯುದ್ಧಸನ್ನದ್ಧವಾಗುತ್ತವೆ. ಕೊನೆಗೆ ಉಭಯ ರಾಷ್ಟ್ರಗಳ ಸಂಸ್ಕೃತಿ ಮತ್ತು ನಾಗರೀಕತೆಗಳು ನಾಶವಾಗುವುದಲ್ಲದೆ ವಿಶ್ವಕ್ಕೂ ಬಹಳ ಹಾನಿಕರವಾಗುತ್ತದೆ. ಆದುದರಿಂದ ಯುದ್ಧವು ಸರ್ವನಾಶಕಾರಿಯಾದುದು.

ಹಿಂದೂ ಧರ್ಮದಲ್ಲಿ ಹಿಂಸೆಗೆ ಸ್ಥಾನವಿಲ್ಲ. ಪ್ರಾಣಿಗಳನ್ನೂ ಕೂಡ ಹಿಂಸಿಸ ಕೂಡದೆಂಬೇ ಭಾವನೆ. ಆಶ್ರಮಗಳಲ್ಲಿ ಮಾನವರಿಗೂ, ಮೃಗಗಳಿಗೂ ಇದ್ದ ಮೈತ್ರಿಯನ್ನು ನಾವು ಪುರಾಣಗಳಲ್ಲಿ ಕಾಣುತ್ತೇವೆ. ಅಂದರೆ ನಮ್ಮ ಹಿರಿಯರು ಯುದ್ಧವನ್ನೇ ಮಾಡುತ್ತಿರಲಿಲ್ಲವೆಂದಲ್ಲ. ಸತ್ಯವನ್ನು ಪರಿಪಾಲಿಸುವುದಕ್ಕಾಗಿ ಯುದ್ಧವನ್ನು ಮಾಡುತ್ತಿದ್ದರು. ಯುದ್ಧಕ್ಕೆ ಹೋಗುವಾಗ ಮೊದಲು ಎದುರಾಳಿಗಳಿಗೆ ಎಚ್ಚರಿಕೆಯನ್ನು ನೀಡುತ್ತಿದ್ದರು ಆದಷ್ಟು ಯುದ್ಧವನ್ನು ನಿವಾರಣೆಮಾಡಲು, ಸಾಮ, ದಾನ, ಭೇದಗಳನ್ನು ಪ್ರಯೋಗಿಸಿ, ಫಲಿಸದಿದ್ದರೆ ದಂಡದ ರೂಪದಲ್ಲಿ ಯುದ್ಧಕ್ಕೆ ಹೊರಡುತ್ತಿದ್ದರು. ಭಗವಾನ್ ಶ್ರೀ ಕೃಷ್ಣನೂ ಕೂಡ, ಕೌರವರೊಡನೆ ಸಂಧಿಯನ್ನು ಮಾಡಲು ಪ್ರಯತ್ನಿಸಿ ವಿಫಲನಾಗಿ, ಅನಂತರ ಯುದ್ಧಕ್ಕೆ ಪ್ರೋತ್ಸಾಹಿಸುವನು. ಬುದ್ಧನೂ ಕೂಡ ಅದನ್ನೇ ಹೇಳುತ್ತಾನೆ. "ಯಾರು ಶಿಕ್ಷಾರ್ಹರೋ ಅವರನ್ನು ಶಿಕ್ಷಿಸಲೇಬೇಕು" ಎಂದು. ಅಂದರೆ ಸಮಾಜದ ಶಾಂತಿಪಾಲನೆಗಾಗಿ ಮಾಡುವ ಹಿಂಸೆಯು ಪಾಪವಲ್ಲ. ಆದರೆ, ಸ್ವಾರ್ಥಕ್ಕಾಗಿ ಪರರನ್ನು ಧ್ವಂಸಮಾಡುವುದೇ ಯುದ್ಧದ ಗುರಿಯಾಗಿರಬಾರದು. ಯುದ್ಧದ ನಿಯಮವನ್ನು ಲೋಕೋದ್ಧಾರಕ್ಕಾಗಿ ಉಪಯೋಗಿಸಿಕೊಳ್ಳಬೇಕು. ಎಲ್ಲಿ ಪ್ರೇಮವಿರುತ್ತದೋ, ಎಲ್ಲಿ ನ್ಯಾಯವಿರುತ್ತದೋ ಅಲ್ಲಿ ಬಲವಂತದ ಅವಶ್ಯಕತೆಯಿಲ್ಲ. ಹಾಗಲ್ಲದೆ ಧರ್ಮಕ್ಕೆ ಧಕ್ಕೆ ಬಂದಾಗ ಯುದ್ಧವು ಅನಿವಾರ್ಯವಾದುದೆಂದು ಹಿಂದೂಧರ್ಮವು ಹೇಳುತ್ತದೆ.

ಕ್ರಿಶ್ಚಿಯನ್ ಧರ್ಮವೂ ಕೂಡ ಅಹಿಂಸೆಯನ್ನೇ ಪ್ರತಿಪಾದಿಸಿದರೂ ಸಂದರ್ಭಾನುಸಾರ ಹಿಂಸೆಯನ್ನು ಮಾಡು ಎನ್ನುತ್ತದೆ. ಆದರೆ ಸಂಪತ್ತಿಗಾಗಿಯಲ್ಲ. ಸ್ತ್ರೀಗಾಗಿಯಲ್ಲ. ಧರ್ಮಕ್ಕಾಗಿ, ದೇವರ ರಾಜ್ಯವನ್ನು ಸ್ಥಾಪಿಸುವುದಕ್ಕಾಗಿ, ಯುದ್ಧವನ್ನು ಮಾಡೆಂದು ಕ್ರೈಸ್ತಮತವು ಹೇಳುತ್ತದೆ.

ಕೆಲವರು ಸರ್ವಾಧಿಕಾರಕ್ಕಾಗಿ ಯುದ್ಧವನ್ನು ಮಾಡುತ್ತಾರೆ. ಆದರೆ ಯುದ್ಧಕ್ಕೆ ಹೋದವರೆಲ್ಲರೂ ಕೆಟ್ಟವರಲ್ಲ. ಆದುದರಿಂದ, ಅವರೊಡನೆ ನಾವು ಕೋಪವನ್ನು ತೋರುವುದರ ಬದಲು ಅವರ ದುರ್ಗುಣಕ್ಕೆ ಕಾರಣ ವೇನೆಂದು ಹುಡುಕುವುದೊಳ್ಳೆಯದು. ಆದರೆ, ಬಲವಿಲ್ಲದೆ ನ್ಯಾಯುವನ್ನು ಹೇಳುವುದು ನಿರರ್ಥಕವಾಗುತ್ತದೆ. ಸಾಕಷ್ಟು ಬಲವನ್ನು ಹೊಂದಿ, ಸ್ವಾತಂತ್ರ್ಯ ಮತ್ತು ಪ್ರಜಾಪ್ರಭುತ್ವಕ್ಕೆ ಮನಗೊಟ್ಟರೆ ಯುದ್ಧವನ್ನು ನಿವಾರಣೆ ಮಾಡಬಹುದು.

ಈ ಆಧುನಿಕ ಕಾಲದಲ್ಲಿ ಯುದ್ಧದ ವಿರುದ್ಧ ವಾದದಲ್ಲಿ ಗಾಂಧೀಜಿಯು ವರ ಧ್ಯೇಯವು ಬಹಳ ಪರಿಣಾಮಕಾರಿಯಾದುದು. ಅವರದು ಹೊಸ ಪ್ರಪಂಚದ ಧ್ವನಿ! ಪರಿಪೂರ್ಣ ಜೀವನದ ವಿಶಾಲ ಭಾವನೆಯ ಧ್ವನಿ! ರಕ್ತ ಪಾತವಿಲ್ಲದ, ದಾರಿದ್ರ್ಯವಿಲ್ಲದ, ನಿರುದ್ಯೋಗವಿಲ್ಲದ, ಪ್ರಪಂಚದ ಸಮಾಜ ವನ್ನು ಧರ್ಮದ ಆಧಾರದಿಂದ ಕಟ್ಟಬಹುದೆಂದು ತಮ್ಮ ದೃಢ ನಿರ್ಧಾರವನ್ನು ತಿಳಿಸುವರು ಇದಕ್ಕೆ ವಿಶ್ವಧರ್ಮವು ಅಗತ್ಯ. ಅದಕ್ಕೆ ನಾಳಿನ ಪ್ರಪಂಚವು ಅಹಿಂಸಾ ಸಮಾಜದಿಂದ ನಿರ್ಮಾಣವಾಗಬೇಕು. ಅಹಿಂಸಾ ತತ್ವವು ನಿಜ ವಾಗಿಯೂ ಸಮಾಜದ ನಿಶ್ಶಕ್ತಿಯಲ್ಲ. ಅದೊಂದು ಪ್ರಬಲವಾದ ಶಕ್ತಿಯು.

ಗಾಂಧೀಜಿಯವರ ಅಹಿಂಸಾ ತತ್ವವು ಬಹಳ ಪರಿಣಾಮಕಾರಿ ಯಾದುದು. ಅದರ ಆಯುಧಗಳು ನಿಸ್ಸಾರವಾದುವುಗಳಲ್ಲ. ರಕ್ತವು ಹರಿಯುವುದಾದರೆ ನಮ್ಮ ರಕ್ತವೇ ಚೆಲ್ಲಲಿ. ಮತ್ತೊಬ್ಬರನ್ನು ಕೊಲೆ ಮಾಡದೆ, ಮೌನವಾದ ಧೈರ್ಯವನ್ನು ಪ್ರದರ್ಶಿಸೋಣ. ಮನುಷ್ಯನು ಸಾಯಲು ಸಿದ್ಧನಾದರೆ ಮಾತ್ರ ಅವನಿಗೆ ಸ್ವಾತಂತ್ರ್ಯವು ದೊರಕುತ್ತದೆ. ಅದು ಅನಿವಾರ್ಯವಾದರೆ, ತನ್ನ ಸೋದರರ ಕೈಯಿಂದ ಕೊಲ್ಲಲ್ಪಡಲಿ; ಪ್ರೇಮ ಯಾವಾಗಲೂ ಪರರನ್ನು ಸುಡುವುದಿಲ್ಲ. ತನ್ನನ್ನು ತಾನೇ ಸುಟ್ಟು ಕೊಳ್ಳುತ್ತದೆ. ಸಾಯುವ ತನಕ ಸಂತೋಷದಿಂದಲೇ ಕಷ್ಟವನ್ನು ಪಡೋಣ ಎಂಬುದು ಗಾಂಧೀಜಿಯವರ ವಾದ.

ಗಾಂಧೀಜಿಯವರು ತಮ್ಮ ಈ ತತ್ವವನ್ನು ಭಾರತದ ಸ್ವಾತಂತ್ರ್ಯ ಕ್ಕಾಗಿ ಪ್ರಯೋಗಿಸಿದರು. ಭಾರತೀಯರು ಸ್ವತಂತ್ರರಾಗಿ ಬಾಳಲಾಗ ದಿದ್ದರೆ, ಹೆಂಗಸರು ಮತ್ತು ಗಂಡಸರಾದಿಯಾಗಿ ಸಾಯಲು ಸಿದ್ಧವಾಗಿ ದ್ದೇವೆಂದು ಬದ್ಧಕಂಕಣವನ್ನು ತೊಟ್ಟರು.

ಆದನ್ನೆಲ್ಲಾ ರಾಜಕೀಯದಿಂದ ದೂರವಿದ್ದು ನೋಡುತ್ತಿದ್ದ ಸರ್ವ ಪಳ್ಳಿಯವರ ರಕ್ತವು ಕುದಿಯದಿರಲಿಲ್ಲ. ಮಹಾತ್ಮರ ತತ್ವದ ಪವಿತ್ರತೆ ಹಾಗೂ ಅಹಿಂಸೆಯ ದಿವ್ಯಾಸ್ತ್ರಕ್ಕಿಂತ ಪ್ರಬಲವಾದ ಮತ್ತೊಂದು ಅಸ್ತ್ರವು ಜಗತ್ತಿನಲ್ಲಿಲ್ಲವೆಂದು ಅರಿತ ಸರ್ವಪಳ್ಳಿಯವರು, ಗಾಂಧೀಜಿಯವರ ನುಡಿಯನ್ನೆ ಪ್ರತಿಧ್ವನಿಸುವಂತೆ ಈ ರೀತಿ ಹೇಳುವರು. ಅಹಿಂಸಾ ರೀತಿಯಿಂದ ನಾವು ಎದುರಾಳಿಗಳನ್ನು ಎದುರಿಸಲು ಸಿದ್ಧರಿಲ್ಲದಿದ್ದರೆ, ಎದುರಾಳಿಗಳ ತಪ್ಪನ್ನು ಹಿಂಸೆಯಿಂದಲೇ ಎದುರಿಸುವುದು ಲೇಸೆಂದು ನನ್ನ ಭಾವನೆ. ಎಲ್ಲಿ ಹೇಡಿತನ ಮತ್ತು ಹಿಂಸಾವಾದವಿರುತ್ತದೋ ಅಲ್ಲಿ ನಾನು ಸೂಚಿಸುವುದು ಹಿಂಸೆಯನ್ನೇ ಎಂದು, ದುರ್ಬಲ ಜನಾಂಗವಿರುವುದಕ್ಕಿಂತ ಕೊಲೆಯಾಗುವುದೇ ಲೇಸೆಂದು ನನ್ನ ಭಾವನೆ. ನಿಜವಾಗಿ ಹೇಳುವುದಾದರೆ, ಭಾರತಿಯು ತನ್ನ ರಕ್ಷಣೆಗಾಗಿ ಪರರ ಆಶ್ರಯಕ್ಕೆ ಕೈ ನೀಡುತ್ತಾ ಹೇಡಿತನವನ್ನು ತೋರುವುದು ಅವಳ ಆತ್ಮಗೌರವಕ್ಕೆ ಕುಂದು. ದರೋಡೆಕೋರರಲ್ಲಿ, ಕಳ್ಳರಲ್ಲಿ ಅಥವಾ ದೇಶವನ್ನು ಕಬಳಿಸಲು ಪ್ರಯತ್ನಪಡುವವರಲ್ಲಿ ಅಹಿಂಸಾ ತತ್ವವನ್ನು ತೋರುವುದನ್ನು ನಾನು ಒಪ್ಪುವುದಿಲ್ಲ. ಹಾಗೆ ಮಾಡುವುದು ಶಕ್ತಿಯ ಚಿಹ್ನೆಯಲ್ಲ. ದೌರ್ಬಲ್ಯದ ಕುರುಹು. ಅಹಿಂಸಾ ತತ್ವವು ಪರಮ ಶ್ರೇಷ್ಠವಾದುದೇನೋ ನಿಜ! ಆದರೆ ಅದನ್ನು ತನ್ನನ್ನು ತಾನೇ ನಿರ್ಮೂಲನಮಾಡಿಕೊಳ್ಳಲು ಉಪಯೋಗಿಸಕೊಳ್ಳಬಾರದು. ದೇಶಕ್ಕೆ ಗಂಡಾಂತರವು ಬಂದಾಗ, ರಕ್ಷಿಸಿಕೊಳ್ಳುವ ಶಕ್ತಿಯನ್ನು ಹೊಂದಿರಬೇಕು. ಅಹಿಂಸೆಯ ಭಾವನೆಯು ಅಪಾಯ ಬಂದಾಗ ಓಡಿಹೋಗಬೇಕೆಂದಲ್ಲ. ಹಿತೈಷಿಗಳಿಗೆ, ದೇಶಕ್ಕೆ ಅಪಾಯ ಒದಗಿದಾಗ ಧೈರ್ಯವಾಗಿ ಮುನ್ನುಗ್ಗಿ ಕಾಪಾಡಬೇಕು.

ಆದುದರಿಂದಲೇ ಅಹಿಂಸಾ ತತ್ವವನ್ನು ಸಾಯಲು ಹೆದರುವವರಿಗೆ ಶತ್ರುಗಳನ್ನು ಎದುರಿಸಲಾರದ ಹೇಡಿಗಳಿಗೆ ಬೋಧಿಸಬಾರದು. ಅಂದರೆ ಧೈರ್ಯಶಾಲಿಗಳಿಗೂ, ಬಲವಂತರಿಗೂ ಅಹಿಂಸಾ ತತ್ವವು ಸೇರತಕ್ಕದ್ದು. ಎಂದು ಹೇಳಿ ಇವೆಲ್ಲವೂ ಹಿಂದೂಧರ್ಮದ ಪ್ರತಿಧ್ವನಿ ಎಂದು ತಿಳಿಸುತ್ತಾರೆ.

ಈ ಉಪನ್ಯಾಸಗಳು "Religion and Society (ಧರ್ಮ ಮತ್ತು ಸಮಾಜ") ಎಂಬ ಹೆಸರಿನಲ್ಲಿ 1947ರಲ್ಲಿ ಗ್ರಂಥರೂಪಕ್ಕೆ ಬಂದಿತು,

# ಭಾರತದ ರಾಜ್ಯಾಂಗ ರಚನೆಯ ಸದಸ್ಯರಾಗಿ

ಡಾ|| ರಾಧಾಕೃಷ್ಣನ್‌ರವರು ರಾಜಕೀಯ ಚಳುವಳಿಯಿಂದ ದೂರ ವಿದ್ದರೂ ನಿರ್ಲಿಪ್ತರಾಗಿರಲಿಲ್ಲ. ಅಂದಿನ ದೇಶದ ಸ್ಥಿತಿಯೇ ಹಾಗಿತು. ಇದ ರಲ್ಲಿ ವಿದ್ಯಾವಂತರು, ಅವಿದ್ಯಾವಂತರು ಎಂಬ ಭಿನ್ನತೆಯೇ ಇರಲಿಲ್ಲ. ಯಾವ ಭಾರತೀಯನೂ ಹಾಗಿರಲು ಸಾಧ್ಯವಿರಲಿಲ್ಲ. ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿದ್ದ ಇವರು ಆಗಾಗ ಅಲ್ಲಲ್ಲಿ ನಡೆಯುತ್ತಿದ್ದ ಕಾಂಗ್ರೆಸ್ ಸಭೆಗಳಿಗೆ ಹೋಗುತ್ತಿದ್ದರು. ಕಾಂಗ್ರೆಸ್ ಮುಖಂಡರ ಉಪನ್ಯಾಸಗಳನ್ನು ಆಗಾಗ ಕೇಳುತ್ತಿದ್ದರು. ಅವರೊಡನೆ ತಮ್ಮ ಸಹಾನುಭೂತಿಯನ್ನು ತೋರಿ ಗೌರವವನ್ನರ್ಪಿಸುತ್ತಿದ್ದರು. ಇವರು ವಿದ್ಯಾರ್ಥಿಯಾಗಿದ್ದಾಗ, ಕೇಳಿ ಬರು ತ್ತಿದ್ದ ಬಾಲಗಂಗಾಧರ ತಿಲಕ್‌ರವರ ಸ್ವಾತಂತ್ರ್ಯ ಘೋಷಣೆಯು ಯಾವ ವಿದ್ಯಾರ್ಥಿಯನ್ನು ತಾನೆ, ಸ್ವಾತಂತ್ರ್ಯ ಸಮರದತ್ತ ಸೆಳೆಯುತ್ತಿರಲಿಲ್ಲ ! ಹಾಗೆಯೇ ಸರ್ವಪಳ್ಳಿಯವರೂ ಕೂಡ ಅದರ ಪ್ರಭಾವಕ್ಕೊಳಗಾಗದಿರಲಿಲ್ಲ. ಆದರೆ ಇವರ ಕಾರ್ಯರಂಗವೇ ಬೇರೆಯಾಯಿತು ಇಂದಿನ ವಿದ್ಯಾರ್ಥಿ ಗಳಿಗೆ ಸರಿಯಾದ ಶಿಕ್ಷಣವನ್ನು ಕೊಟ್ಟು, ಭಾವೀ ಸ್ವತಂತ್ರ ಭಾರತದ ಸತ್ಪ್ರಜೆಗಳನ್ನಾಗಿ, ಮಾಡುವುದರಲ್ಲಿ ಶ್ರದ್ಧೆವಹಿಸಿದ್ದರು. ತಾನೊಬ್ಬ ರಾಜ ಕಾರಣಿಯಾಗುವುದಕ್ಕಿಂತ, ಸಾವಿರಾರು ರಾಜಕಾರಣಿಗಳನ್ನು ಸುಶಿಕ್ಷಿತ ರನ್ನಾಗಿ ಮಾಡುವುದು ಶ್ರೇಷ್ಠವೆಂದು ಬಯಸಿದ್ದರು.

1911ರಲ್ಲಿ ಇವರ ಬರೆದ ' ಭಗವದ್ಗೀತೆಯ ನೀತಿತತ್ವಗಳು ಮತ್ತು ಕ್ಯಾಂಟ್' ಎಂಬ ಪುಸ್ತಕವು ಎನ್. ಸಿ. ಕೇಲ್ಕರರ ಮೂಲಕ ತಿಲಕರ ಕೈಸೇ ರಿತ್ತು. ಆಗ ತಿಲಕರು ಸೆರೆಮನೆಯಲ್ಲಿದ್ದರು. ತಿಲಕರು ಈ ಗ್ರಂಥವನ್ನು ಓದಿ ಸರ್ವಪಳ್ಳಿಯವರ ಪ್ರತಿಭೆಯನ್ನು ತಿಳಿದರು. ಆ ಗ್ರಂಥಕ್ಕೊಂದು ಮುನ್ನುಡಿಯನ್ನು ಬರೆದು ಕಳುಹಿಸಿದ್ದರು. ಪಂಡಿತ ಮದನ ಮೋಹನ ಮಾಲವೀಯರಿಗಂತೂ ಸರ್ವಪಳ್ಳಿಯವರ ಅಪಾರ ಪಾಂಡಿತ್ಯದಲ್ಲಿ ಮೆಚ್ಚುಗೆ ಇತ್ತು. ಬೆನಾರಸ್ ವಿಶ್ವವಿದ್ಯಾನಿಲಯದಲ್ಲಿ ಪಂಡಿತ ಗೋವಿಂದ ವಲ್ಲಭ ಪಂತರ ಪರಿಚಯವಾಯಿತು.

ತೇಜಬಹದ್ದೂರ್ ಸಪ್ರೂರವರು ಸರ್ವಪಕ್ಷ ಸಮ್ಮೇಳನದ ಅಧ್ಯಕ್ಷ ರಾಗಿದ್ದಾಗ, ಸರ್ವಪಳ್ಳಿಯವರು ಅದರ ಸದಸ್ಯರಲ್ಲೊಬ್ಬರಾಗಿದ್ದರು. ಇದ ರಿಂದ ಅವರಿಬ್ಬರ ಹೆಚ್ಚಿನ ವಿಶ್ವಾಸವು ಬೆಳೆದು ಅಲಹಾಬಾದಿಗೆ ಹೋದಾಗ ಲೆಲ್ಲಾ ಸಪ್ರೂರವರ ಅಥಿತಿಯಾಗುಳಿಯುತ್ತಿದ್ದರು.

ಪ್ರೊ|| ಆರ್. ಡಿ. ರಾನಡೆಯವರನ್ನು 1925ರಲ್ಲಿ ನಡೆದ ವೇದಾಂತ ಸಮಿತಿ (Philosophical Congress) ಯಲ್ಲಿ ಭೇಟಿಯಾಗಿದ್ದರು. ಅಂದಿನಿಂದ ಅವರಿಬ್ಬರ ಮಿತ್ರತ್ವವು ಬೆಳೆದು ಕೊನೆಯತನಕ ಉಳಿಯಿತು.

ಅದರ ಮುಂದಿನ ವರ್ಷದಲ್ಲಿ ಮೋತಿಲಾಲ್ ನೆಹರೂರವರು ಕಾಂಗ್ರೆಸ್ಸಿನ ಸಮಿತಿಯ ವಾರ್ಷಿಕೋತ್ಸವವನ್ನುದ್ಘಾಟಿಸಲು ಕಲ್ಕತ್ತಾಕ್ಕೆ ಹೋಗಿದ್ದರು. ಆಗ ಸರ್ವಪಳ್ಳಿಯವರು ಅವರನ್ನು ಭೇಟಿಮಾಡಿದ್ದರು. ಅವರಿಬ್ಬರಲ್ಲಿ ರಾಜಕೀಯದ ಬಗ್ಗೆ ದಾರ್ಶನಿಕ ವಿಷಯದ ಬಗ್ಗೆ ಅನೇಕ ಮಾತುಕತೆಗಳು ನಡೆದಿದ್ದುವು. ಮತ್ತೊಮ್ಮೆ ಮೋತಿಲಾಲರು ಸ್ವರಾಜ್ಯ ಪಂಗಡದ ನಾಯಕರಾಗಿದ್ದಾಗ, ಸರ್ವಪಳ್ಳಿಯವರು ಎದುರು ಪಕ್ಷದ ನಾಯಕರಾಗಿ, ಅವರನ್ನು ಭೇಟಿಮಾಡಿದ್ದರು. ಹೀಗೆ ಆಗಾಗ ಮೋತಿ ಲಾಲರನ್ನು ಭೇಟಿಮಾಡುತ್ತಿದ್ದರು. ಮೋತಿಲಾಲರು ಹಾಸಿಗೆ ಹಿಡಿ ದಿದ್ದಾಗ ಕಲ್ಕತ್ತೆಯಲ್ಲಿ ಸರ್ವಪಳ್ಳಿಯವರು ಹೋಗಿ ನೋಡಿ, ಅವರೊಡನೆ ಆತ್ಮೀಯವಾಗಿ ವರ್ತಿಸಿದ್ದರು. ಅವರ ಅನಾರೋಗ್ಯಕ್ಕಾಗಿ ತುಂಬಾ ಮರುಗಿದ್ದರು. ಹೀಗೆ ಪದೇ ಪದೇ ಮೋತಿಲಾಲರನ್ನು ಭೇಟಿಮಾಡುತ್ತಿ ದ್ದುದರಿಂದ ಜವಾಹಿರ್‌ಲಾಲ್ ನೆಹರೂರವರ ಪರಿಚಯವು ಹೆಚ್ಚಾ ಗುತ್ತಾ ಸರ್ವಪಳ್ಳಿಯವರ ಬಗ್ಗೆ ನೆಹರೂರವರಿಗೆ ಹೆಚ್ಚಿನ ಅಭಿಮಾನ ವುಂಟಾಯಿತು.

ಸರ್ವಪಳ್ಳಿಯವರ ಪ್ರತಿಭೆಯಿಂದ ಮಾರುಹೋಗಿದ್ದ ದೇಶದ ಬಹು ಮಂದಿ ನಾಯಕರುಗಳು ಇವರ ವಿಷಯವಾಗಿ ಬಹಳ ಗೌರವವನ್ನು ಹೊಂದಿದ್ದರು. ಗಾಂಧೀಜಿಯವರ ಪರಿಚಯವು ಮೊದಲಿನಿಂದಲೂ ಇದ್ದೆ ಇದ್ದಿತು. ರಾಜೇಂದ್ರಪ್ರಸಾದ್, ಮೌಲಾನಾ ಅಬ್ದುಲ್ ಕಲಮ್ ಆಜಾದ್, ಸರದಾರ್ ವಲ್ಲಭಾಯಿ ಪಟೇಲ್, ಮತ್ತು ಶ್ರೀಮತಿ ಸರೋಜಿನಿ ನಾಯ್ಡು ಮುಂತಾದ ರಾಜಕೀಯ ಮುಂದಾಳುಗಳೆಲ್ಲರ ಪರಿ

ಚಯವು ಸರ್ವಪಳ್ಳಿಯವರಿಗಿತ್ತು. ಇಷ್ಟಲ್ಲದೆ ದೇಶದ ನಾನಾ ಭಾಗಗಳ ಬಹಳ ಮಂದಿ ವಿದ್ವಾಂಸರಿಗೆ ನಾನಾ ವಿಧದಲ್ಲಿ ಸರ್ವಪಳ್ಳಿಯವರ ಪರಿಚಯ ವಾಗಿತ್ತು. ಪರದೇಶೀಯರಿಗಂತೂ ಇವರ ಮಾತು ವೇದವಾಕ್ಯದಂತಾಗಿತ್ತು ಇವರ ಸಾಹಿತ್ಯರಾಶಿಯಲ್ಲಿ ಕೇವಲ ವೇದಾಂತ ವಿಷಯಗಳನ್ನಲ್ಲದೆ, ರಾಜ ಕೀಯ ಹಾಗೂ ಐತಿಹಾಸಿಕ ವಿಷಯಗಳನ್ನು ಜನತೆಯು ಕಾಣುತ್ತಿತ್ತು. ಗಾಂಧೀಜಿಯವರಿಗಂತೂ ಇವರ ಬಗ್ಗೆ ಅಭಿಮಾನ. ಪ್ರಪಂಚದ ಜನತೆ ಯಲ್ಲಿ ಐಕ್ಯಮತ್ಯವನ್ನುಂಟುಮಾಡಲು ಸರ್ವಧರ್ಮಗಳ ಸಮ್ಮಿಳಿತವಾದ ವಿಶ್ವಧರ್ಮವೊಂದು ಆಗತ್ಯವೆಂದು ಅರಿತಿದ್ದ ಬಾಪೂಜಿಯವರು, ಅಂತಹ ಕಾರ್ಯವನ್ನು ಸಾಧಿಸಲು ರಾಧಾಕೃಷ್ಣರಂತಹ ಮೇಧಾವಿಗಳಿಂದಲೇ ಸಾಧ್ಯವೆಂದು ಅರಿತಿದ್ದರು. ಭಾರತವು ಸ್ವತಂತ್ರಗೊಳ್ಳುವ ಕಾಲವು ಬಹಳ ವಿರಲಿಲ್ಲ. ಅದಕ್ಕಾಗಿ ಭಾರತದ ರಾಜ್ಯಾಂಗವನ್ನು ಪೂರ್ವಭಾವಿಯಾಗಿ ಏರ್ಪಡಿಸಿಕೊಳ್ಳಬೇಕೆಂದು ತೀರ್ಮಾನಿಸಿತು.

ಆಗ ರಾಧಾಕೃಷ್ಣರು ಬೆನಾರಸ್ ವಿಶ್ವವಿದ್ಯಾನಿಲಯದಲ್ಲಿ ಉಪಕುಲ ಪತಿಗಳಾಗಿದ್ದರು. ರಾಜ್ಯಾಂಗ ನಿರ್ಮಾಣಕ್ಕಾಗಿ ದೇಶದಲ್ಲಿನ ಮೇಧಾವಿ ಗಳನ್ನು ಆರಿಸಿದರು. ಆದರಲ್ಲಿ ಸರ್ವಪಳ್ಳಿಯವರೂ ಒಬ್ಬರು. ಇದರಿಂದ ರಾಧಾಕೃಷ್ಣರ ಜೀವನದ ಗತಿಯೇ ಬದಲಾವಣೆಯಾಯಿತು. ಉತ್ತಮ ಉಪಾಧ್ಯಾಯರಾಗಿ, ಲೋಕಪ್ರಖ್ಯಾತ ದಾರ್ಶನಿಕರಾಗಿ ಹೆಸರಾಂತ ಸಾಹಿತಿಯಾಗಿ, ಉತ್ತಮ ಉಪನ್ಯಾಸಕಾರರಾಗಿ ಓಡುತ್ತಿದ್ದ ಇವರ ಜೀವನ ಪಥವು 1946ರಲ್ಲಿ ರಾಜಕಾರ್ಯದತ್ತ ತಿರುಗಿತು.

ರಾಜ್ಯಾಂಗ ನಿರ್ಮಾಣ ಸಮಿತಿಯಲ್ಲಿ, ದಿವಂಗತ ಡಾ|| ರಾಜೇಂದ್ರ ಪ್ರಸಾದರು ಅಧ್ಯಕ್ಷರಾಗಿದ್ದರು. ದಿವಂಗತ ಟಿ. ವಿ ಕೃಷ್ಣಮಾಚಾರಿ ಯವರು ಉಪಾಧ್ಯಕ್ಷರಾಗಿದ್ದರು. ಸಮಿತಿಯಲ್ಲಿ ಡಾ|| ಅಂಬೇಡ್ಕರ್ ಸರ್ ಎನ್. ಗೋಪಾಲಸ್ವಾಮಿ ಅಯ್ಯಂಗಾರ್, ತೇಜ ಬಹದ್ದೂರ್ ಸಪ್ರೂ ಮುಂತಾದವರು ಸದಸ್ಯರಾಗಿದ್ದರು.

ದೇಶದ ಆರ್ಥಿಕಸ್ಥಿತಿ, ಸಾಮಾಜಿಕ ಸ್ವಾತಂತ್ರ್ಯ, ವಾಕ್ ಸ್ವಾತಂತ್ರ್ಯ ಮತ್ತು ಜನತೆಯ ಹಕ್ಕುಭಾಧ್ಯತೆ, ಹಾಗೂ ಹೊಸ ಸರ್ಕಾರವನ್ನು ನಡೆ ಸಲ್ಲು ಸರಿಯಾದ ನಿಯಮಗಳನ್ನು ರಚಿಸುವುದೇ ಈ ಸಮಿತಿಯ ಉದ್ದೇಶ

ವಾಗಿತ್ತು. ಈ ಸಮಿತಿಯಲ್ಲಿ ಗೋಪಾಲಸ್ವಾಮಿ ಅಯ್ಯಂಗಾರ್ ಮತ್ತು ಡಾ|| ರಾಧಾಕೃಷ್ಣನ್‌ರವರ ವಿಚಾರಪೂರ್ಣ ಉಪನ್ಯಾಸಗಳು ಮತ್ತು ಸಲಹೆಗಳು ಬಹಳ ಪರಿಣಾಮಕಾರಿಯಾದುವುಗಳು.

---

# ಶಿಕ್ಷಣ ತಜ್ಞ

ಡಾ|| ರಾಧಾಕೃಷ್ಣನ್‌ರವರು ಜೀವನದ ಮೊದಲನೆಯ ಹೆಜ್ಜೆಯಾಗಿ,
ಶಿಕ್ಷಣರಂಗವನ್ನು ಪ್ರವೇಶಿಸಿದರು. ಸುಮಾರು ನಲವತ್ತು ವರ್ಷಗಳಕಾಲ
ಶಿಕ್ಷಣರಂಗದಲ್ಲಿ ದುಡಿದಿದ್ದಾರೆ. ತತ್ವಜ್ಞಾನದ ಜೊತೆಗೆ ರಾಜಕೀಯ ಮತ್ತು
ಜನಜೀವನದ ಸಾಕಷ್ಟು ಪರಿಚಯವನ್ನು ಪಡೆದಿದ್ದಾರೆ. ವೇದಾಂತದ ಉಪ
ದೇಶಕರಾಗಿ, ಪ್ರಪಂಚವನ್ನೆಲ್ಲಾ ಸುತ್ತಿ ಅಲ್ಲಿನ ವಿದ್ಯಾಭ್ಯಾಸ ಕ್ರಮಗಳನ್ನು
ಅರಿತಿದ್ದಾರೆ. ಇಂದಿನ ಮಕ್ಕಳು ಮುಂದಿನ ಭಾರತೀಯ ಸತ್ಪ್ರಜೆಗಳಾಗಲು,
ಅವರಿಗೆ ಎಂತಹ ಶಿಕ್ಷಣವನ್ನು ಕೊಡಬೇಕು ಎಂಬ ಜ್ಞಾನವು ಇವರಿಗೆ
ಸಂಪೂರ್ಣವಾಗಿದೆ. ಅವರು ಪ್ರಾಧ್ಯಾಪಕರಾಗಿ ಆಚರಿಸಿದ ರೀತಿ ಮತ್ತು
ಅವರು ಅಲ್ಲಲ್ಲಿ ಕೊಟ್ಟಿರುವ ಉಪನ್ಯಾಸಗಳಿಂದ ಇವರೆಂತಹ ಉತ್ತಮ
ಶಿಕ್ಷಣತಜ್ಞರೆಂಬುದನ್ನು ನಾವು ತಿಳಿಯಬಹುದು.

ಒಮ್ಮೆ ಅವರು ಇಂಡಿಯಾ ದೇಶದ ಅಧ್ಯಾಪಕರ ಸಮ್ಮೇಳನವನ್ನು
ಲಕ್ನೋನಗರದಲ್ಲಿ ಉದ್ಘಾಟಿಸಿದರು. ಆಗಅವರು ಬನಾರಸ್ಸಿನ ಹಿಂದೂ
ವಿಶ್ವವಿದ್ಯಾನಿಲಯದ ವೈಸ್-ಛಾನ್ಸಲರಾಗಿದ್ದರು. ಶಿಕ್ಷಣ ರಂಗದಲ್ಲಿ
ಅವರು ಅತ್ಯಂತ ಉನ್ನತ ಸ್ಥಾನವನ್ನು ಹೊಂದಿದ್ದರೂ ಕೂಡ ತಾನೊಬ್ಬ
ಉಪಾಧ್ಯಾಯನೆಂಬ ಹೆಮ್ಮೆಯನ್ನು ಮಾತ್ರ ಬಿಟ್ಟಿರಲಿಲ್ಲ. ಅಲ್ಲಿ ಇವರ
ಉಪನ್ಯಾಸವನ್ನು ಕೇಳಿದ ಉಪಾಧ್ಯಾಯರು "ಭಾರತದ ವಿದ್ಯಾಭ್ಯಾಸದ
ವಿಷಯವಾಗಿ ಯಾರು ಮಾತನಾಡಿದರೂ, ಅದೊಂದು ಸಣ್ಣ ವಿಷಯ
ವೆಂದರಿತು ಮಾತನಾಡುವರು. ಕೆಲವರು ಜ್ಞಾನವನ್ನು ನೀಡುವುದೇ
ಶಿಕ್ಷಣದ ಗುರಿ ಎನ್ನುತ್ತಾರೆ. ಹಾಗೆ ಹೇಳುವವರ ಭಾವನೆಯು ವಿದ್ಯಾರ್ಥಿ
ಗಳು ಹೆಚ್ಚಾಗಿ ಗ್ರಂಥಗಳನ್ನು ಓದಬೇಕೆಂದು. ಮತ್ತೆ ಕೆಲವರು ವಿದ್ಯಾ
ಭ್ಯಾಸದಿಂದ ಜ್ಞಾನವು ದೊರೆತರೆ ಸಾಲದು ಹಣವನ್ನು ಗಳಿಸುವ ಮಾರ್ಗ
ಬೇಕೆನ್ನುತ್ತಾರೆ. ಅಂತಹವರ ಗುರಿಯು ಹೊಟ್ಟೆಯ ಪಾಡು ಮಾತ್ರ.
ಇನ್ನು ಕೆಲವರು ವಿದ್ಯಾಭ್ಯಾಸವು ಮಕ್ಕಳನ್ನು ಉತ್ತಮ ಪೌರರನ್ನಾಗಿ
ಮಾಡಿ ದೇಶಭಕ್ತರಾಗುವಂತೆ ತಿದ್ದಬೇಕೆನ್ನುವರು. ಆದರೆ ರಾಧಾಕೃಷ್ಣರ

ಭಾವನೆಯು ಹಾಗಲ್ಲ. ಇವು ಮೂರು ಏಕ ಕಾಲದಲ್ಲಾಗಬೇಕು. ವಿದ್ಯಾಭ್ಯಾಸವು ಜ್ಞಾನವನ್ನು ನೀಡುವುದರ ಜೊತೆಗೆ ಸೇವಾ ಮನೋಭಾವನೆಯನ್ನು ಪ್ರಚೋದಿಸಬೇಕು. ಮತ್ತೊಬ್ಬರ ಸ್ವಾತಂತ್ರ್ಯವನ್ನು ಅಪಹರಿಸಿ ತಮ್ಮ ಸ್ವಾತಂತ್ರ್ಯವನ್ನು ಕಾಪಾಡಿಕೊಳ್ಳುವ ಮನೋವೃತ್ತಿಗೆ ಅವಕಾಶವನ್ನು ಕೊಡಬಾರದು. ವಿದ್ಯಾವಂತರಾದವರು ನಮ್ಮ ದೇಶದಲ್ಲಿಯೇ ಬಾಳಬೇಕು. ಆದರೆ ಇತರ ದೇಶಗಳಿಗೆ ಕೇಡಾಗಲೆಂದು ಬಯಸುವಂತಿರಬಾರದು. ಇಂತಹ ವಿಶಾಲ ಭಾವನೆಯ ಗುರಿಯುಳ್ಳ ವಿದ್ಯಾಭ್ಯಾಸವು ನಿಜವಾದ ವಿದ್ಯಾಭ್ಯಾಸ" ಎಂದು ಹೇಳಿದ್ದ ಸರ್ವಪಳ್ಳಿಯವರ ಮಾತನ್ನು ಶ್ಲಾಘಿಸಿದರು.

ಅದೇ ಸಭೆಗೆ ಬಂದಿದ್ದ ಮತ್ತೊಬ್ಬ ಉಪಾಧ್ಯಾಯರು "ಉಪಾಧ್ಯಾಯರ ಅದೃಷ್ಟವು ಯಾವಾಗಲೂ ಒಳ್ಳೆಯದಲ್ಲ. ಜನತೆಯು ಉಪಾಧ್ಯಾಯ ಸ್ಥಾನವು ಮಹತ್ತರವಾದುದಲ್ಲವೆಂದು ತಿಳಿದಿರಬಹುದು. ಅಥವಾ ಇತರರಂತೆ ಉಪಾಧ್ಯಾಯರಾದವರು ಹೆಚ್ಚು ಹಣವನ್ನು ಗಳಿಸದೆಯೇ ಇರಬಹುದು. ಇದರಿಂದ ಕೆಲವು ವೇಳೆ ವ್ಯಥೆಯಾಗಬಹುದು. ಆದರೆ, ರಾಧಾಕೃಷ್ಣನ್ನರಂತಹವರ ಸಾಲಿನಲ್ಲಿ ನಾನೂ ಕೂಡ ಇದ್ದೇನೆಂದು ನೆನಸಿಕೊಂಡಾಗ ಸಂತೋಷವಾಗುತ್ತದೆ. ನಾವು ಶ್ರೀಮಂತರಲ್ಲದಿದ್ದರೂ, ನಮ್ಮ ಕಾರ್ಯವು ಮಹತ್ತರವಾದುದು. ಸರ್ವಪಳ್ಳಿಯವರಂತಹ ಉಪಾಧ್ಯಾಯರು ರಾಷ್ಟ್ರವನ್ನು ಕಟ್ಟುತ್ತಿದ್ದಾರೆ. ಇದೇ ನನಗೊಂದು ಹೆಮ್ಮೆ" ಎಂದು ಬರೆಯುತ್ತಾರೆ.

ಇವೆರಡೇ ಉದಾಹರಣೆಗಳಿಂದ ರಾಧಾಕೃಷ್ಣನ್ನರ ಶಿಕ್ಷಣತಜ್ಞತೆಯನ್ನು ಊಹಿಸಿಕೊಳ್ಳಬಹುದು. ಆದರೂ ಅವರ ಉಪನ್ಯಾಸಗಳಲ್ಲಿನ ಕೆಲವು ಮಾತುಗಳನ್ನು ಹೇಳುವುದು ಉತ್ತಮ. ಜಿನಿವಾದಲ್ಲಿ ಅನೇಕ ರಾಷ್ಟ್ರಗಳ ಮಹಾ ಜ್ಞಾನಿಗಳ ಸಮ್ಮೇಳನವು ಏರ್ಪಾಡಾಯಿತು. ಅದರಲ್ಲಿ ಜರ್ಮನಿಯ ಡಾ॥ ಐನ್‌ಸ್ಟೀನ್, ಅಮೆರಿಕಾದ ಡಾ॥ ಮಲ್ಲಿಕನ್, ಫ್ರಾನ್ಸಿನ ಡಾ॥ ಬರ್ಗಸನ್, ಇಂಗ್ಲೇಂಡಿನ ಪ್ರೊ॥ ಗಿಲ್‌ಬರ್ಸ್ಟ್, ಮುರ್ರೆ ಮತ್ತು ಇಂಡಿಯಾದ ರಾಧಾಕೃಷ್ಣನ್ ಮುಂತಾದವರು ಆ ಸಮಿತಿಯಲ್ಲಿದ್ದರು. ಆ ಸಂಘದ ಉದ್ದೇಶವು ನಾನಾ ದೇಶಗಳ ಸ್ಥಿತಿಗತಿಗಳನ್ನರಿತು ಎಲ್ಲಾ

ದೇಶದ ಜನರಲ್ಲೂ, ಮಾನವೀಯತೆಯನ್ನು ಹೆಚ್ಚಿಸುವುದಾಗಿತ್ತು. ಆದ ರಲ್ಲಿ ಸರ್ವಪಳ್ಳಿಯವರು 1931 ರಿಂದ 1939ರ ವರೆಗೆ ಸದಸ್ಯರಾಗಿದ್ದರು. ಇದರಲ್ಲಿ ಭಾಗವಹಿಸಲು ವರ್ಷಕ್ಕೊಮ್ಮೆ ಜನಿವಾಕ್ಕೆ ಹೋಗಿಬರುತ್ತಿದ್ದರು. ಅಲ್ಲಿ ಇವರು ಮಾಡಿದ ಕಾರ್ಯವು ಬಹಳ ಗಣನೀಯವಾದುದು. ಆ ಸಂಘವನ್ನುದ್ದೇಶಿಸಿ, ಉಪನ್ಯಾಸ ಮಾಡುತ್ತಾ, "ನಮಗೆ ಬೇಕಾದ ವಿದ್ಯಾ ಭ್ಯಾಸವು ಸಂಕುಚಿತವಾಗಿರಬಾರದು. ರಚನಾತ್ಮಕವಾಗಿರಬೇಕು. ಮಾನ ವನ ಮನಸ್ಸಿನ ಮೂಲಭೂತವಾದ ಶ್ರದ್ಧೆಯು ಕೇವಲ ಒಂದು ಜನಾಂಗದ ಅಥವಾ ಒಂದು ರಾಷ್ಟ್ರದ ಅಭಿಮಾನದಲ್ಲಿ ಕೇಂದ್ರವಾಗಬಾರದು. ಜನತೆಗೆ ಮಾನವ ಪ್ರೇಮವನ್ನೂ ಶಾಂತಿಯ ಹಿರಿಮೆಯನ್ನೂ ಉಪದೇಶ ಮಾಡೋಣ." ಎಂದು ಹೇಳಿ ವಿದ್ವಾಂಸರೆಲ್ಲರಿಗೂ ಒಂದು ಬೆಳಕನ್ನು ತೋರಿದರು. ಪೌರ್ವಾತ್ಯ ಮತ್ತು ಪಾಶ್ಚಾತ್ಯರ ವಿದ್ಯಾಭ್ಯಾಸದ ಕ್ರಮದಲ್ಲಿ ಅನ್ಯೋನ್ಯತೆಯನ್ನು ಬೆಳೆಸಿದರು.

ಪಂಜಾಬ್ ವಿಶ್ವವಿದ್ಯಾನಿಲಯದ ಘಟಿಕೋತ್ಸವವನ್ನುದ್ಘಾಟಿಸುತ್ತಾ "ವಿಶ್ವವಿದ್ಯಾನಿಲಯಗಳು ರಾಜಕೀಯದಿಂದ, ಮತೀಯ ಧರ್ಮಗಳ ಶ್ರದ್ಧೆ ಯಿಂದ ದೂರವಿರಬೇಕು. ವಿದ್ಯಾರ್ಥಿಗಳ ಮತ್ತು ಉಪಾಧ್ಯಾಯರ ಕಷ್ಟ ಗಳು ಇದ್ದೇಇವೆ. ಮನುಷ್ಯನಿಗೆ ಕಷ್ಟಗಳು ಆಜನ್ಮಸಿದ್ಧವಾಗಿ ಬಯಸದೆಯೇ ಬರುತ್ತವೆ ನಮ್ಮ ಕಾರ್ಯವು ರಾಷ್ಟ್ರದ ದೃಷ್ಟಿಯಿಂದ, ಧರ್ಮ ದೃಷ್ಟಿ ಯಿಂದ ಪವಿತ್ರವಾದುದು. ಜನತೆಯು ನಮ್ಮನ್ನು ಮರೆಯಬಹುದು, ನಮಗೆ ನಿರಾಶೆಯಾಗಬಹುದು. ಆದರೆ ನಿಜವಾದ ಜ್ಞಾನದಿಂದ ನಮಗೆ ಜಯವಿದೆ. ಕೆಟ್ಟದ್ದನ್ನು ತಿರಸ್ಕರಿಸೋಣ. ಕೊಳಕಿನಿಂದ ದೂರವಿರೋಣ ನ್ಯಾಯವನ್ನವಲಂಬಿಸೋಣ. ಅದೇ ಪವಿತ್ರವಾದುವುಗಳು! ಅದೇ ದೊಡ್ಡ ತನಗಳು! ಮಾನವನು ನಮ್ಮ ದೋಷಗಳನ್ನೇ ಹುಡುಕುತ್ತಿರುತ್ತಾನೆ. ದೇವರು ನಮ್ಮ ಹೋರಾಟವನ್ನು ನೋಡುತ್ತಿರುತ್ತಾನೆ!" ಎಂದು ಹೇಳಿದ್ದಾರೆ.

ಆಂಧ್ರ ವಿಶ್ವವಿದ್ಯಾನಿಲಯದ ಪ್ರಥಮ ಪಧವೀದಾನ ಸಮಾರಂಭವ ನ್ನುದ್ಘಾಟಿಸುತ್ತಾ "ವಿಶ್ವವಿದ್ಯಾನಿಲಯಗಳು ಮತ್ತು ರಾಷ್ಟ್ರಜೀವನ" ಎಂಬ ವಿಷಯವಾಗಿ ಮಾತನಾಡಿದ್ದಾರೆ. ವಿದ್ಯಾರ್ಥಿಗಳು ಭಾರತದ ಭವಿಷ್ಯತ್ತಿಗಾಗಿ

ದುಡಿಯಬೇಕು. ಪ್ರಾಂತೀಯ ಮೋಹದಲ್ಲಿ ಕೇವಲ ಭಾಷೆಗೆ ಹೆಚ್ಚಿನ ಗಮನವನ್ನು ಕೊಡುವುದು ಸರಿಯಲ್ಲ. ಎಲ್ಲರೂ ವಿಜ್ಞಾನದ ಕಡೆಗೆ ನುಗ್ಗ ಬೇಕೆಂದೂ ಅಲ್ಲ. ಇತಿಹಾಸವನ್ನು ಓದಬೇಕು. ರೈತರಿಗೂ ಸಹಾಯಕ ರಾಗಬೇಕು. ಯಾಂತ್ರಿಕ ವಿಷಯಗಳಲ್ಲೂ ಶ್ರದ್ಧೆಯನ್ನು ವಹಿಸಬೇಕು. ಎಲ್ಲಕ್ಕಿಂತಲೂ ಹೆಚ್ಚಾಗಿ ಸತ್ಯವನ್ನು ಪ್ರೀತಿಸಬೇಕು. ಮಾನವ ಕುಲಕ್ಕೆ ಸಹಾಯವನ್ನು ನೀಡಲು ಸದಾ ಸಿದ್ಧರಾಗಿರಬೇಕು. ಈ ಭಾವನೆಗಳನ್ನು ಬೆಳಸಿಕೊಡುವುದೇ ಸರಿಯಾದ ಶಿಕ್ಷಣ" ಎಂದು ಹೇಳಿದರು. ಅದೇ ಅಭಿಪ್ರಾಯವನ್ನು ಮೈಸೂರು ವಿಶ್ವವಿದ್ಯಾನಿಲಯದ ಘಟಿಕೋತ್ಸವದಲ್ಲಿ 'ವಿದ್ಯಾಭ್ಯಾಸ ಮತ್ತು ರಾಷ್ಟ್ರೀಯತೆ' ಎಂಬ ವಿಷಯದಲ್ಲಿ ಮಾತನಾಡುತ್ತಾ ತಿಳಿಸಿದ್ದಾರೆ.

ಪಂಜಾಬ್ ವಿಶ್ವವಿದ್ಯಾನಿಲಯದಲ್ಲಿ "ಮುಂದಾಳತ್ವಕ್ಕೆ ಶಿಕ್ಷಣ" ಎಂಬ ವಿಷಯವನ್ನು ತಿಳಿಸುತ್ತಾ, ಕೇವಲ ಹಣಕ್ಕಾಗಿ ಬಾಳಬೇಡಿ. ಬಾಳಿಗಾಗಿ ಬಾಳಿ, ಜಯಕ್ಕಾಗಿ ಸೌಲಭ್ಯಗಳನ್ನು ಪರಿಗಣಿಸಬೇಡಿ. ಸೇವೆಗಾಗಿ ಪ್ರಯತ್ನಿಸಿ ಎಂದು ಹೇಳಿದ್ದಾರೆ.

ನಾಗಪುರ ವಿಶ್ವವಿದ್ಯಾನಿಲಯದಲ್ಲಿ "ವಿದ್ಯಾಭ್ಯಾಸ ಮತ್ತು ಹೊಸ ಪ್ರಜಾಪ್ರಭುತ್ವ" ಎಂಬ ವಿಷಯವಾಗಿ ಮಾತನಾಡುತ್ತಾ "ಯುವಕರು ಬಾಳುವುದನ್ನು ಕಲಿಯಬೇಕು. ತಮಗಾಗಿಯಲ್ಲ! ಬೇರೆಯವರಿಗಾಗಿ ಬಾಳಬೇಕು. ಸಾಮಾನ್ಯವಾಗಿ ವಿದ್ಯಾರ್ಥಿಗಳು ನೌಕರಿಯತ್ತ ಗುರಿಯ ನ್ನಿಟ್ಟಿರುತ್ತಾರೆ. ಕೆಲವು ವೇಳೆ ಅದು ನಿರಾಶೆಯಾಗಬಹುದು. ವ್ಯಥೆಯನ್ನು ಪಡಬೇಕಾಗಿಲ್ಲ ಎಂದಿದ್ದಾರೆ.

ಧರ್ಮ ಮತ್ತು ಸಮಾಜ ಎಂಬ ಗ್ರಂಥದಲ್ಲಿ ಈ ರೀತಿ ತಿಳಿಸುತ್ತಾರೆ. "ಕೆಲವರು ಪಾಠಶಾಲೆಗಳನ್ನು ವಿರೋಧಿಸುತ್ತಾರೆ. ಅಂತಹವರು ಧ್ಯೇಯ ವಾದಿಗಳಾದರೂ ಕೇವಲ ತರ್ಕವಾದಿಗಳು. ಇತ್ತೀಚೆಗೆ ಕೆಲವು ಕಡೆ ಕೆಲವರು ಆರ್ಥಿಕ ಶ್ರದ್ಧೆಯಲ್ಲಿ ಮಾತ್ರ ಗುರಿಯನ್ನಿಟ್ಟಿದ್ದಾರೆ. ಅವರ ಕಾರ್ಯಗಳು ಕೇವಲ ಡಾಂಬಿಕತನದ ಪ್ರಯತ್ನಗಳಾಗಿವೆ. ಈ ಭಾವನೆ ಗಳು ಬೆಳೆದರೆ ಪ್ರಪಂಚವು ಅನಾಮಧೇಯವುಳ್ಳದ್ದಾದೀತು. ಇಂದಿನ ವಿದ್ಯಾಭ್ಯಾಸದ ಕ್ರಮದಲ್ಲಿ ವೈಯಕ್ತಿಕ ಬುದ್ಧಿ ಮತ್ತು ಸಾಮರ್ಥ್ಯಗಳ

ಬೆಳವಣಿಗೆಗೆ ಅವಕಾಶವಿಲ್ಲ. ಎಲ್ಲಿಯೋ ಅನುಮೋದಿಸಲ್ಪಟ್ಟ ಒಂದೇ ರೀತಿಯ ಅಚ್ಚಿನಲ್ಲಿ ಎರಕಹೊಯಲ್ಪಡುತ್ತಿದ್ದೇವೆ. ಜಾತಿವಾದ, ಸಂಕುಚಿತ ದೇಶಭಕ್ತಿ ಮುಂತಾದುವುಗಳಿಗೆ ಪ್ರಾಧಾನ್ಯತೆಯನ್ನು ಕೊಟ್ಟು, ವಿದ್ಯಾರ್ಥಿಗಳಿಗೆ ಬೋಧಿಸುತ್ತಿದ್ದೇವೆ. ಇದರಿಂದ ನಾವು ವೇಷಧರಿಸಿದ ಪ್ರಾಣಿಗಳಂತೆ ಜೀವಂತ ಗೊಂಬೆಗಳಂತೆ ವರ್ತಿಸುತ್ತಿದ್ದೇವೆ. ಇದು ಕೂಡದು. ವಿಶ್ವ ಪ್ರೇಮವನ್ನು ಬೆಳೆಸುವ ಕ್ರಿಯಾತ್ಮಕ ವಿದ್ಯಾಭ್ಯಾಸವು ನಮಗೆ ಬೇಕು ಎಂದು ತಮ್ಮ ಅಭಿಪ್ರಾಯವನ್ನು ಸೂಚಿಸುತ್ತಾರೆ. ಸ್ವಲ್ಪ ಹೆಚ್ಚು ಕಡಿಮೆ ಇದೇ ಭಾವನೆಯನ್ನು 1944ರಲ್ಲಿ ತಾವು ಬರೆದಿರುವ ವಿದ್ಯಾಭ್ಯಾಸದ ರಾಜಕೀಯ ಮತ್ತು ಯುದ್ಧ (Educational Politics and War) ಎಂಬ ಗ್ರಂಥದಲ್ಲಿಯೂ ತಿಳಿಸಿದ್ದಾರೆ.

ವಿಶ್ವವಿದ್ಯಾನಿಲಯಗಳ ವಿದ್ಯಾಭ್ಯಾಸದ ನಿಯೋಗದ (University Education Commission). ಅಧ್ಯಕ್ಷರಾಗಿ 1948 ಮತ್ತು 49 ಈ ಎರಡು ವರ್ಷಗಳು ಕೆಲಸವನ್ನು ಮಾಡಿದರು. ಅಲ್ಲಿ ಇವರು ಕೊಟ್ಟ ಅಭಿಪ್ರಾಯಗಳು ಮುಖ್ಯವಾದುವುಗಳು. "ಒಂದು ದೇಶದ ಗಣ್ಯತೆಯು ರಾಜ್ಯವಿಸ್ತಾರದಿಂದಲಾಗಲೀ, ಸಂಪತ್ತಿನಿಂದಾಗಲೀ, ಅಪಾರವಾದ ವಹಿವಾಟುಗಳಿಂದಾಗಲೀ ಬರಲಾರದು. ವಿದ್ಯಾಭಿವೃದ್ಧಿಯಿಂದಾಗುತ್ತದೆ. ನಾವು ನಾಗರಿಕತೆಯನ್ನು ಬಯಸುವುದಾದರೆ, ಆಲೋಚನೆಯನ್ನು ಬೆಳೆಸಿಕೊಳ್ಳಬೇಕು. ಬಡವರಿಗೆ, ಕಷ್ಟದಲ್ಲಿರುವವರಿಗೆ ಮತ್ತು ಅಸಹಾಯಕರಿಗೆ ಸಹಾಯವನ್ನು ಮಾಡಬೇಕು. ಸ್ತ್ರೀಯರಲ್ಲಿ ಗೌರವವನ್ನು ತೋರಬೇಕು. ಮಾನವರೆಲ್ಲರಲ್ಲೂ ಸಹೋದರ ಭಾವನೆಯನ್ನು ಹೊಂದಬೇಕು. ಜಾತಿ ಅಥವಾ ಬಣ್ಣಗಳನ್ನು ಗಮನಿಸಬಾರದು, ರಾಷ್ಟ್ರ ಅಥವಾ ಧರ್ಮದಲ್ಲಿ ಅಂಧ ಶ್ರದ್ಧೆಯನ್ನು ತೋರಬಾರದು. ಶಾಂತಿ ಮತ್ತು ಸ್ವಾತಂತ್ರ್ಯಪ್ರಿಯರಾಗಬೇಕು ನಿರಂತರ ಶ್ರದ್ಧೆಯನ್ನು ಹೊಂದಬೇಕು. ಇಂತಹ ವಿದ್ಯಾಭ್ಯಾಸವು ನಮಗಿಂದು ಅಗತ್ಯವಿದೆ.

"ಮಾನವನ ಆತ್ಮಕ್ಕೆ ಸರಿಯಾದ ಶಿಕ್ಷಣವನ್ನು ಕೊಟ್ಟು ನಿಜವಾದ ಮಾನವನನ್ನಾಗಿ ಮಾಡುವುದಕ್ಕಿಂತ ಮತ್ತೊಂದು ಉದಾತ್ತ ಕಾರ್ಯವು ಪ್ರಪಂಚದಲ್ಲಿಲ್ಲ." ಎಂದು ಹೇಳಿ ಬರ್ಕ್ಸ್‌ರವರ ಮಾತಿನ ಉದಾಹರಣೆ

ಯನ್ನು ಕೊಡುತ್ತಾರೆ. 'ಒಂದು ಪ್ರಜಾಪ್ರಭುತ್ವದ ರಾಜ್ಯಕ್ಕೆ ಒಬ್ಬ ವಿದ್ಯಾವಂತ ಪೌರನು ಒಂದು ದೊಡ್ಡ ಸೈನ್ಯಕ್ಕಿಂತಲೂ ಮಿಗಿಲಾಗಿ ರಕ್ಷಕನಾಗುತ್ತಾನೆ'.

ನಾವು ಬಾಳುತ್ತಿರುವುದು ಮಾನವ ಚರಿತ್ರೆಯ ಒಂದು ಮಹಾ ಕ್ರಾಂತಿ ಯುಗದಲ್ಲಿ. ನಾವು ರಾಜಕೀಯವಾಗಿ ಆರ್ಥಿಕವಾಗಿ ಸಾಮಾಜಿಕವಾಗಿ ಮತ್ತು ನಾಗರೀಕವಾಗಿ ಅನೇಕ ಸಮಸ್ಯೆಗಳನ್ನು ಎದುರಿಸಬೇಕಾಗಿದೆ. ಇಂದಿನ ಯುವಕರಿಗೆ ಇವೆಲ್ಲದರ ಪರಿಚಯವನ್ನು ಕೊಡಬೇಕು. ರಾಷ್ಟ್ರಗಳು ; ಬೆಳವಣಿಗೆಯನ್ನು ಅವಲಂಬಿಸದಿದ್ದರೆ, ಹಿಂದುಳಿಯುತ್ತವೆ. ನಮ್ಮದೇಶದಲ್ಲಿ ಕೈಗಾರಿಕೆಯು ಅಭಿವೃದ್ಧಿಯಾಗಬೇಕು. ಅದಕ್ಕಾಗಿ ವಿಜ್ಞಾನಿಗಳು, ಕಾರ್ಮಿಕರು ಮತ್ತು ಇಂಜಿನಿಯರುಗಳು ಬೇಕು. ಇದರಿಂದಲೇ ವಿಶ್ವವಿದ್ಯಾನಿಲಯಗಳಲ್ಲಿ ಈ ಭಾಗಗಳಿಗೆ ವಿದ್ಯಾರ್ಥಿಗಳ ಸಂಖ್ಯೆಯು ಹೆಚ್ಚುತ್ತಿದೆ. ಇದರಿಂದ ದೇಶದ ಉತ್ಪನ್ನಗಳೂ ಹೆಚ್ಚುತ್ತಿವೆ. ಉದ್ಯೋಗಗಳೂ ದೊರೆಯುತ್ತಿವೆ.

"ವಿಜ್ಞಾನ ಮತ್ತು ತಾಂತ್ರಿಕ ವಿದ್ಯಾಭ್ಯಾಸವು ನೈತಿಕ ಶೂನ್ಯತೆಯನ್ನುಂಟುಮಾಡುತ್ತದೆಂದು ನಾನು ನಂಬುವುದಿಲ್ಲ. ವಿಜ್ಞಾನವು ಜ್ಞಾನದಾಯಕವಾದುದು, ಆಸಕ್ತಿದಾಯಕವಾದುದು, ಮತ್ತು ಉಪಯುಕ್ತದಾಯಕವಾದುದು. ಆದರೂ ವಿಜ್ಞಾನಿಯು ಪೂರ್ಣ ಮನುಷ್ಯನಾಗುವುದಿಲ್ಲ. ಜ್ಞಾನವನ್ನು ವಿಜ್ಞಾನದಸಹಿತ ನೀಡಿದರೆ ಮಾತ್ರ ತೃಪ್ತಿಕರವಾದ ವಿದ್ಯಾಭ್ಯಾಸವಾಗುವುದು. ಕೇವಲ ಬುದ್ಧಿಗೆ ಮಾತ್ರ ಶಿಕ್ಷಣವನ್ನು ಕೊಟ್ಟರೆ ಸಾಲದು. ಮನುಷ್ಯನ ಹೃದಯವನ್ನೂ ಶುದ್ಧಿಗೊಳಿಸಬೇಕು. ಬುದ್ಧಿವಂತಿಕೆಯಿಂದ ಸಾಹಿತ್ಯ ತತ್ವಶಾಸ್ತ್ರ ಮತ್ತು ಧಾರ್ಮಿಕ ವಿಷಯಗಳನ್ನು ಓದುವುದರಿಂದ ಸುಲಭವಾಗಿ ಜ್ಞಾನವು ಹೆಚ್ಚುತ್ತದೆ. ನ್ಯಾಯಾನ್ಯಾಯಗಳ ಅರಿವೂ ಆಗುತ್ತದೆ. ಅದರೆ ವಿಶ್ವದ ಸಾಮೂಹಿಕ ತತ್ವಗಳನ್ನು ಹೊಂದಿಸಿ ಕೊಳ್ಳದಿದ್ದರೆ, ನಮ್ಮ ಮನಸ್ಸು ಕಂಗಾಲಾಗುತ್ತದೆ. ಮನಸ್ಸಿನ ಹೊಲಸು ಹೊರಗಡೆಯ ಹೊಲಸಿಗಿಂತಲೂ ಅಪಾಯಕಾರಿಯಾದುದು. ನಾವು ನಿಜವಾದ ನಾಗರೀಕತೆಯನ್ನು ಮರೆತು ವಿಜ್ಞಾನವನ್ನು ಕಲಿತರೆ ಸಮಾಜ ಘಾತುಕರಾಗುತ್ತೇವೆ. ಆದುದರಿಂದ ವಿಜ್ಞಾನ ಮತ್ತು ತಾಂತ್ರಿಕ ಶಿಕ್ಷಣದ ಜೊತೆಯಲ್ಲಿ ನೈತಿಕ ವಿಜ್ಞಾನವೂ ಬೆರೆತಿರುವುದೊಳ್ಳೆಯದು? ಎಂದು ಹೇಳುವರು.

ಇನ್ನು ಚರಿತ್ರೆಯ ವ್ಯಾಸಂಗದ ವಿಷಯವಾಗಿ ಹೀಗೆ ಹೇಳುವರು "ಚರಿತ್ರೆಯು ಅಂತರ ರಾಷ್ಟ್ರೀಯ ಸಹಕಾರವನ್ನುಂಟುಮಾಡಲು ಸಹಕಾರಿಯಾದದು. ಪ್ರಪಂಚದ ಬೇರೆ ರಾಷ್ಟ್ರಗಳ ನಾಗರಿಕತೆಯನ್ನು ತಿಳಿಯಲು ಚರಿತ್ರೆಯನ್ನು ಉಪಯೋಗಿಸಿಕೊಳ್ಳಬೇಕು.

ಸರ್ವಪಳ್ಳಿಯವರು ಮೂಲಶಿಕ್ಷಣದ ವಿಷಯವಾಗಿ ಆಲೋಚಿಸಿದ್ದಾರೆ. ಈ ಶಿಕ್ಷಣವು ನಮ್ಮ ಪುರಾತನ ವಿದ್ಯಾಭ್ಯಾಸದ ರೀತಿಯಲ್ಲಿದೆ. ವಿದ್ಯಾರ್ಥಿಗಳು ಶಿಕ್ಷಣಾನಂತರ ತಮ್ಮ ಜೀವನವನ್ನು ಮತ್ತೊಬ್ಬರಿಗೆ ಹೊರೆಯಾಗದಂತೆ ಸಾಧಿಸುವ ಶಕ್ತಿಯನ್ನು ಹೊಂದಬೇಕು. ಆದರೆ ಇತ್ತೀಚೆಗೆ ಪುಸ್ತಕದಲ್ಲಿರುವ ವಿಷಯಗಳನ್ನು ಓದಿ ಬರೆಯುವುದೇ ವಿದ್ಯಾಭ್ಯಾಸವೆಂಬ ದುರಭಿಪ್ರಾಯವು ಕೆಲವರಲ್ಲಿದೆ. ಇದರಿಂದ ಮಾನವನು ಸ್ವಶಕ್ತಿಯನ್ನೇ ಕಳೆದು ಕೊಳ್ಳುತ್ತಿದ್ದಾನೆ ಎಂಬ ಅಭಿಪ್ರಾಯದಲ್ಲಿ ಟೋಕಿಯೋನಲ್ಲಿ ಉಪನ್ಯಾಸವನ್ನು ಮಾಡುತ್ತಾರೆ "ದಾರ್ಶನಿಕ ವಿಷಯದಿಂದ ಆಸ್ಪೆರಿಸ್ ಗುಳಿಯವರಿಗೆ ಏನನ್ನು ಕೊಟ್ಟರೂ ಕೂಡ, ಪರಾಡಳಿತವನ್ನು ಒಪ್ಪಿಕೊಳ್ಳಲು ಸಿದ್ಧನಾದ, ವಿಧೇಯನಾದ, ತಟಸ್ಥನಾದ, ಸೇವಕನನ್ನು ತಯಾರು ಮಾಡುವ ಸಾಧನವಾಗಿದೆ ಇಂದಿನ ವಿದ್ಯಾಭ್ಯಾಸ. ಇಂತಹ ವಿದ್ಯಾಭ್ಯಾಸದ ಕ್ರಮವನ್ನು ಬೇರುಸಹಿತ ಕೀಳಬೇಕು." ಎನ್ನುತ್ತಾರೆ. ಪರಾಶ್ರಯವನ್ನು ಬಯಸದಂತೆ ಜೀವನವನ್ನು ಸಾಗಿಸಬಲ್ಲ ಶಕ್ತಿಯನ್ನು ನೀಡಬಲ್ಲುದೇ ಮೂಲಶಿಕ್ಷಣ. ಜನಜೀವನಕ್ಕೆ ಅಗತ್ಯವಾದ ವೃತ್ತಿಗಳನ್ನು ಕೇಂದ್ರವನ್ನಾಗಿ ಮಾಡಿಕೊಂಡು, ಭಾಷೆ, ಚರಿತ್ರೆ, ಭೂಗೋಳ ಮುಂತಾದ ವಿಷಯಗಳನ್ನು ಕಲಿಸುವುದೊಳ್ಳೆಯದು. ಇದರಿಂದ ವಿದ್ಯಾರ್ಥಿಗಳಿಗೆ ನಿತ್ಯಜೀವನದ ಸಂಪರ್ಕ ಉಂಟಾಗುತ್ತದೆ. ದೈಹಿಕ ಶಿಕ್ಷಣಕ್ಕೂ ಇದರಿಂದ ಗಮನ ಕೊಟ್ಟಂತಾಗುತ್ತದೆ.

ಮಕ್ಕಳ ವಿದಾಭ್ಯಾಸದ ವಿಷಯದಲ್ಲಿ ಹೆಚ್ಚಿನ ಗಮನವನ್ನು ಕೊಡಬೇಕೆಂದು ಇವರ ಅಭಿಪ್ರಾಯ. ಮಕ್ಕಳಿಗೆ ವಿಷಯ ಸಂಗ್ರಹಣ ಶಕ್ತಿಯು ಹೆಚ್ಚಾಗಿರುತ್ತದೆ. ಪ್ರತಿಯೊಂದು ವಿಷಯದಲ್ಲಿಯೂ ಆಸಕ್ತಿಯನ್ನು ತೋರುತ್ತಾರೆ. ನಾವದಕ್ಕೆ ಪ್ರತಿಬಂಧಕವನ್ನು ಮಾಡಬಾರದು. ಅವರಲ್ಲಿರುವ ಚತುರತೆಯನ್ನು ಮೊಟಕು ಮಾಡಬಾರದು. ಮಕ್ಕಳಲ್ಲಿರುವ ಕ್ರಿಯಾ

ತ್ಮಕ ಶಕ್ತಿಯನ್ನೂ ಊಹಾಶಕ್ತಿಯನ್ನೂ ಬೆಳಸಬೇಕು. ಎಲ್ಲಕ್ಕಿಂತಲು ಹೆಚ್ಚಾಗಿ ಜೀವನದಲ್ಲಿ ಪ್ರೇಮ, ಸತ್ಯ, ಸುಂದರ ಮತ್ತು ಒಳ್ಳೆಯದರ ವಿಷಯದಲ್ಲಿ ಮಕ್ಕಳ ಆಸಕ್ತಿಯನ್ನು ಹೆಚ್ಚಿಸಬೇಕು. ಒಬ್ಬರಿಗೊಬ್ಬರು ಕಡಿದಾಡುವುದು ಪರರನ್ನು ಹಿಂಸೆಮಾಡುವುದು ಇಂತಹ ಕೆಟ್ಟಗುಣಗಳನ್ನು ನಿರ್ನಾಮಮಾಡಬೇಕು.

ನಾವು ಜಾತ್ಯತೀತ ಮತ್ತು ವರ್ಗರಹಿತ ಸಮಾಜವನ್ನು ಕಟ್ಟಬೇಕಾದರೆ ಇಂದಿನ ಮಕ್ಕಳ ಮನಸ್ಸನ್ನು ಈಗಿನಿಂದಲೇ ತಿದ್ದಬೇಕು. ಅದಕ್ಕನು ಗುಣವಾದ ಪುಸ್ತಕಗಳನ್ನು ಹೊರತರಬೇಕು ಎಂದು ಹೇಳುತ್ತಾರೆ.

ಕಳೆದ ಹತ್ತು ವರ್ಷಗಳಿಂದ ವಿದ್ಯಾಭ್ಯಾಸದ ಕ್ರಮದಲ್ಲಿ ಅನೇಕ ಬದಲಾವಣೆಗಳಾಗುತ್ತಿವೆ. ಪ್ರೌಢ ವಿದ್ಯಾಭ್ಯಾಸಗಳಲ್ಲಿ ಭಾಷಾಮಾಧ್ಯಮದ ಗೊಂದಲವುಂಟಾಗಿದೆ. ಕೆಲವು ವಿಶ್ವವಿದ್ಯಾನಿಲಯಗಳಲ್ಲಿ ಆಯಾ ಪ್ರಾಂತೀಯ ಭಾಷೆಗಳಲ್ಲೇ ವಿಷಯಗಳು ಬೋಧನೆಯಾಗುತ್ತವೆ. ಅದರ ವಿಷಯವಾಗಿ ಸರ್ವಪಳ್ಳಿಯವರು "ಮಾತೃಭಾಷೆಯ ಪೂರ್ಣಜ್ಞಾನವು ಆವಶ್ಯಕ. ಹಾಗೆಯೇ ಅಂತರರಾಷ್ಟ್ರೀಯ ಭಾಷೆಯಾದ ಆಂಗ್ಲಭಾಷೆಯೂ ಅಗತ್ಯವಾಗಿದೆ. ರಾಷ್ಟ್ರಕ್ಕೊಂದು ಸಾಮಾನ್ಯಭಾಷೆಯು ಇರುವುದೂ ಒಳ್ಳೆಯದೇ ಹೀಗಿರುವಾಗ ವಿದ್ಯಾರ್ಥಿಯಾದವನಿಗೆ ಈ ಮೂರು ಭಾಷೆಗಳನ್ನೂ ಕಲಿಯುವುದು ಅಸಾಧ್ಯವೇನಲ್ಲ. ಹಾಗೆ ಕಲಿತರೆ, ಭಾಷಾಸಮಸ್ಯೆಯು ಪರಿಹಾರವಾದಂತೆಯೇ. ಅದನ್ನುಬಿಟ್ಟು ಪ್ರಾಂತೀಯ ಭಾಷೆಯ ಮೋಹದಿಂದ ಕಡಿದಾಡುವುದು ನಾಡ ಪ್ರೇಮವಲ್ಲ. ರಾಷ್ಟ್ರದ ಬೇನೆಯಾಗುತ್ತದೆ" ಎಂದು ಹೇಳಿದರು.

ಸ್ತ್ರೀ ವಿದ್ಯಾಭ್ಯಾಸದ ವಿಷಯದಲ್ಲಿ ಸರ್ವಪಳ್ಳಿಯವರು ಪ್ರಾಮುಖ್ಯತೆಯನ್ನು ಕೊಡುತ್ತಾರೆ. ವೇದಗಳ ಕಾಲದಿಂದಲೂ ನಮ್ಮ ಭಾರತದಲ್ಲಿ ಸ್ತ್ರೀಯರಿಗೆ ಪುರುಷರಂತೆಯೇ ಸಾಮಾಜಿಕ ಜೀವನದಲ್ಲೂ, ಆಚಾರ ವ್ಯವಹಾರಗಳಲ್ಲೂ ಸಾಮಾನತೆಯನ್ನು ನೀಡಿರುವುದಲ್ಲದೆ ವಿದ್ಯಾಭ್ಯಾಸದಲ್ಲೂ ಸಮಾನತೆಯನ್ನು ಕೊಟ್ಟಿದೆ. ಬ್ರಾಹ್ಮಣ ಗಂಡಸರಿಗೆ ನೀಡುತ್ತಿದ್ದ ವೇದಾಭ್ಯಾಸವನ್ನು ಬ್ರಾಹ್ಮಣ ಸ್ತ್ರೀಯರಿಗೂ ಕಲಿಸುತ್ತಿದ್ದನು. ಕ್ಷತ್ರಿಯರಲ್ಲಿ ಗಂಡಸರಿಗೆ ಧನುರ್ವಿದ್ಯಾಭ್ಯಾಸವನ್ನೂ ಕುದುರೆಯ ಸವಾರಿಯನ್ನೂ ಕಲಿಸು

ತ್ರಿದ್ದಂತೆಯೇ ಸ್ತ್ರೀಯರಿಗೂ ಕಲಿಸುತ್ತಿದ್ದರು. ಎಂಬ ವಿಷಯಗಳನ್ನು ವೇದ ಮತ್ತು ಪುರಾಣಗಳ ಆಧಾರದಿಂದ ಹೇಳುವರು. ಚಂದ್ರಗುಪ್ತನ ಆಸ್ಥಾನ ದಲ್ಲಿ ಸ್ತ್ರೀಯರು ಅಂಗರಕ್ಷಕರಾಗಿದ್ದರೆಂದು ಮೆಗಾಸ್ತನೀಸನ ಬರವಣಿಗೆ ಯಿಂದ ತಿಳಿಯುತ್ತದೆ. ಇದರಿಂದ ಆಗಿನ ಕಾಲದಲ್ಲಿ ಹೆಂಗಸರಿಗೂ ಯುದ್ಧ ಶಿಕ್ಷಣವನ್ನು ಕೊಡುತ್ತಿದ್ದರು. ಇಷ್ಟಲ್ಲದೆ ಹಿಂದಿನ ಗುರುಕುಲ ವಿದ್ಯಾಭ್ಯಾಸ ಗಳಲ್ಲಿ ಸಹ ವಿದ್ಯಾಭ್ಯಾಸವು ರೂಢಿಯಲ್ಲಿತ್ತು. ಸ್ತ್ರೀಯರು ಶರೀರದ ಅಂಗ ಗಳಲ್ಲಿ ಕೆಲವು ವ್ಯತ್ಯಾಸಗಳನ್ನು ಪಡೆದಿದ್ದರೂ ಕೂಡ ಪುರುಷರಷ್ಟೇ ಬೌದ್ಧಿಕ ಮತ್ತು ಶಾರೀರಿಕ ಕಾರ್ಯಗಳನ್ನು ಮಾಡಬಲ್ಲರು. ಆದುದರಿಂದ ಈ ಗಿನ ಕಾಲದಲ್ಲಿಯೂ ಸಹವಿದ್ಯಾಭ್ಯಾಸವು ಉತ್ತಮವಾದುದು. ಉತ್ತಮ ಚಿತ್ರಕಲೆ, ಸಂಗೀತ, ನೃತ್ಯ, ಮುಂತಾದು ಸ್ತ್ರೀಯರಿಂದ ಹೆಚ್ಚು ಅಭಿವೃದ್ಧಿ ಯನ್ನು ಹೊಂದಬಲ್ಲವು" ಎಂದು ಹೇಳುವರು.

ಅಧ್ಯಾಪಕರ ವಿಷಯವಾಗಿ ಕೆಲವು ಸೂಚನೆಗಳನ್ನು ಕೊಡುತ್ತಾರೆ. "ನಮ್ಮ ಉಪಾಧ್ಯಾಯರು ವೃತ್ತಿ ಬಂದ ಮೇಲೆ ತಮ್ಮ ವ್ಯಾಸಂಗವನ್ನು ನಿಲ್ಲಿಸಿಬಿಡುತ್ತಾರೆ. ಅದು ತಪ್ಪು. ನಮ್ಮ ಅನುಭವಗಳು ಪ್ರಯೋಗ ದಿಂದ ಪೂರ್ಣಗೊಳ್ಳಬೇಕು. ಉಪಾಧ್ಯಾಯನು ಹೊಸ ಹೊಸ ಜ್ಞಾನಾ ರ್ಜನೆಯಿಂದ ಕಾಲ ಕಾಲಕ್ಕೆ ಹೊಂದಿಕೊಳ್ಳಬೇಕು." ಎಂದು ಅವರು ಹೇಳಿದ ಮಾತನ್ನು ಅವರೇ ಅಕ್ಷರಸಹ ಆಚರಿಸಿದ್ದಾರೆ. ತಾವು ತಿಳಿದು ದನ್ನು ಕಾಯಾವಾಚಾ, ಮನಸಾ ಶ್ರದ್ಧೆಯಿಂದ ಶಿಷ್ಯರಿಗೆ ತಿಳಿಸಿದ್ದಾರೆ. ಉತ್ತಮ ನಡವಳಿಕೆಗಳನ್ನು ತಾವು ಆಚರಿಸಿ, ಅದೇ ಆದರ್ಶವನ್ನು ತಮ್ಮ ಶಿಷ್ಯರೂ ಆಚರಿಸುವಂತೆ ಪ್ರಭಾವವನ್ನು ಬೀರಿದ್ದಾರೆ.

ವಿಶ್ವವಿದ್ಯಾನಿಲಯಗಳಲ್ಲಿ ಕೆಳಮಟ್ಟದ ತರಗತಿಗಳನ್ನು ತಾತ್ಸಾರ ದಿಂದ ನೋಡುವ ಗುಣವಿದೆ. ಹೊಸದಾಗಿ ಬರುವ ವಿದ್ಯಾರ್ಥಿಯು ಮೊಟ್ಟಮೊದಲು ಶಾಲೆಯ ಪರಿಚಯವನ್ನು ಹೊಂದುತ್ತಾನೆ. ತಾನು ಓದಬೇಕಾದ ವಿಷಯದಲ್ಲಿ ಹೆಚ್ಚು ಅನುಭವವುಳ್ಳ ಉಪಾಧ್ಯಾಯರಿಂದ ಶಿಕ್ಷಣವನ್ನು ನಿರೀಕ್ಷಿಸುತ್ತಾನೆ. ಅನುಭವಶಾಲಿಯಾದ ಪ್ರಾಧ್ಯಾಪಕನೂ ಕೆಳತರಗತಿಗಳನ್ನೇ ತೆಗೆದುಕೊಳ್ಳುವುದು ಒಳ್ಳೆಯದು. ಹೊಸದಾಗಿ ಬಂದ ವಿದ್ಯಾರ್ಥಿಗಳ ಆಸಕ್ತಿಯು ಹೆಚ್ಚುವಂತೆ ಮಾಡಲು ಮತ್ತು ಅವರು ಶಾಲೆ

ಯನ್ನು ಬಿಡುವ ತನಕ ಆಸಕ್ತಿಯು ಕುಂದದಂತೆ ನೋಡಿಕೊಳ್ಳಲು ಪ್ರಯತ್ನಿಸಬೇಕು.

ಉತ್ತಮ ಉಪಾಧ್ಯಾಯನು ತನ್ನ ಶಿಷ್ಯರಲ್ಲಿ ಬೌದ್ಧಿಕವಾಗಿ ಉತ್ತಮ ಪರಿಣಾಮವನ್ನು ಬಯಸುತ್ತಾನಲ್ಲದೆ. ಸರಿಯಾದ ಗಣ್ಯತೆಯನ್ನು ಮನನಮಾಡಿಸುತ್ತಾನೆ. ಸತ್ಯಕ್ಕಾಗಿ ನಡವಳಿಕೆಯು ಎಂಬುದನ್ನು ಮನಸ್ಸಿಗೆ ನಾಟುವಂತೆ, ಪ್ರಯತ್ನಿಸುತ್ತಾನೆ. ಅವರ ಬಾಳು ಅವರ ನಂಬಿಕೆಗನುಗುಣವಾಗುವಂತೆ, ಅವರ ವರ್ತನೆಯ ವಿಧಾನವನ್ನು ಸೂಚಿಸುತ್ತಾನೆ. ಇದು ಕಷ್ಟಸಾಧ್ಯವಾದ ಕೆಲಸ. ಆದರೂ ಭಾರತದ ಪ್ರಜಾಪ್ರಭುತ್ವವು ಸ್ಥಿರವಾಗಿರಬೇಕಾದರೆ, ದೇಶದ ಸ್ವಾತಂತ್ರ್ಯವು ಅಚ್ಚಳಿಯದೆ ಉಳಿಯಬೇಕಾದರೆ, ವಿದ್ಯಾಭ್ಯಾಸದಲ್ಲಿ ಈ ಕ್ರಮಗಳು ಅತ್ಯವಶ್ಯಕವೆಂದು ಸೂಚಿಸುತ್ತಾರೆ.

ಅನೇಕ ವೇಳೆ ಸರ್ವಪಳ್ಳಿಯವರು ತಮ್ಮ ಸಹ ವೃತ್ತಿಯವರನ್ನು ತಮ್ಮ ಮನೆಗೆ ಆಹ್ವಾನಿಸಿ ಅವರೊಡನೆ ಶಿಕ್ಷಣದ ವಿಷಯವಾಗಿ ಮಾತನಾಡುತ್ತಾ ಸಂತೋಷವಾಗಿ ಕಾಲವನ್ನು ಕಳೆಯುತ್ತಿದ್ದರು.

ರಾಧಾಕೃಷ್ಣನ್‌ರವರು ಆದರ್ಶ ಉಪಾಧ್ಯಾಯರು ಹಾಗೂ ಉತ್ತಮ ಶಿಕ್ಷಣ ತಜ್ಞರು. ಆದುದರಿಂದ ಅವರ ಸ್ಮರಣಾರ್ಥವಾಗಿ, ಅವರ ಹುಟ್ಟು ದಿನವಾದ ಸೆಪ್ಟೆಂಬರ್ ಐದನೆಯ ದಿನವನ್ನು "ಭಾರತದ ಉಪಾಧ್ಯಾಯರ ದಿನ"ವನ್ನಾಗಿ ಭಾರತದಾದ್ಯಂತ ಪ್ರತಿವರ್ಷವೂ ಆಚರಿಸುತ್ತಿದ್ದೇವೆ. ಇದರ ಮೊದಲನೆಯ ಉತ್ಸವವು 1962ನೇ ಸೆಪ್ಟೆಂಬರ್‌ನಲ್ಲಿ ನಡೆಯಿತು.

ಆ ದಿವಸ ಡಾ॥ ರಾಧಾಕೃಷ್ಣನ್ನರು ಕೊಟ್ಟ ಸಂದೇಶ—"ವಿದ್ಯಾಭ್ಯಾಸವು ಸ್ವಾತಂತ್ರ್ಯದ ಅಭ್ಯಾಸವಾಗಿದೆ. ಅದು ಮಾನವನ ಪ್ರತ್ಯೇಕತೆಯ ಸ್ವಭಾವವನ್ನು ಕಟ್ಟಿಟ್ಟು ಒಂದು ಅಂಕೆಯಲ್ಲಿಡಲು ಪ್ರಯತ್ನಿಸುತ್ತದೆ. ಸಾಮಾನ್ಯವಾಗಿ, ಮನುಷ್ಯನನ್ನು ಬಡತನವು ಕಾಡುತ್ತದೆ; ರೋಗವು ಅವನನ್ನು ಅಶಕ್ತನನ್ನಾಗಿ ಮಾಡುತ್ತದೆ; ಆತ್ಮವಿಶ್ವಾಸಕ್ಕೆ ನಿರ್ಬಂಧವಾಗುತ್ತದೆ. ಸ್ವತಂತ್ರವಾದ ಆಲೋಚನೆಗೆ ಹಕ್ಕು ಧೈರ್ಯವನ್ನು ಕೊಡುತ್ತದೆ. ಕ್ಷುಲ್ಲಕವಾದ ಆಕಾಂಕ್ಷೆಗಳು ಕೆಟ್ಟ ಕಾರ್ಯಗಳನ್ನು ಮಾಡುವಂತೆ ಪ್ರೇರೇಪಿಸುತ್ತವೆ. ಉಪಾಧ್ಯಾಯನ ಕರ್ತವ್ಯವು ಈ ವ್ಯವಹಾರಗಳಲ್ಲಿ

ಅತಿಮಹತ್ವವಾದುದು. ಎಲ್ಲಾ ಕ್ರಾಂತಿಗಳಲ್ಲೂ ಉಪಾಧ್ಯಾಯನು ಸಭ್ಯನಾಗಿ ಭಾಗಿಯಾಗಿದ್ದಾನೆ ಮುಂದೆಯೂ ಆಗುತ್ತಾನೆ. ಅವನ ಪಾತ್ರವು ಎಂದೆಂದೂ ಮಹತ್ವವಾದುದು. ಮಹಾ ಉಪಾಧ್ಯಾಯರು ಕುರುಡುತನದ ಕುರುಡು ನಾಯಕರಾಗುವುದಿಲ್ಲ ಅವರು ಅಲ್ಪದರಲ್ಲಿ ತೃಪ್ತಿಯನ್ನು ಹೊಂದುವುದಿಲ್ಲ. ಸದಾ ಮನುಷ್ಯರ ಭವಿಷ್ಯತ್ತಿನಲ್ಲಿ ನಂಬಿಕೆಯನ್ನಿಟ್ಟು ಕೊಂಡಿರುತ್ತಾರೆ ದುಃಖಿಗಳನ್ನೂ ತಪ್ಪಿತಸ್ಥರನ್ನೂ ಕೈಬಿಡದೆ, ನಮ್ಮ ನಾಗರೀಕತೆ ಮತ್ತು ಮೂಲಸತ್ಯಗಳ ಕಡೆಗೆ ಅಂತಹವರನ್ನು ಮತ್ತೆ ಕರೆದೊಯ್ಯುತ್ತಾರೆ" ಎಂದು ತಿಳಿಸಿದ್ದಾರೆ.

---

# ಬಾಪೂಜೀಗೆ ಅಶ್ರುಧಾರಾನಿವೇದನ

ಮಹಾತ್ಮ ಗಾಂಧೀಜಿಯವರು 1948ನೇ ಜನವರಿ 30 ರಂದು ಆಕಸ್ಮಿಕ ಅಪಘಾತಕ್ಕೊಳಗಾದರು. ಭಾರತಕ್ಕೇನೋ ಸ್ವಾತಂತ್ರ್ಯವು ಬಂದಿತ್ತು. ಹಿಂದೂ ಮುಸ್ಲಿಮ್ ಎಂಬ ಭಿನ್ನತೆಯು ಘರ್ಷಣೆಯ ರೂಪವನ್ನು ತಾಳಿತ್ತು. ನೌಕಾಲಿ ಮುಂತಾದ ಕಡೆಗೆಲ್ಲಾ ಬಾಪೂಜಿ ಯವರೇ ಸ್ವತಃ ಹೋಗಿ ಹಿಂದೂ ಮುಸ್ಲಿಮರಲ್ಲಿ ಸಹೋದರ ಭಾವನೆ ಯನ್ನು ಬಿತ್ತಿ ಬಂದಿದ್ದರು. ಆದರೂ ಕೆಲವು ಕಡೆ ಒಳಜಗಳವು ನಡೆ ಯುತ್ತಲೇ ಇತ್ತು. ಕೆಲವು ಕಡೆ ಹಿಂದೂಗಳಿಗೂ ಮತ್ತು ಕೆಲವು ಕಡೆ ಮಹಮದೀಯರಿಗೂ ಅಪಾರ ಕಷ್ಟನಷ್ಟಗಳುಂಟಾದುವು. ಈ ಅಂದೋ ಲನದಿಂದ ಉದ್ರೇಕಗೊಂಡು ಮತಾಂಧತೆಯನ್ನು ಹೊಂದಿದ ಗೋಡ್ಸೆ ಮತ್ತು ಆಪ್ಟೆ ಎಂಬುವರು ಗಾಂಧೀಜಿಯವರನ್ನು ಪ್ರಾರ್ಥನಾ ಸಭೆಯಲ್ಲಿಯೆ ಗುಂಡಿಕ್ಕಿ ಕೊಂದರು. ಈ ವಾರ್ತೆ ವಿಶ್ವಕ್ಕೆಲ್ಲಾ ಹರಡಿತು.

ಆಗ ರಾಧಾಕೃಷ್ಣನ್‌ರವರು ಆಕ್ಸ್‌ಫರ್ಡಿನಲ್ಲಿದ್ದರು. "(All Souls College) ಸರ್ವ ಸತ್ವಗಳ ಮಹಾ ವಿದ್ಯಾಲಯದಲ್ಲಿ ಉಪನ್ಯಾಸವನ್ನು ಮಾಡುತ್ತಿದ್ದರು. ಅಲ್ಲಿಯೇ ಇವರು ಈ ದುರ್ವಾರ್ತೆಯನ್ನು ಕೇಳಿ, ಕೆಲವು ನಿಮಿಷಗಳು ತಟಸ್ಥರಾದರು. ನಿಟ್ಟುಸಿರು ಬಿಟ್ಟು, "ಉತ್ತಮ ಧ್ಯೇಯಗಳಿಗೆ ವಶನಾಗಿ, ಮಹತ್ಕಾರ್ಯಕ್ಕೆ ಪ್ರೇರಣೆಗೊಂಡು, ಯಾವ ಮನುಷ್ಯನು ಶಕ್ತನಾದನೋ ಅಂತಹ ಗಾಂಧೀಜಿಯವರು, ತಮಗೆ ಸಾಕ್ಷಾ ತ್ಕಾರವಾದ ಸತ್ಯವನ್ನು, ಧೈರ್ಯವಾಗಿ ತಾವು ಆಚರಿಸುತ್ತಾ, ಪರರಿಗೂ, ಅದನ್ನು ಬೋಧಿಸುತ್ತಾ, ಜಯಿಸಲು ಕಷ್ಟಸಾಧ್ಯವಾದ, ಅಜ್ಞಾನ ಮತ್ತು ಅತಿಯಾಸೆಗಳ ಹಿಡಿತದಲ್ಲಿ ಸಿಕ್ಕಿ, ಅಪನಂಬಿಕೆಗಳಲ್ಲಿ ತೊಳಲಾಡುವವರಿಗೆ ಮಾರ್ಗದರ್ಶನ ಮಾಡುತ್ತಾ, ಪರಿಹಾಸ್ಯ ಮತ್ತು ಅಪಾಯಗಳಿಗೆ ತಲೆ ಬಾಗದ, ನಿಶ್ಯಬ್ಧವಾದ, ನಿರ್ಣಯಗಳಿಂದಲೇ, ಭಯಂಕರವಾದ ಕಲಹ ಗಳನ್ನು ಎದುರಿಸುತ್ತಾ, ಜಗತ್ತಿಗಾಗಿ ಜೀವವನ್ನು ಸವೆಸಿ, ನಂಬದಿರುವ ಈ ಪ್ರಪಂಚಕ್ಕೆ ಮಾನವ ಚೈತನ್ಯದಲ್ಲಿ ಬಹು ಅಮೂಲ್ಯವಾದುದನ್ನು

ಸೀಡಿವರು. ಮಾನವ ಪ್ರಯತ್ನದ ಫಲವಾಗಿ ಬಂದ ಪ್ರಾಚೀನವಾದ ಮೂಲತತ್ವಗಳಲ್ಲಿ ಹಿರಿದಾದ ನಂಬಿಕೆಯಿಂದ ಮನುಷ್ಯನ ಗೌರವದ ಮೇಲೆ ಬೆಳಕನ್ನು ಚೆಲ್ಲಿದರು. ಮನುಷ್ಯನ ಪ್ರಯತ್ನದಿಂದ ಸನಾತನವಾದ ಮಹತ್ವವಿದೆ. ಆದರೆ ಅದನ್ನು ನಂಬಬೇಕು ಎಂದು, ಮಾನವ ಕೋಟಿಗೆ ಸಾರಿದರು. ಮಾನವ ಕುಲವನ್ನು ಉದ್ಧಾರಮಾಡಿದ ಕ್ರೈಸ್ತ, ಮಹಮದ್, ಬುದ್ಧ ಮುಂತಾದ ಪ್ರವಾದಿಗಳ ಸಾಲಿನಲ್ಲಿ ಬಾಪೂಜಿಯವರೂ ಸೇರುತ್ತಾರೆ. ನಾವು ಅವರ ಶರೀರವನ್ನು ಕೊಂದೆವು. ಆದರೆ ಅವರ ಆತ್ಮವು ದಿವ್ಯ ಜ್ಯೋತಿಯಾಗಿ ಜಗತ್ತಿನಲ್ಲಿ ಬೆಳಗುತ್ತಲಿದೆ. ಎಣಿಸಲಾಗದ ಜನಾಂಗದ ಭವ್ಯ ಬಾಳಿನ ಬೆಳಕಾಗಿ ಆಯಾ ಕಾಲಕ್ಕೆ ಆಕಾಶದ ತಾರೆಗಳಂತೆ ಸ್ಥಿರವಾಗಿ ಪ್ರಕಾಶಿಸುತ್ತಿರುತ್ತದೆ." ಎಂದು ಹೇಳಿ ತಮ್ಮ ಉಪನ್ಯಾಸವನ್ನು ನಿಲ್ಲಿಸಿದರು. ಸತ್ತ ಮಹಾತ್ಮ ಗಾಂಧೀಜಿಯವರಿಗೆ ತಮ್ಮ ಅಂತ್ಯ ಗೌರವವನ್ನು ಸೂಚಿಸಲು ಆ ದಿನವೇ ಭಾರತಕ್ಕೆ ಹಿಂತಿರುಗಿದರು.

ಗಾಂಧೀಜಿಯವರ ವಿಷಯದಲ್ಲಿ ಸರ್ವಪಳ್ಳಿಯವರಿಗೆ ಮೊದಲಿನಿಂದಲೂ ಪೂಜ್ಯಭಾವನೆ ಹಾಗೂ ಅಪಾರ ಗೌರವವಿತ್ತು. ಅವರ ಸಾವಿನಿಂದ ಇವರ ಹೃದಯಕ್ಕಾದ ವ್ಯಥೆಯು ವರ್ಣನಾತೀತವಾದುದು. ಅವರಿಗೆ ಆತ್ಮಪೂರ್ವಕವಾಗಿ ಭಕ್ತಿಯನ್ನು ನಿವೇದಿಸಲು, ಅವರಿಗೆ ಅತ್ಯಂತ ಪ್ರಿಯವಾದ, ಅವರ ಬಾಳಿನ ಬೆಳಕಿನಂತಿದ್ದ. ಭಗವದ್ಗೀತೆಯನ್ನು ವ್ಯಾಖ್ಯಾನಮಾಡಿ, ವಿಮರ್ಶಿಸಿ, ಸತ್ತೂ ಅಮರರಾಗಿರುವ ಗಾಂಧೀಜಿಯವರಿಗೆ ನಿವೇದಿಸಿದರು.

ಪಂಚವೇದಗಳನ್ನು ಸಂಕಲನಮಾಡಿದ ವ್ಯಾಸರು ಮಹಾಭಾರತವನ್ನು ರಚಿಸಿದ್ದಾರೆ. ವೇದಗಳ ತತ್ವಗಳು ಸರ್ವರಿಗೂ ಸರಳವಾಗಿ ತಿಳಿಯದಿರಬಹುದು. ಎಂದರಿತೋ ಏನೋ, ವೇದಗಳ ತತ್ವಸಾರವನ್ನೇ ಐತಿಹಾಸಿಕ ಪಾತ್ರಗಳಿಗೆ ಮೆರುಗಿತ್ತು ಕಥೆಯನ್ನು ಹೆಣೆದು, ಭಾರತಕಥೆಯನ್ನು ರಚಿಸಿ, ಪುರಾಣವನ್ನಾಗಿ ಮಾಡಿದ್ದಾರೆ. ಭಾರತಕಥೆಯ ಮಧ್ಯದಲ್ಲಿ ಭೀಷ್ಮಪರ್ವ ಭೀಷ್ಮಪರ್ವದ ಮಧ್ಯದಲ್ಲಿ, ತಮ್ಮ ಅಮರ ಸಂದೇಶವನ್ನು ಸಾರಿದ್ದಾರೆ. ಇದೊಂದು ಮಹತ್ತರವಾದ ವೇದಾಂತಗಾನವಾಗಿದೆ,

ಅರ್ಜುನನು ಹುರುಪಿನಿಂದ ಯುದ್ಧಭೂಮಿಗೆ ಬರುತ್ತಾನೆ. ಶ್ರೀ ಕೃಷ್ಣನೇ ಅವನ ಸಾರಥಿ. ಯುದ್ಧರಂಗದಲ್ಲಿ ತನ್ನ ಎದುರಾಳಿಗಳಾಗಿದ್ದ ಬಂಧುಮಿತ್ರರರನ್ನು ಅರ್ಜುನನು ನೋಡುವನು. ಇವರನ್ನೆಲ್ಲಾ ಕೊಂದು ನಾನು ರಾಜ್ಯವಾಳಬೇಕೆ? ಇದರಿಂದ ನನಗೆಷ್ಟು ಪಾಪಬರುವುದು? ನಾನು ಯುದ್ಧವನ್ನು ಮಾಡುವುದಿಲ್ಲ, ಎಂದು ಕುಳಿತುಕೊಳ್ಳುವನು. ಇಲ್ಲಿನ ಅರ್ಜುನನ ದುಃಖವು ಸಾಮಾನ್ಯವಾದುದಲ್ಲ ಬಹು ಭಯಂಕರವಾದುದು ತಾನೇ ಆತ್ಮಹತ್ಯೆಯನ್ನು ಮಾಡಿಕೊಳ್ಳಬಹುದಾದ ಸೂಚನೆಯದು. ಅಂದರೆ ಅವನ ಮನಸ್ಸು ಅಜ್ಞಾನವೆಂಬ ಕಗ್ಗತ್ತಲಿನಲ್ಲಿ ಮುಳುಗಿತ್ತು. ಅಂತಹ ಸಮಯದಲ್ಲಿ ದಾರಿತೋರುವ ಬೆಳಕೊಂದು ಬೇಕು. ಆ ಬೆಳಕೇ ಶ್ರೀ ಕೃಷ್ಣನ ಉಪದೇಶ. ಶ್ರೀ ಕೃಷ್ಣನ ಬಾಯಿಂದ ತನ್ನ ಭವ್ಯ ಸಂದೇಶವನ್ನು ಜಗತ್ತಿಗೆ ಸಾರಲು ವ್ಯಾಸರು ನಿರ್ಮಿಸಿಕೊಂಡ ಸಂದರ್ಭವಿದು.

ಮಾನವ ದೇಹವು ಅಸ್ಥಿರವಾದುದು; ಆತ್ಮವು ಮಾತ್ರ ಸ್ಥಿರವಾಗುಳಿಯತಕ್ಕದ್ದು ಮುಪ್ಪು ಮತ್ತು ಸಾವುಗಳು ದೇಹವನ್ನು ಮುಟ್ಟುತ್ತವೆಯೇ ಹೊರತು ಆತ್ಮವನ್ನಲ್ಲ ಎಂಬುದನ್ನು ಶ್ರೀ ಕೃಷ್ಣನು ಬೋಧಿಸಿ, ಅರ್ಜುನನ ಜ್ಞಾನನೇತ್ರವನ್ನು ತೆರೆಸುತ್ತಾನೆ. ಕೌರವ ಮತ್ತು ಪಾಂಡವರ ಯುದ್ಧವು ದುಷ್ಟಶಕ್ತಿಗೂ ಸಚ್ಛಕ್ತಿಗೂ ನಡೆಯುವ ಹೋರಾಟ. ಕೌರವ ಪಾಂಡವರು ನಿಮಿತ್ತ ಮಾತ್ರರಷ್ಟೆ ಎಂಬುದನ್ನು ಶ್ರೀಕೃಷ್ಣನು ಅರ್ಜುನನಿಗೆ ಮನಸದಟ್ಟು ಮಾಡಿಸುತ್ತಾನೆ. ಸರ್ವಕ್ಕೂ ಪರಮಾತ್ಮನು ಹೊಣೆಗಾರನೆಂದು, ಭಗವಂತನ ಸ್ವರೂಪವನ್ನು ಪ್ರತ್ಯಕ್ಷೀಕರಿಸುತ್ತಾನೆ. ಇಲ್ಲಿ ಶ್ರೀಕೃಷ್ಣನು ಮಾನವನೇ ಹೊರತು ದೇವರಲ್ಲ. ಆದರೂ ದೇವರ ನುಡಿಯನ್ನು ಪ್ರತಿಧ್ವನಿಸುತ್ತಾನೆ.

ಮನುಷ್ಯನು ತನ್ನ ಆಧ್ಯಾತ್ಮಿಕ ಗುರಿಯನ್ನು ಸಾಧಿಸಲು ಜ್ಞಾನ, ಭಕ್ತಿ, ಮತ್ತು ಕರ್ಮಗಳೆಂಬ ಮುಖ್ಯವಾದ ಮೂರು ಮಾರ್ಗಗಳನ್ನು ಇಲ್ಲಿ ತಿಳಿಸಿದೆ. ಸಿರಿವಂತರು ಅಪಾರ ಹಣವನ್ನು ವೆಚ್ಚಮಾಡಿ ದೇಗುಲ, ಅನ್ನ ಛತ್ರ, ಮುಂತಾದುವನ್ನು ಕಟ್ಟಿಸಿ, ಅನೇಕ ದಾನಗಳನ್ನು ಮಾಡಿ ದೇವರನ್ನು ಸಾಕ್ಷಾತ್ಕರಿಸಿಕೊಳ್ಳಬಹುದು. ಸುಸಂಸ್ಕೃತರು ತಮ್ಮ ಜ್ಞಾನದಿಂದ ಪವಿತ್ರವಾದ ಯಜ್ಞ, ಯಾಗಾದಿಗಳನ್ನು ಮಾಡಿ ದೇವರ

ಸಾಕ್ಷಾತ್ಕಾರವನ್ನು ಪಡೆಯಬಹುದು. ಆದರೆ, ಗೀತೆಯಲ್ಲಿ ವ್ಯಾಸರು ಸರ್ವರಿಗೂ ಒಂದು ಸಮಾನವಾದ ಭಕ್ತಿಮಾರ್ಗವನ್ನು ದೇವರ ಸಾಕ್ಷಾತ್ಕಾರಕ್ಕೆ ತೋರಿದ್ದಾರೆ. ಇಲ್ಲಿ ಎಲ್ಲಕಿಂತಲೂ ಹೆಚ್ಚಾಗಿ ಕರ್ಮಕ್ಕೆ ಹೆಚ್ಚಿನ ಸ್ಥಾನವಿದೆ. ಮಾಡಬೇಕಾದ ಕರ್ತವ್ಯವ್ಯಾವುದಾದರೂ, ಗೀತೆಯು ಅದರ ಸಾಧನೆಗೆ ದಾರಿಯನ್ನು ತೋರುತ್ತದೆ. ನಿಷ್ಕಾಮ ಕರ್ಮಕ್ಕಿಂತ ಮಿಗಿಲಾದುದು ಮಾನವನಿಗೆ ಮತ್ತೊಂದಿಲ್ಲ. ಕರ್ಮದಲ್ಲಿ ಮುಖ್ಯವಾದುವು, ಯಜ್ಞ, ಧರ್ಮ ಮತ್ತು ತಪಸ್ಸು. ಯಜ್ಞವೆಂದರೆ ಮಾನವನು ದೇವರ ವಿಷಯದಲ್ಲಿ ಮಾಡು ಕರ್ತವ್ಯಗಳು. ಧರ್ಮವೆಂದರೆ ಮಾನವನು ತನ್ನ ಸಹಜೀವಿಗಳ ಕಷ್ಟಸುಖದಲ್ಲಿ ಮಾಡಬೇಕಾದ ಕರ್ತವ್ಯಗಳು. ತಪಸ್ಸೆಂದರೆ ಮಾನವನು ಆತ್ಮ ಸಾಕ್ಷಾತ್ಕರವನ್ನು ಹೊಂದಲು ಮಾಡುವ ಕರ್ತವ್ಯಗಳು, ಇವು ಮೂರು ನಿಷ್ಕಾಮಕರ್ಮದ ರೀತಿಗಳಾಗಿವೆ. ಎಂಬುದೇ ಗೀತೆಯ ಸಾರಸರ್ವಸ್ವವೆಂದು ಸರ್ವಪಳ್ಳಿಯವರು ಸಮರ್ಥಿಸುವರು.

ಶಂಕರಾಚಾರ್ಯ, ರಾಮಾನುಜಾಚಾರ್ಯ, ಮಧ್ವಾಚಾರ್ಯ ಮುಂತಾದ ಹಿಂದೂ ವೇದಾಂತಿಗಳ ಅಭಿಪ್ರಾಯದೊಡನೆ ಪಾಶ್ಚಾತ್ಯ ದಾರ್ಶನಿಕರ ಮತಗಳನ್ನು ಹೋಲಿಸಿ, ಉಪನಿಷತ್ತು, ನಾರದ ಸೂತ್ರ ಮತ್ತು ಪಂಚರಾತ್ರ ಇವುಗಳಲ್ಲಿನ ತತ್ವಗಳೊಡನೆ, ಆಧುನಿಕ ಪೌರ್ವಾತ್ಯ ಮತ್ತು ಪಾಶ್ಚಾತ್ಯ ದಾರ್ಶನಿಕರ ಅಭಿಪ್ರಾಯಗಳೊಡನೆ ತುಲನಾತ್ಮಕದೃಷ್ಟಿಯಲ್ಲಿ ಗೀತೆಯನ್ನು ವಿಮರ್ಶಿಸುತ್ತಾರೆ. ಇವರ ಅಭಿಪ್ರಾಯದಲ್ಲಿ ಗೀತೆಯು ಒಂದು ಮತದ ಅಥವಾ ಒಂದು ಜನಾಂಗದ ಗ್ರಂಥವಲ್ಲ. ಕೇವಲ ಹಿಂದೂ ಧರ್ಮವನ್ನೇ ಪ್ರತಿಪಾದಿಸುವುದಿಲ್ಲ. ವಿಶ್ವಧರ್ಮವನ್ನು ಸಾರುತ್ತದೆ. ಇದಕ್ಕೆ ಕಾಲ ಮತ್ತು ದೇಶಗಳ ಎಲ್ಲೆಯಿಲ್ಲ. ಎಲ್ಲಾ ಕಾಲಕ್ಕೂ ಎಲ್ಲಾ ಜನಾಂಗಕ್ಕೂ ಮಾರ್ಗದರ್ಶನವಾದುದು ಎಂದು ತಮ್ಮ ಆಳವಾದ ಜ್ಞಾನದಿಂದ ವಿವರವಾಗಿ ವಿಮರ್ಶಿಸುತ್ತಾರೆ. ಇಷ್ಟು ಸುಧೀರ್ಘವಾದ ವಿವರಣೆಯುನ್ನುಳ್ಳ ಭಗವದ್ಗೀತೆಯು ಈ ವಿಜ್ಞಾನ ಯುಗದಲ್ಲಿ ಮತ್ತೊಂದಿಲ್ಲವೆಂದೇ ಹೇಳಬೇಕಾಗುತ್ತದೆ.

ಅದೇವರುಷ ಸರ್ವಪಳ್ಳಿಯವರಿಗೆ ಅರವತ್ತು ವರುಷಗಳು ತುಂಬುವುದರಲ್ಲಿತ್ತು. ಅದರ ಗೌರವಾರ್ಥವಾಗಿ ತತ್ವಶಾಸ್ತ್ರದಲ್ಲಿ ರಾಧಾಕೃಷ್ಣನ್‌ರ

ತುಲನಾತ್ಮಕ ಅಭ್ಯಾಸ (Radha Krishnan's Comparative Studies in Philosophy) ಎಂಬ ಗ್ರಂಥವು ಇವರಿಗೆ ಅರ್ಪಿಸಲಟ್ಟಿತು. ಆ ಗ್ರಂಥದ ಸಂಪಾದಕ ಮಂಡಲಿಯು W. R. ಇಂಗೆ, ಎಲ್. ಪಿ. ಜಾಕ್ಸ್, ಪ್ರೊ॥ ಎಂ. ಹಿರಿಯಣ್ಣ, ಪ್ರೊ॥ ಇ. ಎ. ಬರ್ಟ್ಸ್ ಮತ್ತು ಪ್ರೊ॥ ಪಿ. ಟಿ. ರಾಜು ಎಂಬ ಮಹಾ ವಿದ್ವಾಂಸರುಗಳು.

ಈ ಗ್ರಂಥದಲ್ಲಿ ಸರ್ವಪಳ್ಳಿಯುವರು ತಮ್ಮ ಜೀವಿತ ಕಾಲದಲ್ಲಿ ಆಧ್ಯಾತ್ಮಿಕ ವಿಷಯುಗಳಲ್ಲಿ ಸಾಧಿಸಿರುವ ಕಾರ್ಯಗಳನ್ನೂ, ಅವುಗಳಲ್ಲಿ ಕಾಣುವ ವಿಶ್ವಧರ್ಮದ ವಿಷಯುವಾಗಿ ಚರ್ಚಿಸಿ ಉತ್ತಮ ಲೇಖನಗಳನ್ನು ಬರೆದಿದ್ದಾರೆ.

ರಾಧಾಕೃಷ್ಣನ್ನರು ಅದೇ ವರುಷ ಧರ್ಮಪದ ಎಂಬ ಬೌದ್ಧಧರ್ಮಕ್ಕೆ ಸಂಬಂಧಪಟ್ಟ ಮತ್ತೊಂದು ಉದ್ಗ್ರಂಥವನ್ನು ಬರೆದು ಜಗತ್ತಿಗೆ ನೀಡಿದರು ಇದರಲ್ಲಿ ಮಾನವನು ತನ್ನ ಆಧ್ಯಾತ್ಮಿಕ ಗುರಿಯಾದ ಮುಕ್ತಿಯನ್ನು ಸಾಧಿಸಲು ಬುದ್ಧನು ತಿಳಿಸಿರುವ ಎಂಟು ಹಂತಗಳನ್ನು ಆಧುನಿಕವಾಗಿ ವಿಮರ್ಶಾತ್ಮಕವಾಗಿ ವಿವೇಚಿಸಿದ್ದಾರೆ.

ಆದೇ ಸಮಯದಲ್ಲಿ ಇವರ ವಿಷಯುವಾಗಿ ಹೊರಟ ಮತ್ತೊಂದು ಗ್ರಂಥವೆಂದರೆ ಭಾರತದ ಗಣ್ಯರು (Great Indians) ಎಂಬುದು. ಇದರಲ್ಲಿ ಮಹಾತ್ಮಗಾಂಧಿ, ಶ್ರೀ ರಾಮಕೃಷ್ಣರು, ರವೀಂದ್ರನಾಥ ಠಾಗೂರರು ಮತ್ತು ರಾಧಾಕೃಷ್ಣನ್ನರು ಭಾರತೀಯರಿಗಾಗಿ ಮಾಡಿದ ಕಾರ್ಯಗಳು ತಿಳಿಸಲ್ಪಟ್ಟಿವೆ.

---

# ರಷ್ಯಾದ ರಾಯಭಾರಿಯಾಗಿ

ಭಾರತವು ಸ್ವಾತಂತ್ರ್ಯವನ್ನು ಪಡೆದಮೇಲೆ, ಇಲ್ಲಿಂದ ಇತರ ರಾಷ್ಟ್ರಗಳಿಗೆ ರಾಯಭಾರಿಗಳನ್ನು ಕಳುಹಿಸಿ ಕೊಡಬೇಕಾಯಿತು. ಇತರ ದೇಶಗಳಿಗಿಂತ ರಷ್ಯಾ ದೇಶಕ್ಕೆ ಕಳುಹಿಸುವ ರಾಯಭಾರಿಯು ಚತುರನೂ ಮೇಧಾವಿಯೂ ಆಗಬೇಕು. ರಷ್ಯಾದೇಶವು ಸಂಪೂರ್ಣವಾಗಿ ಕಮ್ಯೂನಿಸ್ಟ್ ಪಕ್ಷಕ್ಕೆ ಸೇರಿದುದು. ಭಾರತವು ಪಕ್ಷಾತೀತ ಆಡಳಿತವುಳ್ಳದ್ದು. ಇಂತಹ ಸಂಧಿಗ್ದ ಸ್ಥಿತಿಯಲ್ಲಿ ರಷ್ಯಾದ ರಾಯಭಾರಿಯಾಗಿ ಹೋಗಿ ಅವರ ಮಿತ್ರತ್ವವನ್ನು ಗಳಿಸುವುದು ಸಾಮಾನ್ಯ ವಿಷಯವಾಗಿರಲಿಲ್ಲ. ರಾಧಾಕೃಷ್ಣರ ಹೊರತು ಮತ್ತಾರೂ ಆ ಕಾರ್ಯವನ್ನು ಸುಗಮವಾಗಿ ನಿರ್ವಹಿಸಲಾರರೆಂಬ ನಂಬುಗೆಯು ದೇಶದ ಮುಖಂಡರಿಗೆ ಮೂಡಿತು.

1949ನೆಯ ಸೆಪ್ಟೆಂಬರ್ ತಿಂಗಳಲ್ಲಿ ಸರ್ವಪಳ್ಳಿಯವರನ್ನು ರಷ್ಯಾಕ್ಕೆ ರಾಯಭಾರಿಯಾಗಿ, ಭಾರತ ಸರ್ಕಾರವು ಕಳುಹಿಸಿತು. ಈ ಮೊದಲೇ ರಾಧಾಕೃಷ್ಣರ ಕೀರ್ತಿಯು ರಷ್ಯಾದಲ್ಲಿ ಹರಡಿತ್ತು. ಇವರು ಪೂರ್ವ ಮತ್ತು ಪಶ್ಚಿಮ ಧರ್ಮಗಳ ಪರಿಣಿತರೆಂದೂ, ಉತ್ತಮ ವಾಗ್ಮಿಗಳೆಂದೂ ರಷ್ಯಾ ಜನತೆಯು ತಿಳಿದಿತ್ತು. ಕಾರ್ಲಮಾರ್ಕ್ಸ್, ಏಂಜಲ್ಸ್ ಮತ್ತು ಲೆನಿನ್ ಮುಂತಾದ ರಷ್ಯನರ ವಾದಗಳನ್ನು ರಷ್ಯನರಿಗಿಂತಲೂ ಹೆಚ್ಚಾಗಿ ತಿಳಿದಿರುವರೆಂದು ನಂಬಿದ್ದರು. ನಾನಾ ಧರ್ಮಗಳ, ನಾನಾ ರಾಜಕೀಯಗಳ ತುಲನಾತ್ಮಕದೃಷ್ಟಿಯಿಂದ ಒಂದು ಸಾಮ್ಯವನ್ನು ತೋರಬಲ್ಲರೆಂಬ ನಂಬಿಕೆಯು ಅವರಿಗಿತ್ತು.

ಆಗ ರಷ್ಯಾದಲ್ಲಿ ಸ್ಟಾಲಿನ್‌ರವರ ಅಧಿಕಾರ. ಅವರು ಯಾವ ರಾಯಭಾರಿಗೂ ಬೇಟಿಗೆ ಅವಕಾಶವನ್ನು ಸಾಮಾನ್ಯವಾಗಿ ಕೊಡುತ್ತಿರಲಿಲ್ಲ. ಪ್ರೊ॥ ರಾಧಾಕೃಷ್ಣನ್ನರ ವಿಷಯದಲ್ಲಿ ಸ್ಟಾಲಿನ್ನರು ಅನೇಕ ವಿಷಯಗಳನ್ನು ಕೇಳಿದ್ದರು. ಪಾಶ್ಚಾತ್ಯ ಪತ್ರಿಕೆಗಳಲ್ಲಿ ಇವರ ವಿಶ್ವಮಾನವೀಯತೆಯ ಭಾವನೆ, ವಿಶ್ವಧರ್ಮದ ಅಗತ್ಯವನ್ನು ಸಾರಿದರೀತಿ, ಹಾಗೂ ಉತ್ತಮ ಉಪಾಧ್ಯಾಯರೆಂಬ ಕೀರ್ತಿ ಮುಂತಾದ ನಾನಾ ಮುಖದ ಇವರ ಪ್ರತಿಭೆ

ಯನ್ನು ಓದಿ ತಿಳಿದಿದ್ದರು. ದಿನದ ಬಹುಭಾಗವನ್ನೆಲ್ಲಾ ಓದುವುದರಲ್ಲೇ ಕಳೆಯುತ್ತಾರೆಂಬ ವದಂತಿಯುಂತೂ ಆಶ್ಚರ್ಯಕರವಾಗಿತ್ತು. ಅಂತಹ ವಿದ್ವಾಂಸರನ್ನು ಒಮ್ಮೆಯಾದರೂ ಭೇಟಿ ಮಾಡಲೇಬೇಕೆಂಬ ಅಪೇಕ್ಷೆ ಅವರಿಗೆ ಉಂಟಾಯಿತು. ಸರ್ವಪಳ್ಳಿಯುರಂತು ತಾವಾಗಿ ಯಾರೊಡನೆಯೂ ಮಾತನಾಡುವ ಸ್ವಭಾವದವರಲ್ಲ. ಸ್ಟಾಲಿನ್ನರೇ ಸರ್ವಪಳ್ಳಿಯುವರಿಗೆ ಆಹ್ವಾನ ನೀಡಿದರು

ಸ್ಟಾಲಿನ್ನರು ವಾಸವಾಗಿದ್ದ ಕ್ರೆಮ್ಲಿನ್ ಭವನಕ್ಕೆ ರಾಧಾಕೃಷ್ಣರು ಹೊದರು. ಸ್ಟಾಲಿನ್ನರಿಗೆ ಆಗ ತಿಳಿಯಿತು. ರಾಧಾಕೃಷ್ಣರ ವ್ಯಕ್ತಿತ್ವ! ನಿರಾಡಂಬರ ವ್ಯಕ್ತಿ! ಸರ್ವರನ್ನೂ ಆಕರ್ಷಿಸುವ ಕಣ್ಣಿನ ಹೊಳಪು! ಸದಾ ಅರಳಿದ ಮುಖ! ಬಾಯಿತೆರೆದರೆ ಕಂಚಿನಂತಹ ಶಬ್ದ! ಪ್ರತಿಯೊಂದು ಮಾತೂ ಅರ್ಥಗರ್ಭಿತವಾಗಿ, ಭಾವಪೂರ್ಣವಾಗಿ ತಕ್ಕಡಿಯಿಂದ ತೂಗಿ ತೆಗೆದಂತೆ ನಿರ್ದಿಷ್ಟಾರ್ಥವುಳ್ಳವು! ಸರಿ, ಅಂದಿನಿಂದ ಸ್ಟಾಲಿನ್ ಮತ್ತು ಸರ್ವಪಳ್ಳಿಯುವರ ಸ್ನೇಹಾಂಕುರವಾಯಿತು. ಆಗಾಗ ರಾಧಾಕೃಷ್ಣರನ್ನು ಸ್ಟಾಲಿನ್ನರು ಬರಮಾಡಿಕೊಳ್ಳುತ್ತಿದ್ದರು. ಭೇಟಿಯಾದಾಗ ರಾಜಕೀಯವಾಗಿ, ಧಾರ್ಮಿಕವಾಗಿ, ಆರ್ಥಿಕವಾಗಿ, ಸಾಮಾಜಿಕವಾಗಿ ಮತ್ತು ತಾತ್ವಿಕವಾಗಿ ವಿಷಯುಗಳನ್ನು ಚರ್ಚಿಸುತ್ತಿದ್ದರು.

ಇದರಿಂದ ಭಾರತ ಮತ್ತು ರಷ್ಯಾದ ಮಿತ್ರತ್ವವು ಮತ್ತಷ್ಟು ಗಾಢವಾಯಿತು. ಭಾರತಕ್ಕೆ ರಷ್ಯಾದ ಸಹಾಯುವು ಬಹಳವಾಗಿ ದೊರೆಯಿತು. ಅಲ್ಲಿನ ಸಾಹಿತ್ಯವು ಭಾರತಕ್ಕೂ, ಭಾರತದ ಸಾಹಿತ್ಯವು ರಷ್ಯಾಕ್ಕೂ ವಿನಿಮಯುವಾದುವು. ಆಧುನಿಕ ಬೇಸಾಯುದ ಮುಟ್ಟುಗಳನ್ನೂ, ಅನೇಕ ಯುಂತ್ರಗಳನ್ನೂ ಭಾರತಕ್ಕೆ ಸಹಾಯು ರೂಪದಲ್ಲಿ ರಷ್ಯಾದೇಶವು ಕೊಡಲು ಒಪ್ಪಿತು.

ಸರ್ವಪಳ್ಳಿಯುವರೇ ಒಂದುಕಡೆ "ನಾನು ರಾಜಕಾರಣಿಯುಲ್ಲ. ಆದರೂ ಮಾನವೀಯುತೆಯಿಂದ, ವಿಶ್ವಾಸಪೂರ್ವಕವಾಗಿ, ರಾಯುಭಾರಿಯ ಕಾರ್ಯವನ್ನು ಸುಸೂತ್ರವಾಗಿ ಸಾಧಿಸಿದೆ. ರಷ್ಯಾದಲ್ಲಿ ನನಗೆ ಯಾವ ತೊಂದರೆಗಳೂ ಆಗಲಿಲ್ಲ" ಎನ್ನುತ್ತಾರೆ.

ಮಿಶ್ರೊಮೆಸ್ಮ್ರ ಉಪನ್ಯಾಸ ಮಾಡುತ್ತಾ ರಷ್ಯನರಿಗೆ ಹೀಗೆ ಹೇಳುತ್ತಾರೆ "ಹೊರಗಿನ ಪ್ರಪಂಚದಲ್ಲಿ ನಿಮ್ಮ ರಾಜನೀತಿಯ ಬಗೆಗೆ ಭಯವಿದೆ. ಆದರೆ, ಭಯಪಡಬೇಕಾದ ಕಾರಣವೇನೂ ನಿಮ್ಮಲ್ಲಿ ಕಾಣದು. ಬೇರೆ ಪ್ರಪಂಚಕ್ಕೂ ನಿಮಗೂ ಬೇರ್ಪಡಿಸಬಲ್ಲ ಕಬ್ಬಿಣದ ತೆರೆಯನ್ನು ನಾನು ಕಾಣಲಿಲ್ಲ".

ನಮ್ಮ ಭಾರತದ ಪಂಚಶೀಲಗಳಿಗೆ ರಷ್ಯಾಜನತೆ ಹಾಗೂ ಸರ್ಕಾರವು ಒಪ್ಪಿಗೆಯನ್ನು ನೀಡಿದೆ. ಅದಕ್ಕೆ ದ್ವಿತೀಯ ಮಹಾಯುದ್ಧದಿಂದಾದ ಇಪ್ಪತ್ತುಲಕ್ಷ ಪ್ರಾಣಹಾನಿಯಾಗಲೀ, ಅಪಾರವಾದ ಸಂಪತ್ತಿನ ನಷ್ಟ ವಾಗಲೀ ಕಾರಣವಲ್ಲ. ರಾಧಾಕೃಷ್ಣನ್ನರು ಕಮ್ಯೂನಿಷ್ಟ್ ತತ್ವದಲ್ಲಿಯ, ಲೆನಿನ್‌ರವರ ಅಭಿಪ್ರಾಯದಲ್ಲಿಯ ಮತ್ತು ಮಾರ್ಕ್ಸ್‌ವಾದದಲ್ಲಿಯ ಶಾಂತಿ ಗಿದ್ದ ಮಹತ್ವವನ್ನು ಜನತೆಗೆ ತೋರಿಸಿಕೊಟ್ಟದ್ದೇ ಮುಖ್ಯವಾದ ಕಾರಣ.

ಭಿಲಾಯಿ ಉಕ್ಕಿನ ಕಾರ್ಖಾನೆಯು ಮತ್ತು ರಾಂಚಿ ಮುಂತಾದ ಕಡೆ ಗಳಲ್ಲಿರುವ ಯಂತ್ರಗಳೂ ಅಲ್ಲದೆ ಕಲ್ಲಿದ್ದಲನ್ನು ತೆಗೆಯುವ ಭಾರಿ ಯಂತ್ರ ಗಳು ರಷ್ಯಾದಿಂದ ಭಾರತಕ್ಕೆ ಬಂದುದಕ್ಕೂ, ದುರ್ಗಾಪುರ ಮುಂತಾದ ಕಡೆಗಳಲ್ಲಿರುವ ಕೈಗಾರಿಕೆಗಳಿಗೆ ರಷ್ಯಾ ಸರ್ಕಾರದ ಸಹಾಯವು ದೊರೆ ಯುವುದಕ್ಕೂ, ಸರ್ವಪಳ್ಳಿಯವರು ರಷ್ಯಾದಲ್ಲಿದ್ದಾಗ ಮಾಡಿದ್ದ ಅಡಿ ಪಾಯವೆ ಮುಖ್ಯ ಕಾರಣವೆಂದು ಹೇಳಬಹುದು.

ಇಷ್ಟಾದರೂ ಇವರು ಭಾರತದ ಧ್ಯೇಯವನ್ನು ಮಾತ್ರ ಬಿಟ್ಟುಕೊಡು ತ್ತಿರಲಿಲ್ಲ. ರಷ್ಯಾ ಮತ್ತು ಭಾರತಕ್ಕೂ ಕೆಲವು ಭಿನ್ನಭಿನ್ನ ಅಭಿರುಚಿ ಗಳಿವೆ. ಅದನ್ನೇ ಅವರು ಹೇಳುತ್ತಾರೆ. ನಮ್ಮ ದೇಶದ ಸಮಾಜವನ್ನು ಸಮಾಜವಾದದ ರೀತಿಯಲ್ಲಿ ಕಟ್ಟುವ ಮಹತ್ಕಾರ್ಯದಲ್ಲಿ ನಾವು ತೊಡಗಿ ದ್ದೇವೆ. ನಮ್ಮ ಸ್ವಭಾವಕ್ಕನುಗುಣವಾದ, ನಮ್ಮ ಹಿನ್ನಲೆ ಮತ್ತು ಪರಂಪರೆ ಗನುಗುಣವಾದ ರೀತಿಯಲ್ಲಿ ಪ್ರಜಾಪ್ರಭುತ್ವವನ್ನು ಹೊಂದಿದ್ದೇವೆ. ಈ ಪುನರ್ನಿರ್ಮಾಣ ಕಾರ್ಯವು ಫಲಿಸಬೇಕಾದರೆ ವಿಶ್ವದಲ್ಲಿ ಶಾಂತಿ ನೆಲಸ ಬೇಕಾಗಿದೆ.

ರಷ್ಯಾದಲ್ಲಿ ಭಾರತದ ರಾಯಭಾರಿಯಾಗಿ ಕೆಲಸ ಮಾಡುತ್ತಾ ಬಿಡು ವಿನಲ್ಲಿ ವೇದಾಂತ ವಿಷಯಗಳನ್ನು ಜಗತ್ತಿಗೆ ಸಾರುತ್ತಲೂ, ಗ್ರಂಥಗಳನ್ನು

ರಚಿಸುತ್ತಲೂ, ಇದ್ದರು. ಇದರಿಂದ ಸರ್ವಪಳ್ಳಿಯವರು ಕೇವಲ ದಾರ್ಶನಿಕರಲ್ಲ. ಪುಸ್ತಕದ ಕೀಟವೂ ಅಲ್ಲ. ಕೇವಲ ವಾಗ್ಝಾಲದಲ್ಲಿ ಜನತೆಯನ್ನು ಮರುಳುಗೊಳಿಸುವ ಮಾಂತ್ರಿಕರೂ ಅಲ್ಲ. ವಿಶ್ವಧರ್ಮದಲ್ಲಿ ನಿಷ್ಠೆಯುಳ್ಳ, ಉತ್ತಮ ರಾಜಕಾರಿಣಿಗಳೂ ಅಹದು! ಎಂಬ ಕೀರ್ತಿಯನ್ನು ಗಳಿಸಿದರು, ರಷ್ಯಾದಲ್ಲಿ ರಾಯಭಾರಿಯಾಗಿದ್ದ ಎರಡು ವರ್ಷಗಳನ್ನು ಸಾರ್ಥಕಗೊಳಿಸಿ, ಸೋವಿಯಟ್ ನಾಯಕರ ಪ್ರೀತಿಗೆ, ವಿಶ್ವಾಸಕ್ಕೆ ಪಾತ್ರರಾಗಿ, ರಾಯಬಾರತ್ವವನ್ನು ಬಹಳ ಯಶಸ್ವಿಯಾಗಿ ನಿರ್ವಹಿಸಿ 1952ನೆಯ ಏಪ್ರಿಲ್‌ನಲ್ಲಿ ಭಾರತಕ್ಕೆ ಹಿಂತಿರುಗಿದರು.

## ಪ್ರಧಾನ ಉಪನಿಷತ್ತುಗಳು

ಸರ್ವಪಳ್ಳಿಯವರು ಮಾಸ್ಕೋದಲ್ಲಿ ರಾಯಭಾರಿಯಾಗಿದ್ದಾಗ, ಬಿಡುವಿನ ವೇಳೆಯಲ್ಲಿ ಮುಖ್ಯ ಉಪನಿಷತ್ತುಗಳು (The Principal Upanishads) ಎಂಬ ಗ್ರಂಥವನ್ನು ಬರೆದು ಮುಗಿಸಿದರು. 108 ಉಪನಿಷತ್ತುಗಳ ಪೈಕಿ ಬಹುಮುಖ್ಯವಾದ, ಈಶಾವಾಸ, ಕೇನ, ಕಠ, ಪ್ರಶ್ನಾ ಮುಂಡೂಕ, ಮಾಂಡೂಕ, ತೈತ್ತರೀಯ, ಛಾಂದ್ಯೋಗ, ಬೃಹದಾರಣ್ಯ ಮತ್ತು ಐತರೇಯ ಎಂಬ ಹತ್ತು ಉಪನಿಷತ್ತುಗಳನ್ನು ಹೆಚ್ಚಾಗಿ ವಿವರಿಸಿದ್ದಾರೆ. ಈ ಗ್ರಂಥವು 1951ರಲ್ಲಿ ಮಾಸ್ಕೋನಗರದಲ್ಲಿಯೇ ಪ್ರಕಟವಾಯಿತು

ರವೀಂದ್ರನಾಥ ಠಾಗೂರರು ಜೀವಂತವಾಗಿದ್ದಾಗಲೇ ಸಂಸ್ಕೃತದ ಉಪನಿಷತ್ತುಗಳನ್ನು ಆಂಗ್ಲಬಾಷೆಗೆ ತರ್ಜುಮೆ ಮಾಡಿದ್ದರು. ಅದರ ವಿಷಯವಾಗಿ ಠಾಗೂರರು ಬಹಳ ಮೆಚ್ಚಿದ್ದರು. ರಾಧಾಕೃಷ್ಣರ ಬಾಷಾ ಶೈಲಿಗೆ ಮಾರುಹೋಗಿದ್ದರು. "ನಿಮ್ಮ ಮಾತು ಅತ್ಯಾಶ್ಚರ್ಯಕರವಾದ ವರವಾಗಿದೆ. ಜೊತೆಗೆ ನಿಮ್ಮ ಆಲೋಚನೆಗಳು ಅಚ್ಚ ಹೊಸದಾದುವುಗಳು" ಎಂದು ಹೊಗಳಿದ್ದರು. ಈಗ ಅದೇ ಉಪನಿಷತ್ತುಗಳನ್ನು ಪೂರ್ಣವಾಗಿ ಬೆಳೆದ ತಮ್ಮ ಜ್ಞಾನದಿಂದ ವಿವರಿಸುತ್ತಾರೆ.

ನಮಗಿಂತಲೂ ಹೆಚ್ಚಿನ ಜ್ಞಾನವುಳ್ಳ ಲಕ್ಷಾಂತರ ಮಂದಿಯ ನಂಬುಗೆಯ ಅಧಾರದಮೇಲೆ ಉಪನಿಷತ್ತುಗಳು ನಿರ್ಮಾಣವಾಗಿವೆ. ಇವುಗಳ

ಇತಿಹಾಸಕ್ಕಿಂತಲೂ ಪುಣ್ಯಕರವಾದುದು ಮತ್ತೊಂದಿಲ್ಲವೆಂದು ಇವರ ಭಾವನೆ. ಏನಿಲ್ಲವೆಂದರೂ ಉಪನಿಷತ್ತುಗಳ ನೆನಪು ನಮ್ಮಗಳ ಸಭ್ಯತೆಗೆ ದಾರಿ ತೋರುತ್ತಿರುತ್ತವೆ. ನಮ್ಮ ಸಂಪ್ರದಾಯದ ಹಾಗೂ ಜೀವನದ ಮುಖ್ಯಪಥವನ್ನು ನೋಡಿದರೆ, ವೇದ, ಉಪನಿಷತ್ತು, ಭಗವದ್ಗೀತೆ ಮತ್ತು ದಮ್ಮಪದ ಮುಂತಾದುವುಗಳಲ್ಲಿ ಹೇಗೆ ಸುಧಾರಣೆಯನ್ನು ಹೊಂದುತ್ತದೆ ಎಂಬ ವಿಷಯವು ತಿಳಿಯುತ್ತದೆ.

ಪ್ರಪಂಚದ ತಾತ್ವಿಕ ವಿವರಣೆಯಲ್ಲಿ ಕಾಮಾಸಕ್ತಿ, ಅತ್ಯಾಶೆ ಮುಂತಾದುವುಗಳಿಗೆ ಅವಕಾಶವಿಲ್ಲ. ಅವುಗಳಿಂದ ಸಾಧ್ಯವಾದಷ್ಟು ಬಿಡುಗಡೆಯನ್ನು ಹೊಂದಲು ಪ್ರೇರೇಪಿಸುತ್ತದೆ. ಉಪನಿಷತ್ತುಗಳ ಅಧ್ಯಯನದಿಂದ ನಾವು ಆಧ್ಯಾತ್ಮಿಕ ಕುತೂಹಲವನ್ನು ಕಾಣುತ್ತೇವೆ. ಕೇವಲ ನಮ್ಮ ಬುದ್ಧಿಗೆ ಜ್ಞಾನವನ್ನು ಕೊಡುವುದು ಮಾತ್ರ ಉಪನಿಷತ್ತುಗಳ ಗುರಿಯಲ್ಲ. ನಮ್ಮ ಹೃದಯಗಳನ್ನು ಮಾರ್ಪಡಿಸುವುದಾಗಿ ಕಾಡಿನ ಮಧ್ಯದಲ್ಲಿ ಮುನಿಪುಂಗವರು ಶಿಷ್ಯರನ್ನು ಹತ್ತಿರ ಕೂರಿಸಿಕೊಂಡು ಆತ್ಮೀಯವಾಗಿ ಉಪದೇಶಮಾಡಿದ ಭಾಗಗಳಿವು.

ವೇದಗಳ ವಿವರಣೆಯನ್ನು ಮಾಡುತ್ತಾ ಋಗ್ವೇದದಲ್ಲಿ 10,017 ದೇವರ ಕೀರ್ತನೆಗಳಿವೆ. ಅವುಗಳನ್ನು ಹತ್ತು ಭಾಗಗಳನ್ನಾಗಿ ವಿಂಗಡಿಸಿದ್ದಾರೆ. ಆಗಿನಕಾಲದ ಮಾನವನ ಮತಿಯು ಸೃಷ್ಟಿಯಲ್ಲಿ ಕಾಣುತ್ತಿದ್ದ ಮಹಿಮೆಗಳಿಗನುಗುಣವಾಗಿ ದೇವರುಗಳ ಹೆಸರುಗಳನ್ನು ಸೃಷ್ಟಿ ಮಾಡಲಾರಂಭಿಸಿತು. ಅದೇ ಕಾಲದಲ್ಲಿ ಬೇರೆ ಬೇರೆ ದೇಶಗಳಲ್ಲಿನ ಜನತೆಯ ಮನೋಭಾವನೆಯು ದೇವರುಗಳ ಕಲ್ಪನೆಯಲ್ಲಿ ತೊಡಗಿತ್ತು. ಎಂದುಹೇಳಿ ಆಗಿನ ಭಾರತದಲ್ಲಿ ಮತ್ತು ಪರದೇಶಗಳಲ್ಲಿ ರೂಢಿಯಲ್ಲಿದ್ದ ದೇವರುಗಳ ಸಾಮ್ಯವನ್ನು ಈ ಗ್ರಂಥದಲ್ಲಿ ತೋರುವರು.

ಉಪನಿಷತ್ತುಗಳಲ್ಲಿ ಋಗ್ವೇದ, ಯಜುರ್ವೇದ ಸಾಮವೇದ ಮತ್ತು ಅಥರ್ವಣ ವೇದಗಳ ಪ್ರತಿಬಿಂಬವನ್ನು ತೋರುವರು ಅನಂತರ ಬ್ರಾಹ್ಮಣಗಳು ಮತ್ತು ಆರಣ್ಯಕಗಳನ್ನು ತಿಳಿಸಿ, ಅವುಗಳು ಉಪನಿಷತ್ತುಗಳಿಗೆ ಹೇಗೆ ಸಹಕಾರಿಯಾಗಿವೆ ಎಂಬ ವಿಷಯಗಳನ್ನು ವಿವರಿಸುವರು,

ಆಧ್ಯಾತ್ಮಿಕ ಪ್ರವೃತ್ತಿಗಳಿಗನುಗುಣವಾಗಿ ವೈದಿಕ ಮತದಲ್ಲಿ ದೇವತ್ವ ಕಲ್ಪನೆಗಳ ಅನೇಕ ಹೆಸರುಗಳ ನಂಬುಗೆಯು, ಉಪನಿಷತ್ತುಗಳಲ್ಲಿ ಬೆಳೆದು ಹೋದುವು. ಅವರವರು ವಾಸಿಸುತ್ತಿದ್ದ ಪ್ರದೇಶಕ್ಕನುಗುಣವಾಗಿ ದೇವರುಗಳ ಬಯಕೆಯು ಉಂಟಾಯಿತು. ಅದರಿಂದ ನಮ್ಮಲ್ಲಿ ನಾನಾ ದೇವರುಗಳ ಹೊಸ ಹೆಸರುಗಳನ್ನು ಸೃಷ್ಟಿಸುವುದು, ಮತ್ತು ಇದ್ದ ದೇವರುಗಳನ್ನು ಹೊರ ದೂಡುವುದು, ಪ್ರಾರಂಭವಾಯಿತು. ಎಲ್ಲಾ ಆಧ್ಯಾತ್ಮಿಕ ಅಭಿವೃದ್ಧಿಯು ಅಪೂರ್ಣ ಜ್ಞಾನದಿಂದ ಪೂರ್ಣವಾದ ಸ್ಪಷ್ಟವಾದ ಜ್ಞಾನೋದಯಕ್ಕಾಗಿ ಬೆಳೆಯಿತು. ಧಾರ್ಮಿಕ ಅನುಭವಗಳು ದೈವೀಕ ಭಾವನೆಗಳಿಗೆ ಚಿಹ್ನೆಗಳಾದುವು ಎಂಬ ವಿಷಯುಗಳನ್ನು ತಿಳಿಸುವರು.

ಅನಂತರ ಎಲ್ಲಾ ಬ್ರಾಹ್ಮಣಗಳನ್ನೂ ಪಕ್ಷಿನೋಟದಂತೆ ಸೂಚಿಸಿ ಅನಂತರ ಆತ್ಮವೆಂಬರೇನು? ಎಂಬುದನ್ನು ವಿವರಿಸುವರು.

ಅವಿದ್ಯೆಯು ಸ್ವಾರ್ಥತೆಯನ್ನು ಹುಟ್ಟಿಸಿ ಹೃದಯಕ್ಕೊಂದು ತೊಡಕಾಗುತ್ತದೆ. ನಮ್ಮ ಹೃದಯ ಮಂದಿರದಲ್ಲಿ ಸತ್ಯತೆಯು ಸ್ವಸ್ಥಾನವನ್ನು ಪಡೆಯುವ ಮೊದಲೇ ನಮಗೆ ಬಿಡಿಸಲಾರದ ತೊಡಕಾಗುತ್ತದೆ. ಸತ್ಯತೆಯನ್ನು ಒತ್ತಾಯದಿಂದಾಗಲೀ ಚತುರತೆಯಿಂದಾಗಲೀ ಅಥವಾ ಹೆಚ್ಚು ಕಲಿಯುವುದರಿಂದಾಗಲೀ ಹೊಂದಲು ಸಾಧ್ಯವಿಲ್ಲ. ಆದರೆ ಯಾವನು ಮನಸ್ಸಿನಲ್ಲಿ ವಿಷಯಾಸಕ್ತಿಯ ನಿರ್ಲಿಪ್ತತೆಯನ್ನು ಹೊಂದಿರುವನೋ ಅಂತಹ ಆಕಾಂಕ್ಷಿಗೆ ಅದು ವ್ಯಕ್ತವಾಗುತ್ತದೆ ಪರಿಶ್ರಮದ ಪ್ರಯತ್ನದ ಫಲವಾಗಿ ದೇವರ ನೋಟವು ದಿವ್ಯಾನುಗ್ರಹವಾಗುವುದು.

ಮನುಷ್ಯನು ದೇವರ ಮತ್ತು ಪ್ರಕೃತಿಯ ಮಧ್ಯಸ್ಥ. ಬುದ್ಧಿಯ ಮೆರುಗಿನಿಂದ ಅವನು ತಾನೇ ಸೃಷ್ಟಿಸಿಕೊಂಡ ಕೆಲಸಗಳನ್ನು ಪೂರೈಸುತ್ತಾನೆ.

ಉಪನಿಷತ್ತುಗಳು ಪ್ರಪಂಚದ ಚೈತನ್ಯದ ವೈಚಿತ್ರವನ್ನು ನಮಗೆ ಬೋಧಿಸುವ ಬಹು ಪುರಾತನವಾದ ಆಧಾರ ಸಾಹಿತ್ಯವಾಗಿವೆ. ಅವು ನಾನಾ ಕಾಲದ ನಾನಾರೀತಿಯ ಜ್ಞಾನಿಗಳ ಬಾಯಿಗಳಿಂದ ಹಾದು ಬಂದಿರತಕ್ಕವುಗಳು. ಪರಮಾವಧಿಯ ಜ್ಞಾನದ ಸತ್ಯವು ಒಂದೇ ಆದರೂ, ನಾನಾರೀತಿಯಲ್ಲಿ ರೂಪದಲ್ಲಿ ಪ್ರಕಾಶಿಸುತ್ತದೆ. ಪ್ರತಿಯೊಂದು ಪೀಳಿಗೆಯೂ

ತಮ್ಮ ತಮ್ಮ ಕಾಲದ ಘಟನೆಗಳಿಂದ ಅಲ್ಪಸ್ವಲ್ಪ ಹೆಚ್ಚಿನ ತಿಳಿವಳಿಕೆಯನ್ನು ಪಡೆದಿರುತ್ತದೆ. ನಮ್ಮ ಪೀಳಿಗೆಯು ಪರಿಶುದ್ಧವಾದ ಆಳವಾದ ಜ್ಞಾನವುಳ್ಳ ಏಕೈಕ ಧರ್ಮವೊಂದನ್ನು ಹುಡುಕುತ್ತಿದೆ. ಅದಕ್ಕನುಗುಣವಾದ ಇಡೀ ಜಗತ್ತಿನ ಜನಾಂಗವನ್ನೆಲ್ಲಾ ಒಂದಾಗುವಂತೆ ಬಿಗಿಯುವ ವಿಶಾಲಭಾವನೆಗಳು ನಮ್ಮ ಉಪನಿಷತ್ತುಗಳಲ್ಲಿವೆ. ಎಂಬುದನ್ನು ಈ ಗ್ರಂಥದಲ್ಲಿ ಸ್ಪಷ್ಟಪಡಸಿದ್ದಾರೆ.

---

# ಭಾರತದ ಉಪರಾಷ್ಟ್ರಪತಿಯಾಗಿ

ವಿಶಾಲ ಭಾರತದ ಮೇಲ್ವಿಚಾರಣೆಯನ್ನು ರಾಷ್ಟ್ರಪತಿಯೊಬ್ಬರು ನಿರ್ವಹಿಸುವುದು ಕಷ್ಟಸಾಧ್ಯ. ದೇಶದ ಅಭಿವೃದ್ಧಿಗಾಗಿ ಏರ್ಪಡಿಸಿದ ಪಂಚವಾರ್ಷಿಕ ಯೋಜನೆಗಳ ಕಾರ್ಯಭಾರವು ಹೆಚ್ಚಿತು. ಪರದೇಶ ಗಳಿಂದ ಆಗಾಗ ಬರುತ್ತಿರುವ ಅತಿಥಿಗಳನ್ನು ಅವರವರ ಯೋಗ್ಯತಾನುಸಾರ ಸತ್ಕರಿಸುವ ಕರ್ತವ್ಯವು ಹೆಚ್ಚಾಗುತ್ತಾ ಬಂದಿತು ಈ ಕಾರಣಗಳಿಂದ ದೇಶಕ್ಕೆ ಉಪರಾಷ್ಟ್ರಪತಿಯ ಸ್ಥಾನವು ಅನಿವಾರ್ಯವಾಯಿತು. ಆ ಸ್ಥಾನಕ್ಕೆ ಸರ್ವರಂಗದಲ್ಲೂ ಪರಿಣಿತರಾದ ರಾಧಾಕೃಷ್ಣನ್‌ರವರು ಅವಿರೋಧವಾಗಿ ಆಯ್ಕೆಯಾದರು. ಭಾರತದ ಉಪರಾಷ್ಟ್ರಪತಿಗಳಲ್ಲಿ ಇವರೇ ಮೊದಲಿಗರು. ಇವರ ಚುನಾವಣೆಗೆ ಡಾ॥ ರಾಜೇಂದ್ರಪ್ರಸಾದ್, ಜವಹರಲಾಲ್ ನೆಹರೂ ಮತ್ತಿತರ ಮುಂದಾಳುಗಳಿಗೆ ಇವರಲ್ಲಿದ್ದ ಪ್ರೀತಿ ಗೌರವಗಳೇ ಕಾರಣ. ಡಾ॥ ರಾಧಾಕೃಷ್ಣನ್‌ರವರು 1952ನೇ ಅಕ್ಟೋಬರ್ ತಿಂಗಳಲ್ಲಿ ಅಧಿಕಾರ ವನ್ನು ಸ್ವೀಕರಿಸಿದರು. ಭಾರತವು ಸರ್ವಧರ್ಮಗಳ ತೌರು. ಇಂತಹ ರಾಷ್ಟ್ರಕ್ಕೆ ವಿಶ್ವವಿಖ್ಯಾತ ದಾರ್ಶನಿಕರೊಬ್ಬರು ಉಪರಾಷ್ಟ್ರಪತಿಯಾದುದು, ವಿಶ್ವದ ವೈಶಿಷ್ಟ್ಯವೆಂದೇ ಹೇಳಬೇಕು.

ಅದೇವರುಷ ವಿಶ್ವದಾರ್ಶನಿಕ ಸಂಘವು ಇವರನ್ನು ಗೌರವಿಸಿತು. ಪ್ರಪಂಚದ ಪ್ರಖ್ಯಾತ ದಾರ್ಶನಿಕರಾದ ಮೂರ್, ರೂಸೆಲ್, ಐನ್‌ಸ್ಟೀನ್, ಮತ್ತು ಸಂತ್ಯಾನಾ ಇವರುಗಳ ಸಾಲಿನಲ್ಲಿ ರಾಧಾಕೃಷ್ಣನ್‌ರವರನ್ನು ಸೇರಿ ಸಿತು. ಜೀವಂತ ದಾರ್ಶನಿಕರ ಗ್ರಂಥಮಾಲೆ (Library of the Living Philosphers series) ಯಲ್ಲಿ 'ಸರ್ ರಾಧಾಕೃಷ್ಣನ್' ಎಂಬ ಸುಮಾರು ಎಂಟುನೂರು ಪುಟಗಳ ಬೃಹತ್ ಗ್ರಂಥವು ಪ್ರಕಟವಾ ಯಿತು. ಅದರ ಪ್ರಧಾನ ಸಂಪಾದಕರು ಪ್ರೊ॥ ಸ್ಕಿಲ್ಲೀಸ್ ಎಂಬುವರು. ಆ ಗ್ರಂಥವನ್ನು ರಾಧಾಕೃಷ್ಣನ್‌ರವರ 70ನೇ ವಯಸ್ಸಿನಲ್ಲಿ ಅವರಿಗೆ ಅರ್ಪಿಸಿ ಗೌರವಿಸಿತು.

ಅದರಲ್ಲಿ ಶ್ರೀ ಜಾರ್ಜ್ ಪಿ. ಕಾಂಗರ್ ಬರ್‌ನಾರ್ಡ್ ಪಿಪ್‌ಲ್ಸಿ, ರಾಬರ್ಟ್, ಡಬ್ಲ್ಯು. ಬ್ರೌನ್, ಚರ್ಲ್ಸ್ ಎ. ಮೂರ್; ಡಬ್ಲ್ಯುರಾಲ್ಫ್ ಇಂಗೆ; ಎ. ಎಲ್. ಮಾರ್ಲೋ; ಲಾರೆನ್ಸ್‌ಹೈಡ್, ಕ್ಲೆಮೆಂಟ್ಸ್ ಸಿ. ಜೆ. ವೆಬ್; ಎಡ್ಗರ್ ಷೆಫೇಲ್; ಸ್ವಾಮಿ ಅಘಾನಂದಭಾರತಿ; ಹುಮಾಯುನ್ ಕಬೀರ್ ಮುಂತಾದ ಪ್ರಪಂಚದ ನಾನಾ ಕಡೆಯ, ಇಪ್ಪತ್ತಮೂರು ಮಂದಿ ವಿದ್ವಾಂಸರು ರಾಧಾಕೃಷ್ಣನ್ನರ ಬಹುಮುಖ ಪ್ರತಿಭೆಯನ್ನು ತಿಳಿಸಿದ್ದಾರೆ. ಗ್ರಂಥಾರ್ಪಣೆಯು ಸರ್ವಪಳ್ಳಿಯವರಿಗೆ ಮಾತ್ರ ಗೌರವವನ್ನು ತರುವಂತ ಹುದಲ್ಲ. ಭಾರತಕ್ಕೆ ಒಂದು ಹಿರಿಯ ಹೆಮ್ಮೆಯನ್ನು ತರುವಂತಹುದು.

1954ರಲ್ಲಿ ಅಮೆರಿಕಾದೇಶದ ಯುನೈಟೆಡ್ ಸ್ಟೇಟ್ಸಿಗೆ ಭೇಟಿ ಕೊಟ್ಟರು. ಅಲ್ಲಿನ (Members of the Senate) ರಾಜ್ಯಸಭೆ ಯನ್ನು ಉದ್ದೇಶಿಸಿ ಮಾತನಾಡುತ್ತಾ, ಭಾರತಕ್ಕೆ ಸ್ವಾತಂತ್ರ್ಯವು ಬಂದ ನಂತರ ನಾವು ಹೇಗೆ ದೇಶದ ಅಭಿವೃದ್ಧಿಯನ್ನು ಸಾಧಿಸುತ್ತಿದ್ದೇವೆಂಬ ವಿಷಯವನ್ನು ತಿಳಿಸುತ್ತಾರೆ. ಅದೇ ವರುಷ ಅಕ್ಟೋಬರ್ ತಿಂಗಳಲ್ಲಿ ಮಾಂಟವೇಡಿಯಾ ಮತ್ತು ಉರಿಗಾಯ್ ಸಂಸ್ಥಾನಗಳಿಗೆ ಹೋಗಿಬಂದರು.

ಇಲ್ಲಿಯ ತನಕ ಭಾರತದ ಅನೇಕ ವಿಶ್ವವಿದ್ಯಾನಿಲಯಗಳು ಮತ್ತು ಸಂಸ್ಥೆಗಳು ಸರ್ವಪಳ್ಳಿಯವರಿಗೆ ನಾನಾ ರೀತಿಯಲ್ಲಿ ಗೌರವಿಸಿದ್ದವು. ಅದು ಸಾಲದುದೆಂಬುದಕ್ಕೆ ಭಾರತ ಸರ್ಕಾರವು ತನ್ನ ಘನತೆಗನುಣವಾಗಿ ಇವರಿ ಗೊಂದು ಪದವಿಯನ್ನು ಕೊಡಲು ನಿರ್ಧರಿಸಿತು. ಭಾರತದ ಅತ್ಯಂತ ಶ್ರೇಷ್ಠ ಗೌರವ ಪದವಿಯಾದ "ಭಾರತ ರತ್ನ" ಎಂಬುದೇ ಆ ಪದವಿ 1955ರಲ್ಲಿ ರಾಷ್ಟ್ರಪತಿಯಾಗಿದ್ದ ಡಾ॥ ರಾಜೇಂದ್ರ ಪ್ರಸಾದ್‌ರವರ ಸ್ವಹಸ್ತ ದಿಂದ ರಾಧಾಕೃಷ್ಣನ್ನರಿಗೆ ಈ ಪದವಿ ನೀಡಲ್ಪಟ್ಟಿತು. ಅದೇ ವರುಷ ಅಮೆರಿಕಾದ ಕೊಲಂಬಿಯಾ ವಿಶ್ವವಿದ್ಯಾನಿಲಯವು ಕೂಡ ಇವರಿಗೆ ಸನ್ನದನ್ನು ಕೊಟ್ಟಿತು.

1956ನೇ ಇಸವಿ ಜೂನ್ ಮಾಹೆಯಲ್ಲಿ ರಷ್ಯಾದೇಶಿಯರ ಆಹ್ವಾನದ ಮೇಲೆ ಆ ದೇಶದ ಪ್ರವಾಸವನ್ನು ಕೈಗೊಂಡರು. ಮೊದಲೇ ಚಿರಪರಿಚಿತ ರಾಗಿದ್ದ ಸರ್ವಪಳ್ಳಿಯವರಿಗೆ ಅಲ್ಲಿಯ ಜನರು ಭವ್ಯವಾದ ಸ್ವಾಗತವನ್ನು ನೀಡಿದರು. ಜಕೋಸ್ಲವೇಕಿಯಾ ದೇಶದ ರಾಜಧಾನಿಯಾದ ಪ್ರೇಗ್‌ನ

ಅತ್ಯಂತ ಪುರಾತನವಾದ ಛಾರ್ಲ್ಲೆಸ್ ವಿಶ್ವವಿದ್ಯಾನಿಲಯವು ಇವರನ್ನು ಆಹ್ವಾನಿಸಿ ಗೌರವ ಪದವಿಯನ್ನು ನೀಡಿತು. ಅಲ್ಲಿಂದ ಮಾಸ್ಕೋವಿಗೆ ಪ್ರಯಾಣ ಬೆಳಸಿದರು. ಅಲ್ಲಿನ ಬುಲ್ಗಾನಿನ್ ಮತ್ತು ಕ್ರುಶ್ಚೇವ್‌ರವರ ಅತಿಥಿಯಾಗಿ ಉಳಿದರು. ಇವರು ಭಾರತದ ರಾಯಭಾರಿಯಾಗಿ ರಷ್ಯಾದಲ್ಲಿದ್ದಾಗ ರಷ್ಯಾದೇಶದ ಪ್ರಧಾನಿಯಾಗಿದ್ದ ಸ್ಟಾಲಿನ್‌ರವರು ಕಾಲವಾಗಿದ್ದರು. ಆಗ ಅಧ್ಯಕ್ಷರಾಗಿದ್ದ 'ಓರೋ ಷಿಲವ್'ರವರು ರಾಧಾಕೃಷ್ಣನ್ ರವರನ್ನು ತಮ್ಮ ಕ್ರೆಮ್ಲಿನ್ ಭವನಕ್ಕೆ ಆಹ್ವಾನಿಸಿದರು. ಅಲ್ಲಿ ಅವರ ಆತಿಥ್ಯವನ್ನು ಸ್ವೀಕರಿಸಿದರು. ಆ ಪ್ರವಾಸದ ಕಾಲದಲ್ಲಿ ಉಸ್‌ಬೆಕಿಸ್ಥಾನ್, ಟಾಸ್‌ಕ್ಯಾಂಟ್ ಮತ್ತು ಸಮರ್‌ಖಂಡಗಳಿಗೂ ಭೇಟಿಯನ್ನು ಕೊಟ್ಟರು. ಭಾರತಕ್ಕೆ ಹಿಂದಿರುಗುವಾಗ ಕಿಯ್ವ್ ರೇಡಿಯೋದಲ್ಲಿ 'ಭೂಮಿಯ ಮೇಲೆ ಒಂದೇ ಕುಟುಂಬ (On Earth one family)' ಎಂಬ ವಿಷಯದ ಮೇಲೆ ಉಪನ್ಯಾಸವನ್ನು ನೀಡಿದರು. ಅದು ಬಹಳ ಗಣನೀಯವಾದುದು. "ಪ್ರಪಂಚದಲ್ಲಿ ಶಾಂತಿಯುತ ಸೌಖ್ಯವು ನೆಲೆಗೊಳ್ಳಬೇಕಾದರೆ, ಪ್ರತಿಯೊಂದು ರಾಷ್ಟ್ರದಲ್ಲೂ, ಪ್ರತಿ ವ್ಯಕ್ತಿಯಲ್ಲೂ ಸೌಹಾರ್ದ ಭಾವನೆಯು ಬೆಳೆಯಬೇಕು. ಆಗ ಸ್ವಾರ್ಥತೆಯು ತಾನಾಗಿ ಹೋಗಿ ಯುದ್ಧದ ಅವಶ್ಯಕತೆಯೇ ಇರುವುದಿಲ್ಲ" ಎಂಬುದೇ ಆ ಉಪನ್ಯಾಸದ ಸಾರ.

ಅದೇ ಪ್ರವಾಸದ ಕಾಲದಲ್ಲಿ ಬ್ರುಸೆಲ್ಸ್ ವಿಶ್ವವಿದ್ಯಾನಿಲಯವೂ ಇವರಿಗೊಂದು ಗೌರವ ಪದವಿಯನ್ನಿತ್ತು ಗೌರವಿಸಿತು. ಮಾಸ್ಕೊ ವಿಶ್ವವಿದ್ಯಾನಿಲಯವೂ ಕೂಡ ಈ ವಿಷಯದಲ್ಲಿ ಹಿಂದೆ ಬೀಳಲಿಲ್ಲ. ಅದು ತಾನೊಂದು ಗೌರವ ಪದವಿಯನ್ನು ಕೊಟ್ಟರೆ, ಸರ್ವಪಳ್ಳಿಯವರನ್ನು ಶಿಷ್ಯತನದಲ್ಲಿ ಗೌರವಿಸಿದಂತಾದೀತೆಂದು ಅವರ ಅಪಾರ ಜ್ಞಾನಕ್ಕೆ ಪದವಿಯನ್ನು ಕೊಡುವುದು ಕುಂದಾಗಬಹುದೆಂದು ಅರಿತೋ ಏನೋ ಮಾಸ್ಕೋವಿನ ಜ್ಞಾನಿಗಳು, ತಮ್ಮ ವಿಶ್ವವಿದ್ಯಾನಿಲಯಕ್ಕೆ ಸರ್ವಪಳ್ಳಿಯವರನ್ನು ಗೌರವ ಪ್ರಾಧ್ಯಾಪಕರನ್ನಾಗಿ ನೇಮಿಸಿಕೊಂಡರು.

ಅದೇ ಸಂದರ್ಭದಲ್ಲಿ ರೊಮೇನಿಯಾ ದೇಶಕ್ಕೂ ಹೋಗಿದ್ದರು. ಅಲ್ಲಿನ ಜನತೆಯು ಇವರ ಆಗಮನದಿಂದ ಹಿರಿಹಿಗ್ಗಿದರು. ಭಾರತ ಮತ್ತು ರೊಮೇನಿಯಾದ ಮಿತ್ರತ್ವವು ಇದಕ್ಕಿಂತ ಮೊದಲೇ ಇದ್ದಿತಾದರೂ, ಇವರು

ಅಲ್ಲಿಗೆ ಭೇಟಿ ಕೊಟ್ಟುದರಿಂದ ನಮ್ಮ ದೇಶದ ಗೌಹತಿ, ಅಹಮುದಾಬಾದ್ ಮುಂತಾದ ಕಡೆಯಲ್ಲಿರುವ ಸಣ್ಣ ಕೈಗಾರಿಕೆಗಳಿಗೆ ರೊಮೇನಿಯಾದ ಪ್ರೋತ್ಸಾಹವು ಹೆಚ್ಚಾಗಿ ದೊರೆಯುವಂತಾಯಿತು.

ಅದೇ ವರುಷ ಜುಲೈ ತಿಂಗಳಲ್ಲಿ ನ್ಯಾಸಾಲ್ಯಾಂಡಿಗೆ ಭೇಟಿ ಕೊಟ್ಟರು. ಅಲ್ಲಿನ ಸಾಲಿಸ್‌ಬರಿ ಎಂಬ ನಗರದಲ್ಲಿ 'ಕಾಮನ್‌ವೆಲ್ತ್'ನ ಬಗ್ಗೆ ಮಾತನಾಡುತ್ತಾ, ಭಾರತವು ಜಾತ್ಯತೀತ ರಾಷ್ಟ್ರವಾಗಿದೆ ಎಂಬುದನ್ನು ಸ್ಪಷ್ಟಪಡಿಸಿದರು. ಭಾರತವು ಭೌಗೋಳಿಕ ಸನ್ನಿವೇಶದಿಂದ ಬೇರ್ಪಟ್ಟಿದೆ. ಆದರೆ ಇಲ್ಲಿಯ ಜನತೆಯು ಭಾವನೆಯು ಬೇರ್ಪಟ್ಟಿದೆ, ಎಂದು ಹೇಳಲಾಗದು. ಸಾಮಾನ್ಯವಾಗಿ ಎಲ್ಲಾ ರಾಷ್ಟ್ರಗಳೂ ಕಾಲಾನುಗುಣವಾಗಿ ಬದಲಾವಣೆಯನ್ನು ಹೊಂದಿವೆ. ಉದಾಹರಣೆಗೆ ಆಧುನಿಕ ಗ್ರೀಸ್ ದೇಶವು ಪ್ರಾಚೀನ ಗ್ರೀಸ್ ದೇಶಕ್ಕಿಂತ ಬದಲಾವಣೆಯನ್ನು ಹೊಂದಿದೆ. ಹಾಗೆಯೇ ಆಧುನಿಕ ಈಜಿಪ್ಟ್ ಜನಾಂಗದ ಭಾವನೆಯು ಪುರಾತನ ಈಜಿಪ್ಟಿಗಿಂತಲೂ ವೈಶಿಷ್ಟ್ಯಪೂರ್ಣವಾಗಿದೆ. ಆದರೆ, ಭಾರತದ ಮಾತು ಹಾಗಲ್ಲ. ತತ್ವಶಃ ಪ್ರಾಚೀನ ಭಾರತದಂತೆಯೇ ಆಧುನಿಕ ಭಾರತವು ಕಾಣುತ್ತಿದೆ.

ಕ್ರಿ. ಪೂ. ಐದುಸಾವಿರ ವರ್ಷದ ಹಿಂದಿನ ಭಾರತದ ನಾಗರಿಕತೆಯನ್ನು ತಿಳಿಸುವ ಹರಪ್ಪ ಮತ್ತು ಮಹಂಜಾದಾರೋವಿನಲ್ಲಿ ಅಗೆದು ತೆಗೆದ ಅವಶೇಷಗಳಲ್ಲಿ ಅನೇಕ ವಿಗ್ರಹಗಳು ಸಿಕ್ಕಿವೆ. ಅವುಗಳಲ್ಲೊಂದು ಶಿವನ ಮೂಲ ಪ್ರತಿಮೆ. ಅದರಲ್ಲಿ ಕಮಲ ಒಂದರ ಮೇಲೆ ಶಿವನು ಕುಳಿತಿದ್ದಾನೆ. ಅವನು ಕಣ್ಣುಗಳನ್ನು ಮುಚ್ಚಿ ಧ್ಯಾನಮಗ್ನನಾಗಿರುವಂತೆ ಅಂಗ ವಿನ್ಯಾಸವು ಕಾಣುತ್ತದೆ. ಅವನ ಸುತ್ತಲೂ ಅನೇಕ ಪ್ರಾಣಿಗಳು ನಿಂತಿವೆ. ಈ ವಿಗ್ರಹದಿಂದಲೇ ಆ ಕಾಲದ ಭಾರತದ ಮೂಲತತ್ವಗಳನ್ನು ಮನಗಾಣಬಹುದು.

ಇಂದ್ರಿಯಗಳನ್ನು ನಿಗ್ರಹಿಸಿಕೊಂಡು ಯಾರು ತನ್ನನ್ನು ತಾನು ನಿಗ್ರಹಿಸಿಕೊಂಡಿರುವನೋ ಅಂತಹವನು ಯುದ್ಧರಂಗದಲ್ಲಿ ಜಯಶೀಲನಾದವನಿಗಿಂತಲೂ ಹೆಚ್ಚಿನ ವೀರನು ತನ್ನನ್ನು ತಾನು ಆಳುವುದು, ರಾಜ್ಯವನ್ನಾಳುವುದಕ್ಕಿಂತಲೂ ಅತಿಶಯವೆಂದೇ ಹೇಳಬಹುದು. ಉದಾಹರಣೆಗೆ ಬುದ್ಧನೇ ಸಾಕು. ಮಾನವನು ಮಾನವನನ್ನು ಜಯಿಸಬಹುದು,

ಇಂದ್ರಿಯಗಳನ್ನು ಜಯಿಸುವುದು ಕಷ್ಟ. ಬುದ್ಧನು ವೈರ, ನಿರ್ದಯ, ಮತಭ್ರಾಂತಿ ಮುಂತಾದುವುಗಳನ್ನು ಜಯಿಸಿದ ಧೀರ. ನಮ್ಮ ಉಪನಿಷತ್ತು ಗಳು ಕೂಡ ಇದಕ್ಕೆ ಬೆಂಬಲವನ್ನು ನೀಡುತ್ತವೆ.

ಕೇವಲ ಹಬ್ಬಹರಿದಿನಗಳನ್ನೂ ಸಂಪ್ರದಾಯುಕವಾದ ಆಚರಣೆಗಳನ್ನೂ ಆಚರಿಸುವುದಕ್ಕೆ ಮಾತ್ರ ಧರ್ಮವಲ್ಲ. ಅದು ನಮ್ಮ ಸ್ವಭಾವವನ್ನು ಮಾರ್ಪ ಡಿಸತಕ್ಕದಾಗಿರಬೇಕು. ನಮ್ಮ ವ್ಯಕ್ತಿತ್ವವನ್ನು ಉತ್ತಮಗೊಳಿಸ ತಕ್ಕ ದಾಗಿರಬೇಕು. ಎಲ್ಲಾ ಧರ್ಮಗಳಲ್ಲೂ ಈ ಗುಣವಿರುವುದಾದರೆ, ನಿಜ ವಾಗಿಯೂ ಅದನ್ನು ಪ್ರಪಂಚದ ಆಧ್ಯಾತ್ಮಿಕ ಸ್ಪರ್ದೆಯನ್ನಬಹುದು. ನಾವು ಈ ಒಂದು ರೀತಿಯಲ್ಲಿ ಧರ್ಮಗಳನ್ನು ಗುರಿತಿಸಿದಾಗ, ಧಾರ್ಮಿಕ ಸ್ಪರ್ಧೆಗಳ ಮತ್ತು ಆಚಾರಗಳ ಮುಸದಾಟಗಳು ಅಸಂಗತವಾಗುತ್ತದೆ.

ಅಂದಿನಿಂದ ಇಂದಿನವರೆಗೆ ನಮ್ಮ ಸಹಜ ಸ್ವಭಾವಕ್ಕೆ ಸಂತೋಷ ವನ್ನುಂಟುಮಾಡುವ ಧಾರ್ಮಿಕ ಸಿದ್ಧಾಂತಗಳು ಭಿನ್ನ ಭಿನ್ನ ಹಾದಿಗಳಲ್ಲಿ ಅಂಗೀಕರಿಸಲ್ಪಟ್ಟವೆ. ಆದರೂ ಶಾಂತಿದಾಯುಕವಾದ ಭಾವನೆಗಳು ಮತ್ತು ಪ್ರವರ್ತನೆಗಳು ಪರಸ್ಪರವಾಗಿ ಕಲಿಯಲ್ಪಟ್ಟವುಗಳಾಗಿ ಜೊತೆಯಲ್ಲಿಯೇ ಕೂಡಿದವುಗಳಾಗಿ ಬಹಳ ಕಾಲದಿಂದ ನಮ್ಮೊಡನೆಯೇ ಉಳಿದಿವೆ.

ಭಾರತವು ಜಾತ್ಯಾತೀತ ರಾಷ್ಟ್ರವೇನೋ ನಿಜ. ಆದರೆ, ಇದು ಜೀವನದ ಅನುಕೂಲತೆಗಳನ್ನೂ ಆಡಂಬರಗಳನ್ನೂ ತೋರುತ್ತದೆ ಎಂದು ಹೇಳಲಾಗದು. ಪ್ರಾಕೃತಿಕ ಪ್ರಪಂಚದ ಕಾಲ ಮತ್ತು ದೇಶಗಳಿಗನು ಗುಣವಾಗಿ ವಿಶ್ವದ ನಿಯಮಗಳನ್ನು ಅಂಗೀಕರಿಸುವುದಿಲ್ಲ. ಎಂಬ ಅರ್ಥವೂ ಅಲ್ಲ. ಅಂದರೆ, ಯಾವುದೋ ಒಂದು ನಿಖರವಾದ ಧರ್ಮಕ್ಕೆ ಮಾರು ಹೋಗುತ್ತದೆ ಎಂದೂ ಹೇಳಲಾಗದು. ಎಲ್ಲಾ ಧರ್ಮಗಳ ಮುಖ್ಯ ತತ್ವ ಗಳನ್ನೂ ಅಂಗೀಕರಿಸುತ್ತದೆ. ಪ್ರಪಂಚದ ಎಲ್ಲಾ ಧರ್ಮಗಳೊಡನೆ ಪರಿ ವರ್ತಿಸಿ ಸಹ ಬಾಳನ್ನು ಹೊಂದಿಕೊಳ್ಳುತ್ತದೆ. ಆದೇ ನಿಜವಾದ ಜಾತ್ಯಾ ತೀತ ರಾಷ್ಟ್ರದ ಅರ್ಥ. ಎಲ್ಲಿಯ ತನಕ ನಾವು ಪರಧರ್ಮದ ತತ್ವಗಳು ಮಾನವನನ್ನು ಶ್ರೇಷ್ಠತೆಗೆ ಒಯ್ಯಲಾರದ ಮಾರ್ಗಗಳೆಂದು ಪರಿಗಣಿಸು ತ್ತೇವೆಯೋ ಮತ್ತು ನಮ್ಮದೇ ಕೊನೆಯ ತೀರ್ಮಾನದ ಧರ್ಮವೆಂದು ನಂಬುತ್ತೇವೆಯೋ, ಅಲ್ಲಿಯವರೆಗೂ ಮುಸದಾಟ, ವಾದ ವಿವಾದ, ಮತ್ತು

ಘರ್ಷಣೆಗಳು ಆಗುತ್ತಿರುತ್ತವೆ. ನಾವು ನಮ್ಮ ಧರ್ಮತತ್ವಗಳನ್ನು ಹೊಗಳಿದಾಗ ಮತ್ತು ನಮ್ಮದೇ ನಿಶ್ಚಯವಾದುದೆಂದು ತೀರ್ಮಾನಿಸಿದಾಗ ಧರ್ಮದ ಯುದ್ಧಗಳು ತಾವಾಗಿ ಉಂಟಾಗುತ್ತವೆ.

ಭಾರತದಲ್ಲಿ ಹಾಗಲ್ಲ. ಆರ್ಯರು, ದ್ರಾವಿಡರು, ಬೌದ್ಧರು, ಮಹಮದೀಯರು, ಕ್ರಿಶ್ಚಿಯನ್ನರು ಮುಂತಾದ ಎಲ್ಲಾ ಧರ್ಮೀಯರು ಭಾರತಕ್ಕೆ ಬಂದು ತುಂಬಿದರು ಬಂಧುಗಳಂತೆ ವರ್ತಿಸಿದರು. ಸಹಬಾಳ್ವೆಯ ಒಗ್ಗಟ್ಟಿನಲ್ಲಿ ಮಿಲನವಾದರು. ನಾವು ಒಟ್ಟಾಗಿ ಬಾಳಬೇಕು, ಅಥವಾ ಒಟ್ಟಾಗಿ ಮಡಿಯಬೇಕು ಎಂಬ ತೀರ್ಮಾನಕ್ಕೆ ಬಂದಿದ್ದೇವೆ. ಒಟ್ಟಾಗಿ ಬಾಳಲು ಹೊಸದಾಗಿ ಬಂದಿರುವ ಜನರ ಧ್ಯೇಯಗಳ ಬಗ್ಗೆ ತಾಳ್ಮೆಯನ್ನು ಹೊಂದಲೇಬೇಕು. ಹಾಗೆ ಮಾಡಲು ಬೌದ್ಧಿಕ ತಾಳ್ಮೆಯೂ ಬೇಕು. ಧಾರ್ಮಿಕ ತಾಳ್ಮೆಯೂ ಬೇಕು. ಈ ಗುಣಗಳೇ ನಮ್ಮ ಆತ್ಮರಕ್ಷಣೆಯಲ್ಲಿ ಅಪರಿಹಾರ್ಯವಾದ ಆಸಕ್ತಿಯನ್ನು ಹೊಂದಲು ಅನುಕೂಲ ಮಾಡಿದೆ. ಕ್ಷಮಾ ಗುಣಕ್ಕಿಂತಲೂ ಹಿರಿದಾದುದು ಪ್ರೇಮವೆಂಬುದರಲ್ಲಿಲ್ಲ.

ನಾವು ಸಹಬಾಳ್ವೆಗನುಕೂಲವಾದ ಒಂದು ತತ್ವವನ್ನು ಹೊಂದಿಸಬೇಕಾದರೆ, ನಮ್ಮ ಮೂಲತತ್ವವು ಜ್ಞಾನದ ಬೆಳಕನ್ನು ನೀಡುತ್ತದೆ ಬೇರೆಯವರೆಲ್ಲರೂ ಅಜ್ಞಾನದಲ್ಲಿ ತೊಳಲುತ್ತಾರೆ. ಎಂಬ ಭಾವನೆಯನ್ನು ತೊಡೆದುಹಾಕಬೇಕು. ಭಾರತವು ಕೆಲವು ಅಂಧಶ್ರದ್ಧೆಯ ಧರ್ಮಗಳೊಡನೆ ಬಾಳಿ ಬಹಳ ತೊಂದರೆಗೀಡಾಗಿದೆ. ಆದರೂ ಅದಕ್ಕೆ ವ್ಯಥೆಯಿಲ್ಲ. ನಾವು ಸತ್ಯವನ್ನು ಪಾಲಿಸಬೇಕಾದರೆ ತೊಂದರೆ ಪಡಲೇಬೇಕು, ಕ್ರೈಸ್ತರ ಶಿಲುಬೆಯು, ಧಾರ್ಮಿಕ ಜಯಕ್ಕಾಗಿ ಲೌಕಿಕ ತೊಂದರೆಗಳಿಗೆ ಏಸುವು ಬಲಿಯಾದುದರ ಚಿಹ್ನೆಯಾಗಿದೆ. ನಾವು ನಡೆಯುವ ದಾರಿಯು ಸರಿ ಎಂದು ನಿರ್ಧರವಾದರೆ, ಜಯಾಪಜಯಗಳ ಬಗ್ಗೆ ಆಲೋಚಿಸಬೇಕಾಗಿಲ್ಲ.

ನಾವು ಪ್ರತಿಯೊಬ್ಬ ವ್ಯಕ್ತಿಯನ್ನು ಗೌರವಿಸಬೇಕು. ಅವನು ನಮ್ಮಂತೆ ದೊಡ್ಡವನಾಗದಿರಬಹುದು. ಅವನು ನಮ್ಮಂತೆ ಬುದ್ಧಿವಂತನಾಗದಿರಬಹುದು, ವಿದ್ಯಾವಂತನಾಗದಿರಬಹುದು ಅಥವಾ ಹೆಚ್ಚು ಅನುಭವವನ್ನು ಹೊಂದದಿರಬಹುದು, ಆದರೂ ಅವನಲ್ಲಿ ಮಾನವತ್ವವಿದೆ. ಪ್ರಯತ್ನಪಟ್ಟರೆ ಅದೆಲ್ಲವನ್ನೂ ಅವನು ಸಾಧಿಸಬಹುದು.

ಪ್ರತಿಯೊಬ್ಬನ ಬೆಳವಣಿಗೆಗೂ ದೇವರು ಸಹಕಾರಿಯಾಗಿದ್ದಾನೆ. ಆದರೆ ಅದಕ್ಕನುಗುಣವಾದ ವಾತಾವರಣವನ್ನು ಒದಗಿಸುವುದು ನಮ್ಮ ಕರ್ತವ್ಯವಾಗಿದೆ. ಸನ್ನಿವೇಶಗಳು ಪ್ರತಿಯೊಬ್ಬನ ಅಭ್ಯುದಯಕ್ಕೂ ಕಾರಣ ವಾಗಿವೆ. ಆದುದರಿಂದ ಸಹಬಾಳ್ವೆಗನುಗುಣವಾದ ಧಾರ್ಮಿಕ ತತ್ವಗಳನ್ನೂ ಪರಸ್ಪರ ಹೊಂದಾಣಿಕೆಯ ಸಹ ವಿದ್ಯಾಭ್ಯಾಸವನ್ನೂ ನೀಡಬೇಕೆಂದು ಹೇಳುತ್ತಾರೆ.

ಅದೇ ವರುಷ ಸೆಪ್ಟೆಂಬರ್ ತಿಂಗಳಲ್ಲಿ ಜಕರ್ತಾ, ಬೋರೋಬದರ್, ಜಪಾನಿನ ಟೋಕಿಯೋ ಮತ್ತು ಚೀನಾದೇಶದ ಪೀಕಿಂಗಿಗೆ ಭೇಟಿಕೊಟ್ಟು ಭಾರತದ ಬಾಂಧವ್ಯವನ್ನು ಸ್ಥಿರಗೊಳಿಸಿದರು. ಟೋಕಿಯೋದಲ್ಲಿ ನಡೆದ ವಿಶ್ವಧರ್ಮಗಳ ಸಮ್ಮೇಳನವನ್ನು ಉದ್ಘಾಟಿಸುತ್ತಾ "ದುರದೃಷ್ಟವಶಾತ್ ನಮ್ಮ ಧರ್ಮಗಳು ಒಬ್ಬರಿಗೊಬ್ಬರು ಸಹಕರಿಸಲು ಅವಕಾಶ ಕೊಡುತ್ತಿಲ್ಲ. ಸಹಕಾರವಿಲ್ಲದೆ ಸಹೋದರ ಭಾವನೆಯು ಬರಲಾರದು. ಸಹೋದರ ಭಾವನೆಯಿಲ್ಲದೆ ವಿಶ್ವದಲ್ಲಿ ಶಾಂತಿಗೆಡೆಯಿಲ್ಲ. ಅದು ಕೂಡದು ಪರಸ್ಪರ ಜನತೆಯಲ್ಲಿ, ಪರಸ್ಪರ ರಾಷ್ಟ್ರಗಳಲ್ಲಿ. ಅನ್ಯೋನ್ಯತೆಯು ಬರುವಂತಾಗಲೇ ಬೇಕು" ಎಂದು ಹೇಳುತ್ತಾ ಹಿಂದೂ ವೇದಗಳು ಕ್ರೈಸ್ತರ ಬೈಬಲ್ಲಿನ, ಹಾಗೂ ಮಹಮದೀಯರ ಖುರಾನಿನ, ಮಾತುಗಳನ್ನು ಉದಾಹರಿಸುತ್ತಾ ಎಲ್ಲಾ ಧರ್ಮಗಳೂ ಇದನ್ನೇ ಹೇಳುತ್ತವೆ ಎಂಬ ವಿಷಯಗಳನ್ನು ಸಮರ್ಥಿಸುವರು.

ರಾಧಾಕೃಷ್ಣನ್ನರು, ಉಪರಾಷ್ಟ್ರಪತಿಯ ಕಾರ್ಯಭಾರದಲ್ಲೂ ಬಿಡುವು ದೊರೆತಾಗ ತಮ್ಮ ಸ್ವಕರ್ಮವಾದ ಧಾರ್ಮಿಕ ಗ್ರಂಥರಚನೆಯನ್ನು ಮಾಡು ತ್ತಿದ್ದರು. ಅದರ ಫಲವಾಗಿಯೇ "ಸತ್ಯಾನ್ವೇಷಣೆ (The Recovery of Truth)" ಗ್ರಂಥವು ಹೊರ ಬಂದಿತು. ಈ ಗ್ರಂಥವು ತಮಿಳು ಭಾಷೆಗೆ ತರ್ಜುಮೆಯಾಗಿರುವುದಲ್ಲದೆ, ಕನ್ನಡದಲ್ಲೂ ಅನುವಾದವಾಗಿದೆ. ಸರ್ವಪಳ್ಳಿಯವರ ಶಿಷ್ಯರಲ್ಲೊಬ್ಬರಾದ ಮೈಸೂರಿನ ಮಹಾರಾಜಾ ಕಾಲೇಜಿನ ನಿವೃತ್ತ ಪ್ರಾಧ್ಯಾಪಕರಾದ ಶ್ರೀ ಯಾಮುನಾಚಾರ್ಯರು ಈ ಗ್ರಂಥ ವನ್ನು 'ಮತಗಳ ಪುನರುಜ್ಜೀವನ' ಎಂಬ ಹೆಸರಿನಲ್ಲಿ ಬೆಳಕಿಗೆ ತಂದಿದ್ದಾರೆ.

ಇದು ಸರ್ವಪಳ್ಳಿಯವರ ಎಲ್ಲ ಗ್ರಂಥಗಳ ಸಾರವಾಗಿ ಇವರ ಜೀವ ನದ ರಸಾಯನದಂತಿದೆ, ಇಂದಿನ ಜಗತ್ತು ಶಸ್ತ್ರ ಸಜ್ಜಿತವಾದ ಎರಡು

ವಿರೋಧ ಪಂಗಡವಾಗಿದೆ. ಮುಂದೇನಾಗುವುದೋ ಎಂಬ ಚಿಂತೆಯು ಸರ್ವರನ್ನೂ ಕಾಡುತ್ತಿದೆ. ಜಗತ್ತಿನಲ್ಲಿ ಸಂಪತ್ತಿಗೆ ಕೊರತೆಯಿಲ್ಲ. ಸಾಮರ್ಥ್ಯವೂ ಸಾಕಷ್ಟಿದೆ. ಇವುಗಳಿಂದ ನಾನಾ ಶಕ್ತಿಗಳನ್ನು ಬೆಳಸಿಕೊಂಡಿದ್ದೇವೆ. ಆದರೂ ಶಾಂತಿಯಿಲ್ಲ ಭವಿಷ್ಯದ ಬಾಳಿನಲ್ಲಿ ಭರವಸೆಯಿಲ್ಲ ಜನತೆಯಲ್ಲಿ ಅರಿವು ಹೆಚ್ಚಿದೆ ; ಬುದ್ಧಿಯು ಅರಳಿದೆ. ಆದರೂ ವಿವೇಕವು ವಿಕಾಸವಾಗಿಲ್ಲ. ಶೀಲವು ಸತ್ ಶೀಲವಾಗಿಲ್ಲ. ಸಾಲದುದಕ್ಕೆ ಜಗತ್ತನ್ನು ಧರಿಸುವಂತಹ ಧರ್ಮವೊಂದಿಲ್ಲ. ನಾವಂತೂ ಧರ್ಮದಿಂದಲೇ ಬಹುದೂರ ಹೋಗಿದ್ದೇವೆ. ಇದೊಂದು ರೋಗ. ಇದನ್ನೇ ಕೆಲವರು ಬಳಸಿಕೊಳ್ಳುತ್ತಿದ್ದಾರೆ. ಅಂತಹವರು ಮುಖಂಡರಂತೆ ನಟಿಸುತ್ತಾರೆ. ತಮ್ಮಲ್ಲಿರುವ ಮೌಢ್ಯವನ್ನೇ ವಿವೇಕವೆಂದು ಸಾರುತ್ತಾರೆ. ಇದರಿಂದ ಕಾಳು ಮತ್ತು ಕಳೆಗಳು ಒಟ್ಟಾಗಿ ಬೆಳೆಯುತ್ತಿವೆ. ಕಳೆಯೇ ಹುಲುಸಾಗುತ್ತಿದೆ.

ಸನ್ನಿವೇಶವೆನ್ನುವುದು ವಿಧಿವಶವಲ್ಲ. ಅನಿವಾರ್ಯವೂ ಅಲ್ಲ. ವಿನಾಶವೇ ನಮ್ಮ ವಿಧಿಯಾಗಲೂ ಬೇಕಾಗಿಲ್ಲ ನಮ್ಮ ಆಲೋಚನೆ ಮತ್ತು ಸಂಕಲ್ಪಗಳ ಆಧಾರದ ಮೇಲೆ ನಮ್ಮ ಭವಿಷ್ಯವಿದೆ. ನಮ್ಮ ಮನಸ್ಸೂ ಕೂಡ ಜಡವಾದುದಲ್ಲ; ಚೈತನ್ಯದಾಯಕವಾದುದು. ಹೊಸ ಅನುಭವ ಮತ್ತು ಹೊಸ ಜ್ಞಾನಗಳನ್ನು ಯಾವಾಗಲೂ ಸ್ವಾಗತಿಸುತ್ತಿರುತ್ತದೆ. ಆದರೆ ಅದಕ್ಕೆ ಅವಕಾಶ ಕೊಡದೆ ವಿಚಾರ ಶೂನ್ಯರಾಗಿ ಸಂಪ್ರದಾಯಕ್ಕೆ ಶರಣು ಹೋಗುತ್ತಿದ್ದೇವೆ. ನಮ್ಮ ಮಾತಿನಂತೆ ನಮ್ಮ ಕೃತಿಯು ಇರುವುದಿಲ್ಲ. ಬಹುಮಂದಿ ಬೆನ್ನು ಮುರಿದು ದುಡಿದು ಬಳಲುವರು ಮತ್ತೆ ಕೆಲವರು ದುಡಿಯದೆಯೇ ದುಡಿದವರ ಕೂಳನ್ನು ಕುಳಿತು ಸುಖವಾಗಿ ತಿನ್ನುವರು. ಆಗಲೇ ಬಂತು ಮೇಲು ಕೀಳಿನ ಭಾವನೆ. ಅದರ ಹಿನ್ನೆಲೆಯೇ ವೈಷಮ್ಯ. ಆದುದರಿಂದ ಕೇವಲ ಆರ್ಥಿಕ ಮತ್ತು ರಾಜಕೀಯ ಸಂಬಂಧಗಳ ಮೂಲಕ ರಾಷ್ಟ್ರಗಳು ಸಮಾಜವನ್ನು ಕಟ್ಟಲಾರವು ಒಂದು ವಿಶಾಲವಾದ ಆಧ್ಯಾತ್ಮಿಕ ಭಾವನೆಯು ಬೇಕು. ಬಾಳಿಗೊಂದು ನಂಬಿಕೆಯಿಲ್ಲದೆ ಬಾಳಲು ಸಾಧ್ಯವಿಲ್ಲ ಆ ನಂಬಿಕೆಯು ವಿಶ್ವಕುಟುಂಬದ ಭಾವನೆಯುಳ್ಳಿರಬೇಕು. ಮಾನವರೆಲ್ಲರೂ ಒಂದೇ ಎಂಬ ಅದ್ವೈತ ಭಾವನೆಯು ಅವಶ್ಯಕ ಎಂದು ವಿವರಿಸುವರು.

ಇದರ ವಿಷಯವಾಗಿ ಸಮತಾವಾದವನ್ನು ವಿವರಿಸುತ್ತಾ "ಮತ ಧರ್ಮವು ಅಲೌಕಿಕ ತತ್ವವನ್ನುಳ್ಳದ್ದು. ಸ್ವರ್ಗದ ಕನಸನ್ನು ಕಟ್ಟತಕ್ಕದ್ದು, ಸಮತಾವಾದದ ಆದರ್ಶವು ಇಹಲೋಕಕ್ಕೆ ಮಾತ್ರ. ಇದು ಭೂಮಿಯ ಮೇಲೆ ಜೀವಂತವಾಗಿರುವಾಗಲೇ ಅನುಭವಿಸಬಹುದಾದ ಸುಖವನ್ನೆ ಬಯಸುತ್ತದೆ. ಇದು ಸಹನೆ ಮತ್ತು ಶರಣಾಗತಿಗಳನ್ನು ಭೋದಿಸುವುದಿಲ್ಲ. ಉದ್ಯಮ ಪ್ರಯತ್ನಗಳಿಗೆ ಪ್ರೋತ್ಸಾಹಿಸುತ್ತದೆ ಹೊಸ ಸಮಾಜದ ಸೃಷ್ಟಿಗಾಗೀ ಕರೆಯುತ್ತದೆ. ಅದರ ನೀತಿಯು ಮೆಚ್ಚತಕ್ಕದ್ದಾದರೂ ನಾವು ಅದರಂತೆ ನಡೆಯಲು ಸಾಧ್ಯವಿಲ್ಲ. ತನ್ನ ಸತ್ಯವೇ ಆಧ್ಯಾತ್ಮಿಕ ಸತ್ಯವೆಂದು ಭೋಧಿಸುವ ಯಾವ ಮತ ಧರ್ಮವನ್ನೂ ನಾವು ಅವಲಂಬಿಸಿ ಬಾರದು. ಹಾಗೆ ಅವಲಂಬಿಸಿದರೆ ಅಂಧ ಶ್ರದ್ಧೆಯುಳ್ಳವರಾಗುತ್ತೇವೆ.

ಮಾನವನು ಮಾನವನಾಗಿ ಬಲುಹತ್ತಿರವಿದ್ದರೂ ಧರ್ಮ ಭ್ರಾಂತಿಯಲ್ಲಿ, ಕಾಲ ಮತ್ತು ದೇಶಗಳ ವ್ಯಾಮೋಹದಲ್ಲಿ, ಬಲುದೂರ ದೂರವಾಗುತ್ತಿದ್ದಾನೆ. ಪ್ರಪಂಚದಲ್ಲಿರುವ ಧರ್ಮಗಳ ಹೆಸರು ಒಂದೇ? ಎರಡೇ? ಕ್ರೈಸ್ತ, ಮಹಮ್ಮದೀಯ, ಬೌದ್ಧ, ಹಿಂದು, ಜೈನ, ಜೊರಾಷ್ಟ್ರ ಇತ್ಯಾದಿ ಹಲವಾರು, ಆ ಧರ್ಮಗಳಲ್ಲೂ ಉಪಧರ್ಮಗಳು! ಉಪಧರ್ಮಗಳಲ್ಲಿ ಜಾತಿಗಳು! ಜಾತಿಗಳಲ್ಲಿ ಉಪಜಾತಿಗಳು! ಹೀಗಾಗಿ ಮನೆಗೊಂದು ಧರ್ಮ ನರಗೊಂದು ದೈವ ಎಂಬ ಕುರುಡು ಭಾವನೆಯು ಬೆಳೆಯುತ್ತಿದೆ. ಮಾನವ ಧರ್ಮವು ಅಧೋಗತಿಗಿಳಿಯುತ್ತಿದೆ. ಪ್ರತಿಯೊಬ್ಬನೂ ತನ್ನ ಹಿರಿಯತನವನ್ನು ಬಯಸುತ್ತಾನೆ, ಸೋಲುತ್ತಾನೆ. ಆದರಿಂದ ಅಸಂತುಷ್ಟಿಯನ್ನು ಹೊಂದುತ್ತಾನೆ. ಧರ್ಮ ಮತ್ತು ಪ್ರತಿಧರ್ಮಗಳಲ್ಲಿ ಸಂದೇಹವನ್ನು ಪಡುತ್ತಾನೆ. ಅಂತಹ ಸಂಶಯ ಪರಿಹಾರಕ್ಕಾಗಿ ನಿಜವಾಗಿಯೂ ಜಗತ್ತಿಗೆ ಹೊಸ ಧರ್ಮದ ಅವಶ್ಯಕತೆಯಿದೆ. ಹೊಸ ಬೆಳಕೊಂದು ಬೇಕಾಗಿದೆ. ಅದು ಸರ್ವರಿಗೂ ಸಮಂಜಸವಾದ, ಸತ್ಯದ ಹೊಸ ಜ್ಞಾನವನ್ನು ನೀಡತಕ್ಕ ಹೊಸ ಸಂದೇಶವಾಗಿರಬೇಕು.

ಆದರೆ ಈಗಿರುವ ಪ್ರಪಂಚದ ಎಲ್ಲಾ ಧರ್ಮಗಳೂ ಭಗವಂತನ ಅಸ್ತಿತ್ವವನ್ನೂ ದೇವರ ಸಾಕ್ಷಾತ್ಕಾರವನ್ನೂ ಸಾರುತ್ತಿವೆ, ಎಂಬುದಕ್ಕೆ ಎಲ್ಲಾ ಧರ್ಮಗಳೂ ಏಕದೇವತ್ವವನ್ನು ಸಾರುತ್ತಿವೆ. ಒಬ್ಬರನ್ನೊಬ್ಬರು

ಅರಿಯಲು ಪ್ರೇಮವೇ ಸಾಧನವೆಂದು ತಿಳಿಸುತ್ತವೆ. ದೇವರು ಮತ್ತು ಧರ್ಮವು ನಮ್ಮ ಬುದ್ಧಿಗೆ ನಿಲುಕುವ ಸಲುವಾಗಿ ನಾನಾ ಹೆಸರುಗಳನ್ನು ಕಲ್ಪಿಸಿ ಕೊಂಡಿದ್ದೇವೆ. ಯಾವ ಧರ್ಮವಾದರೂ ಒಂದು ರಾಷ್ಟ್ರದ ಅಥವಾ ಒಂದು ವರ್ಗದ ಸ್ವತ್ತಲ್ಲ. ಆದುದರಿಂದ ಈಗಿರುವ ನಾನಾ ಧರ್ಮಗಳ ಹೆಸರುಗಳ ಜೊತೆಗೆ ಮತ್ತೊಂದು ಧರ್ಮದ ಅವಶ್ಯಕತೆಯಿದೆ ಎಂದು ಭಾವಿಸಬಾರದು. ಹಳೆಯ ಧರ್ಮಗಳ ಮನೋವೈಶಾಲ್ಯವಾಗಿ ಸರ್ವಧರ್ಮಗಳ ಸಾರವು ಒಂದೇ ಎಂಬ ಭಾವನೆಯು ಬಂದರೆ ಅದೇ ಹೊಸ ಬೆಳಕು, ಅದೇ ಹೊಸಸಂದೇಶ. ಎಂಬ ವಿಷಯಗಳನ್ನು ವಿವರಿಸುವರು.

---

## ಸಾಂಸಾರಿಕ ಜೀವನ

ಅವರಿನ್ನೂ ವಿದ್ಯಾರ್ಥಿ ದೆಸೆಯಲ್ಲಿದ್ದಾಗಲೇ ಅವರಿಗೆ ಮದುವೆಯಾಗಿತ್ತು. ಆಗ ಅವರಿಗಿನ್ನೂ ಹದಿನೇಳು ವರ್ಷಗಳು ತುಂಬಿರಲಿಲ್ಲ. ಹಿಂದೂ ವಿವಾಹ ಪದ್ಧತಿಯೇನೋ ಬಹಳ ಪವಿತ್ರವಾದುದೇ. ಅವಿವಾಹಿತನು ಪವಿತ್ರವಾದ ಕಾರ್ಯಗಳನ್ನು ಮಾಡಕೂಡದು. ಅವಿವಾಹಿತಳಾದ ಪ್ರೌಢ ಸ್ತ್ರೀಯು ಸಮಾಜದಲ್ಲಿರಕೂಡದು ಎಂಬ ನಿಯಮವು ಹಿಂದೂ ಸಮಾಜದಲ್ಲಿ ಆದಿಯಿಂದಲೂ ಇದೆ. ಜಗತ್ತಿನ ವಿವಾಹ ಪದ್ಧತಿಯಲ್ಲಿ ಅನೇಕ ರೀತಿಗಳಿವೆ. ಅವುಗಳಲ್ಲಿ ಕೆಲವು ಕೇವಲ ದೈಹಿಕ ತೃಪ್ತಿಗಾಗಿ ಏರ್ಪಟ್ಟವುಗಳು. ಅಲ್ಲಿ ನಿಜವಾದ ಪ್ರೇಮವಿಲ್ಲ. ಮೂಕ ಪ್ರಾಣಿಗಳ ಆಕಾಂಕ್ಷೆಯಂತಿರುತ್ತದೆ. ಕೆಲವು ವೇಳೆ ಅವುಗಳಿಂದ ಅನೇಕ ಅನಾಹುತಗಳಾಗಬಹುದು. ನಿಜವಾದ ಪ್ರೇಮದಲ್ಲಿ ಕೋಪೋದ್ರೇಕಕ್ಕೆ ಅವಕಾಶವಿರುವುದಿಲ್ಲ. ಅದು ಅಂತರ್ಯದಲ್ಲಿ ಆನಂದದಾಯಕವಾಗಿರುತ್ತದೆ. ಅಂತಹ ಆನಂದವನ್ನು ಜೀವನ ಪರ್ಯಂತ ನೀಡತಕ್ಕದ್ದು ನಮ್ಮ ಹಿಂದೂ ವಿವಾಹ ಪದ್ಧತಿ.

ಐಹಿಕ ಮತ್ತು ಪಾರಮಾರ್ಥಿಕ ದೃಷ್ಟಿಗಳೆರಡರಿಂದಲೂ ಮದುವೆಯಾಗುವುದು ಪವಿತ್ರವೇನೋ ನಿಜ; ಆದರೆ, ವರನಿಗೆ ಇಪ್ಪತ್ತೈದು ವರ್ಷಗಳೂ ವಧುವಿಗೆ ಹದಿನೆಂಟು ವರ್ಷಗಳು ತುಂಬಿದಮೇಲೆ ಮದುವೆಯನು ಮಾಡಬೇಕು- ಇದು ನಮ್ಮ ವೈದಿಕ ಕಾಲದ ಪದ್ಧತಿ. ಈ ಕ್ರಮವು ಎಂದೆಂದಿಗೂ ಉತ್ತಮವಾದುದು. ಈ ರೀತಿಯ ಮದುವೆಯಿಂದ ವಧೂವರರ ಹಿರಿಯರಿಗೆ ವಿವಾಹದ ಹೊಣೆಯೇನೋ ಇದ್ದೇ ಇರುತ್ತದೆ. ಆದರೆ, ವಧೂವರರ ಮುಂದಿನ ಬಾಳ್ವೆಯ ವಿಷಯದಲ್ಲಿ ಅಷ್ಟಾಗಿ ಹೆಚ್ಚಿನ ಜವಾಬ್ದಾರಿಯು ಇರುವುದಿಲ್ಲ. ವಧೂವರರೇ ಪ್ರೌಢಾವಸ್ಥೆಗೆ ಬಂದಿರುವುದರಿಂದ, ಅವರಿಗೆ ಸಾಕಷ್ಟು ಲೋಕ ಜ್ಞಾನವಿರುತ್ತದೆ. ತಮ್ಮ ಭವಿಷ್ಯದ ಜವಾಬ್ದಾರಿಯನ್ನು ಅರಿತು, ಪರಸ್ಪರ ಒಬ್ಬರಿಗೊಬ್ಬರು ಮೆಚ್ಚಿ ಮದುವೆಯನ್ನು ಮಾಡಿಕೊಳ್ಳುತ್ತಿದ್ದರು. ನಮ್ಮ ಪುರಾಣಗಳ ಕಥೆಗಳಲ್ಲಿ ನಾವದನ್ನು

ಕಾಣುತ್ತೇವೆ. ಪ್ರೌಢ ವಯಸ್ಸಿನಲ್ಲಿ ವಿವಾಹವಾದ ದಂಪತಿಗಳಿಂದ ಹುಟ್ಟಿದ ಮಕ್ಕಳು ಧೃಡಕಾಯರಾಗಿ, ಧೀರ್ಘಾಯುಗಳಾಗುತ್ತಾರೆ. ಅಲ್ಲದೆ ಅಂತಹ ದಂಪತಿಗಳ ದೈಹಿಕಸ್ಥಿತಿಯೂ ಉತ್ತಮವಾಗಿರುತ್ತದೆ.

ಆದರೆ ಅದು ಹೇಗೋ ಬಾಲ್ಯವಿವಾಹವು ರೂಢಿಗೆ ಬಂದಿತು. ಅದ ರಿಂದಾಗುತ್ತಿದ್ದ ದುಷ್ಪರಿಣಾಮವನ್ನರಿತ ರಾಜಾರಾಮ್ ಮೋಹನರಾಯ್ ಮುಂತಾದ ಸಮಾಜ ಸುಧಾರಕರು ಬಾಲ್ಯವಿವಾಹವನ್ನು ವಿರೋಧಿಸಿದ್ದರು ಅಂದಿನ ಸರ್ಕಾರವೂ ಕೂಡ ಅವರ ಅಭಿಪ್ರಾಯಕ್ಕೆ ಬೆಂಬಲವನ್ನು ನೀಡಿತ್ತು. ರಾಧಾಕೃಷ್ಣನ್‌ರವರ ಕಾಲಕ್ಕೆ ಬಾಲ್ಯವಿವಾಹ ಪದ್ಧತಿಯು ಕಡಿಮೆಯಾಗಿದ್ದರೂ, ಸರಿ ಸುಮಾರು ಇವರ ಸಮಕಾಲೀನರಾಗಿದ್ದ ಬಾಲ ಗಂಗಾಧರ ತಿಲಕ್, ಗೋಖಲೆ, ನವರೋಜಿ, ಮಹಾತ್ಮಗಾಂಧಿ ಮುಂತಾದ ವರ ಜೀವನ ಚರಿತ್ರೆಯಲ್ಲಿ ವಯಸ್ಸಿಗೆ ಮುನ್ನವೆ ಮದುವೆ ನಡೆದಿರುವುದನ್ನು ಕಾಣುತ್ತೇವೆ. ಅಂದಿನ ರೂಢಿಗೆ ಬಲಿಯಾದ ಸರ್ವಪಳ್ಳಿಯವರು ವಯಸ್ಸಿ ನಲ್ಲಿ ಚಿಕ್ಕವರಾಗಿದ್ದರೂ ಜ್ಞಾನದಲ್ಲಿ ಪ್ರೌಢರಾಗಿದ್ದರು. ಚಿಕ್ಕ ವಯಸ್ಸಿ ನಲ್ಲಿ ಮದುವೆ ಮಾಡಿಕೊಳ್ಳಲು ಅವರಿಗಿಷ್ಟವಿರಲಿಲ್ಲ. ಮನೆಯಲ್ಲಿದ್ದ ಹಿರಿ ಯರ ಪ್ರೀತಿಯ ಅತಿರೇಕವೂ ಅವರ ಒತ್ತಾಯವೂ ಇವರಿಗೆ ಮದುವೆ ಯನ್ನು ಮಾಡಿಸಿತು. ಅದಕ್ಕಾಗಿ ಸರ್ವಪಳ್ಳಿಯವರು ಸಂತಾಪವನ್ನೂ ಪಡಲಿಲ್ಲ. ಈ ಮದುವೆಯಿಂದ ಅವರ ಬಾಳಿಗಾವ ನಷ್ಟವೂ ಆಗಲಿಲ್ಲ.

ಈ ಕಾಲಕ್ಕಿಂತಲೂ ಸ್ವಲ್ಪ ಹಿಂದೆ ಶಿಶುವಿವಾಹ ಪದ್ಧತಿಯು ಇತ್ತು. ಶಿಶುವಿವಾಹ ಪದ್ಧತಿಗಿಂತ ಬಾಲ್ಯಾವಸ್ಥೆಯ ಅಂತ್ಯದಲ್ಲಿ ಅಂದರೆ ಪ್ರೌಢಾ ವಸ್ಥೆಯ ಪ್ರಾರಂಭದಲ್ಲಿ ಮದುವೆ ಮಾಡುವುದು ಕೇಡಲ್ಲವೆಂದು ಇವರ ಅಭಿಪ್ರಾಯ. ಆದನ್ನೇ ಸರ್ವಪಳ್ಳಿಯವರು ಒಂದು ಕಡೆ ವಿವಾಹ ಪದ್ಧತಿ ಯನ್ನು ತಿಳಿಸುತ್ತಾ ಹೀಗೆ ಹೇಳುವರು.

ತಮ್ಮ ಮಕ್ಕಳ ಬಾಳು ಸುಖವಾಗಲೆಂದು ತಂದೆತಾಯಿಗಳ ಆಶಯ ತಮ್ಮ ಅನೇಕ ವರ್ಷದ ಜೀವನದ ಅನುಭವದಿಂದ ವಿಚಾರಪೂರ್ವಕವಾಗಿ ವಧೂವರರನ್ನು ಗೊತ್ತು ಪಡಿಸುವರು. ಇದು ಇಂಡಿಯಾದಲ್ಲಿ ಆದರ್ಶ ಪದ್ಧತಿ. ಪ್ರತಿಯೊಬ್ಬನಿಗೂ ಒಬ್ಬ ಹೆಂಗಸಿನ ಬಯಕೆಯು ಹೃದಯದಲ್ಲಿದ್ದೇ ಇರುತ್ತದೆ. ಆದರೆ, ಅವಳು, ಇವಳು, ಎಂಬ ನಿರ್ದಿಷ್ಟ ಭಾವನೆಯು ಇರು

ವುದಿಲ್ಲ. ಹೆಣ್ಣನ್ನು ಬಯಸುವುದು ಗಂಡಿನ ಹುಟ್ಟುಗುಣ. ಅಂತೆಯೇ ಗಂಡನ್ನು ಬಯಸುವುದು ಹೆಣ್ಣಿನ ಹುಟ್ಟುಗುಣ. ಪ್ರೌಢಾವಸ್ಥೆಗೆ ಮೊದಲು ಮನಸ್ಸಿಗೆ ಗ್ರಹಣ ಶಕ್ತಿಯು ಹೆಚ್ಚಾಗಿರುತ್ತದೆ. ಅಂದರೆ, ವಿವಾಹಿತ ಹೆಣ್ಣು ಗಂಡುಗಳ ಮನಸ್ಸಿನಲ್ಲಿ ಉಂಟಾಗುವ ಏರುಪೇರುಗಳನ್ನು ಸರಿಮಾಡ ಬಹುದು. ಪ್ರೌಢಾವಸ್ಥೆಯ ಪ್ರಾರಂಭದಲ್ಲಿರುವ ಅನುಗುಣವಾದ ವಧೂ ವರರಿಗೆ ಮದುವೆ ಮಾಡುವುದರಿಂದ ವಧುವು ವರನ ವ್ಯಕ್ತಿತ್ವದ ಮೇಲೂ ವರನು ವಧುವಿನ ವ್ಯಕ್ತಿತ್ವದ ಮೇಲೂ ತಮ್ಮ ತಮ್ಮ ಮನಸ್ಸುಗಳನ್ನು ಹೊಂದಿಸಿಕೊಳ್ಳಬಲ್ಲರು. ಮೊದಮೊದಲು ಒಬ್ಬರಿಗೊಬ್ಬರ ಆಕರ್ಷಣೆಯು ಒತ್ತಾಯಪೂರ್ವಕವಾದರೂ, ಅಭ್ಯಾಸದಿಂದ ಸಹಜವಾಗುತ್ತದೆ. ಬುದ್ಧಿವಂತರಾದವರೂ ಕೂಡ ತಮ್ಮನ್ನು ಆಕರ್ಷಿಸಿದ ಹೆಣ್ಣಿನ ಸ್ವಭಾವದ ವಿಷಯದಲ್ಲಿ ಮೊದಮೊದಲು ಅಜ್ಞಾನಿಗಳೇ ಆಗಿರುತ್ತಾರೆ. ಹೀಗಿರುವಾಗ ಇನ್ನೂ ಲೋಕಾನುಭವವೇ ಇಲ್ಲದ ಯುವಕರು ತಮ್ಮ ಕಾಮಾಸಕ್ತಿಯ ಮನಸ್ಸನ್ನು ಸೆಳೆದ ಸ್ತ್ರೀಯರನ್ನು ಮದುವೆಯಾಗುವುದರಲ್ಲಿ ಎಷ್ಟು ಸಾಫಲ್ಯವಿದ್ದೀತು. ಪ್ರೇಮಕ್ಕೆ ಅನೇಕ ಕಾರಣಗಳಿರುತ್ತವೆ. ಆದರೆ ವಿರೋಧಕ್ಕೆ ಒಂದೇ ಒಂದು ಆಕಸ್ಮಿಕ ಸಾಕು. ವಿರೋಧದಿಂದ ಏಕರೂಪವಾದ ಕ್ರೋಧವು ಬೆಳೆಯುತ್ತದೆ. ಕ್ರೋಧದಿಂದ ನಮ್ಮನ್ನು ಆರೋಪದ ನೋಟವು ಹುಡುಕುತ್ತದೆ. ಮುಂದಾಗುವ ಅನಾಹುತಕ್ಕೆ ಕಾರಣವನ್ನು ಕಾಣದವರಾಗುತ್ತೇವೆ. ಇದರಿಂದ ಬಾಳನೌಕೆಯು ಬರಡು ಬಂಡೆಗೆ ತಾಕಿ ನುಚ್ಚು ನೂರಾಗುಗುತ್ತದೆ. ಅದರಂತೆಯೇ ಒಬ್ಬ ಹುಡುಗಿಯು ಅವಿಚಾರದಿಂದ ಒಬ್ಬ ಹುಡುಗನನ್ನು ಬಯಸುವುದರಿಂದಾಗುವ ಫಲ. ಆದರೆ, ಹಿರಿಯರ ಸಂಕಲ್ಪದಿಂದ ನಡೆದ ಹಿಂದೂ ವಿವಾಹದಿಂದ ಇಂತಹ ದುಷ್ಪರಿಣಾಮಗಳಾಗುವುದು ಅಪರೂಪ. ನಮ್ಮ ಮನಸ್ಸು ನಮಗಾಗಿ ಬಂದ ಒಬ್ಬ ಹೆಂಗಸನ್ನು ಬಯಸಿದರೆ ತೀರಿತು. ಅವಳು ಕರ್ಕಶಧ್ವನಿಯವಳಾಗಲೀ. ಬುದ್ಧಿಶೂನ್ಯಳಾಗಿರಲೀ ಅಸೌಂದರ್ಯವತಿಯಾಗಲೀ ನಮ್ಮನ್ನು ಜಯಿಸಬಲ್ಲಳು. ಸಾಮಾನ್ಯವಾಗಿ ನಮ್ಮ ದುರ್ವಿಚಾರದ ಕಣ್ಣು ಮುಚ್ಚಿಹೋಗುತ್ತದೆ. ನನ್ನವಳು ಎಂಬ ಭಾವನೆಯು ಹೃದಯದಲ್ಲಿ ಆವರಿಸಿರುತ್ತದೆ. ಹಿರಿಯರಾದವರು ವಧೂವರರನ್ನು ಗೊತ್ತುಮಾಡುವಾಗ ಇದನ್ನೆಲ್ಲವನ್ನೂ ಆಲೋಚಿಸಿಯೇ ಇರುತ್ತಾರೆ.

ಗಂಡಹೆಂಡರೆಂಬುದು ನಮ್ಮ ಕಲ್ಪನೆ. ಈ ಕಲ್ಪನೆಯಿಂದ ಆದರ್ಶ ಜೀವನಕ್ಕಾಗಿ ನಮಗೆ ನಾವೇ ಮೀಸಲಾಗುತ್ತೇವೆ. ಈ ಭಾವನೆಯಿಂದ ಪ್ರೀತಿಯ ರೀತಿಯು ವೈಯಕ್ತಿಕ ಪ್ರೇಮವಾಗಿ ಹೊಂದಿಕೊಳ್ಳುತ್ತದೆ. ಸಹಜವಾದ ಬಯಕೆಯು ನಿಧಾನವಾಗಿ ಬಲಿತು, ತನಗಾದ ವ್ಯಕ್ತಿಯೊಡನೆ ತಾನಾಗಿ ಹೊಂದಿಕೊಳ್ಳುತ್ತದೆ. ಆದುದರಿಂದ ಪ್ರೇಮವೆಂಬುದು ಒಂದು ಆಕಸ್ಮಿಕ ಘಟನೆಯಲ್ಲ. ವೈಯಕ್ತಿಕವಾದ ತಡೆಯಲಾಗದ ಬಯಕೆಯಲ್ಲ ಒಂದು ಅನುಭವದ ವಿಷಯ. ಇಂತಹ ಹಿಂದೂ ವಿವಾಹಗಳಿಂದ ಸುಪ್ತ ವಾಗಿದ್ದ ವಧೂವರರ ಮನಸ್ಸಿನ ಭ್ರಮೆಯು ಪರಸ್ಪರ ಆಕಾರಗಳಿಂದ ಸೆಳೆ ಯಲ್ಪಡುತ್ತವೆ. ಒಬ್ಬ ಹುಡುಗ ಮತ್ತು ಹುಡುಗಿಯಲ್ಲಿ ಒಬ್ಬರಿಗೊಬ್ಬರು ಒಟ್ಟಾಗಿ ಬೆಳೆಯುವ ಒಂದು ಸ್ವಾಭಾವಿಕ ಪ್ರವೃತ್ತಿಯಿರುತ್ತದೆ. ಇದರಿಂದ ನಾವು ಒಂದು ಸಾದೃಶ್ಯವನ್ನು ಕಾಣುತ್ತೇವೆ. ಅದರಲ್ಲೂ ಹೊಂದಿ ಕೊಳ್ಳುವ ಗುಣವು ಹೆಂಗಸಿನಲ್ಲಿ ಹೆಚ್ಚಾಗಿ ಕಾಣುತ್ತದೆ. ಅವಳು ಎಲ್ಲಿ ಯಾದರೂ ಸರಿಯೆ ತನ್ನಷ್ಟಕ್ಕೆ ತಾನೆ ಹೊಂದಿಕೊಂಡು ಬಾಳಬಲ್ಲಳು.

ತಿಳಿದು ನೋಡಿದರೆ, ಮದುವೆ ಎಂಬುದು ಅರ್ಥವಿಲ್ಲದ ಆಚರಣೆ ಯಲ್ಲ, ಕೇವಲ ಸಂಪ್ರದಾಯವಲ್ಲ, ಮಾನವ ಸಮಾಜವು ನಂಬುವಂತಹ ಗುಣವುಳ್ಳದ್ದು. ಅದು ನಿಜವಾದ ಪ್ರೇಮದ ಅಂಕುರವಾಗಿ ಭಾವೀ ಬಾಳಿನ ಒಂದು ತಂತ್ರವಾಗಿ ದಾಂಪತ್ಯ ಜೀವನದ ದಿಕ್ಸೂಚಿಯಾಗುತ್ತದೆ. ಮಾನವ ಸಹಜವಾದ ದೈಹಿಕ ಉದ್ದೇಶಕ್ಕೂ, ಸಮಾಜಿಕ ಉದ್ದೇಶಕ್ಕೂ. ಅನು ಗುಣವಾಗಿ ಈ ಪದ್ಧತಿಯು ಅಳವಡಿಸಲ್ಪಟ್ಟಿದೆ. ಅದು ನಮ್ಮನ್ನು ಐಹಿಕ ಮತ್ತು ಪಾರಮಾರ್ಥಿಕ ದೃಷ್ಟಿಗಳೆರಡರಿಂದ ಉತ್ತಮ ಮಾರ್ಗದಲ್ಲಿ ಕರೆ ದೊಯ್ಯುತ್ತದೆ ಎಂದು ನಂಬಿದ ಇವರು ತಮ್ಮ ದಾಂಪತ್ಯ ಜೀವನವನ್ನು ಸುಖವಾಗಿ ಸಾಗಿಸುತ್ತಾ ಬಂದಿದ್ದಾರೆ.

ಇವರ "ನನ್ನ ಸತ್ಯಾನ್ವೇಷಣೆ" (My Search for Truth) ಎಂಬ ಪುಸ್ತಕದಲ್ಲಿ ಇವರ ದಾಂಪತ್ಯ ಜೀವನದ ಛಾಯೆಯು ತಿಳಿಯುತ್ತದೆ. ಇವರಿಗನುಗುಣವಾದ ಪತ್ನಿಯು ಇವರಿಗೆ ದೊರೆತುದು ಇವರ ಅದೃಷ್ಟ ವೆಂದೇ ಹೇಳಬೇಕು. ಮನೆಯಲ್ಲಿ ಸದ್ಗೃಹಿಣಿಯು ಇದ್ದರೆ, ಮನೆಯ ಯಜಮಾನನು ಉತ್ತಮ ಕಾರ್ಯಗಳನ್ನು ಮಾಡುತ್ತಾನೆ. ಪತಿಗೆ ತಕ್ಕ

ಸತಿಯು ದೊರೆತರೆ, ಬಾಳು ಸುಖವಾಗುತ್ತದೆ. ಅಂತೆಯೇ ಇವರಿಗನು ಕೂಲವಾದ ಪತ್ನಿಯು ದೊರೆಕಿದ್ದರು. ತಮ್ಮ ಪತ್ನಿಯ ಸಚ್ಚಾರಿತ್ರ್ಯ ಮತ್ತು ಸದ್ಗುಣಗಳ ವಿಷಯದಲ್ಲಿ ಇವರಿಗೊಂದುಹೆಮ್ಮೆ. "ಯಾವ ಹೆಂಗಸು ಕುತರ್ಕವನ್ನು ಬಿಟ್ಟು ಸತ್ಯಕ್ಕೆ ಅಂಟಿಕೊಂಡಿರುವಳೋ ಮತ್ತು ಯಾವಳು ಬಾಳಿನ ನಿಜವಾದ ಅರ್ಥವನ್ನು ತಿಳಿದು ತನ್ನ ನಿತ್ಯಕರ್ಮಗಳನ್ನು ಮಾಡು ವಳೋ ಅವಳು ಆದರಿಂದ ಬಳಲುವುದಿಲ್ಲ. ಮಧ್ಯಕಾಲದಲ್ಲಿ ಬರಬಹುದಾದ ಗಂಡಾಂತರಗಳಿಂದ ತುಂಬಿದ ಅನಿತ್ಯವಾದ ಈ ಬಾಳಿನಲ್ಲಿ ಬೆಳಕನ್ನು ಹೊಂದುವಳು. ಕಟ್ಟಕಡೆಯು ಸತ್ಯವನ್ನರಿಯಲು ಪ್ರಯತ್ನಿಸುವಳು" ಎನ್ನುವರು.

"ಜಗತ್ತಿನಲ್ಲಿ ಸಹಜ ಜೀವಿಗಳ ಮತ್ತು ಆದರ್ಶಜೀವಿಗಳ ವಾದವಿವಾದ ಗಳು ನಡೆಯುತ್ತಲೇ ಇವೆ. ಸಹಜ ಜೀವಿಗಳೆಂದು ಕೇಳುವವರು, ಯಾವು ದನ್ನು ನಾವು ಮುಟ್ಟಿ ನೋಡಬಲ್ಲೆವೋ ಯಾವುದನ್ನು ನಾವು ಕೈಗಳಿಂದ ಪಡೆಯಬಲ್ಲೆವೋ ಅಂತಹುಗಳಲ್ಲಿ ಮಾತ್ರ ನಂಬಿಕೆಯನ್ನಿಟ್ಟಿದ್ದಾರೆ. ಆದರ್ಶ ಜೀವಿಗಳ ಮಾತು ಹಾಗಲ್ಲ. ಸನಾತನ ಆಚರಣೆಗಳಲ್ಲಿ ಸತ್ಯದ ನಂಬಿಕೆ ಯನ್ನಿಟ್ಟಿದ್ದಾರೆ. ಹಿಂದೂ ಸ್ತ್ರೀಯಾದವಳು ಎರಡನೆಯದಕ್ಕೆ ಹೋರಾಡು ತ್ತಿರುವುದನ್ನು ನಾವು ಕಣ್ಣಾರೆ ಕಾಣುತ್ತಿದ್ದೇವೆ. ಕಟ್ಟಳೆಗಿಂತ ಉದಾಹರಣೆ ಯನ್ನೂ ಮಾತಿಗಿಂತಲೂ, ಕಾರ್ಯಗತವಾದ ಜೀವನದ ಗುರಿಯನ್ನು ನಾವು ದಿನನಿತ್ಯ ಬಾಳಿನಲ್ಲಿ ಕಾಣುತ್ತೇವೆಂದು ಹೇಳುವರು. ಇದಕ್ಕೆ ಉದಾಹರಣೆಯು ಅವರ ಕುಟುಂಬದ ವಿಷಯವೇ ಆಗಿದೆ.

ಹಿಂದೂ ಮಹಿಳೆಯು ತನ್ನ ಪತಿಯ ಸುಖದುಃಖಗಳನ್ನೇ ಅವಲಂಬಿ ಸಿರುತ್ತಾಳೆ ಎಂಬುದನ್ನು ಈ ರೀತಿ ಹೇಳುತ್ತಾರೆ. "ಗಂಡನಾದವನು ನಂಬಿಗಸ್ತನಲ್ಲದಿದ್ದರೂ ಹೆಂಡತಿಯು ಗಂಡನಲ್ಲಿ ನಂಬಿಕೆಯುಳ್ಳವಳಾಗಿರು ತ್ತಾಳೆ. ಅವನು ದುರ್ಬಲನಾದರೂ, ಅವಳು ಅವನನ್ನೇ ಅನುಸರಿಸುತ್ತಾಳೆ ಅವನಿಗೆ ಮಾರ್ಗದರ್ಶನವನ್ನು ಮಾಡುತ್ತಿರುತ್ತಾಳೆ. ಅವನು ರೋಗದಿಂದ ಹಾಸಿಗೆಯನ್ನು ಹಿಡಿದರೆ, ಮನವಾರೆ ಉಪಚರಿಸುತ್ತಾಳೆ. ಒಟ್ಟಿನಲ್ಲಿ ದಹಿಂದೂ ಸ್ತ್ರೀಯರಿಗೆ ಗಂಡನೇ ಆಧಾರವಾಗಿರುತ್ತಾನೆ. ಆದರೂ ಗಂಡಸಾ ದವನು ನಿರಂಕುಶನಲ್ಲ ಅಥವಾ ಹೆಂಗಸಾದವಳು ಅವನ ಗುಲಾಮಳೂ

ಅಲ್ಲ. ದಂಪತಿಗಳಿಬ್ಬರೂ ಉನ್ನತ ಭಾವನೆಗೆ ಗುಲಾಮರಾಗಿರುತ್ತಾರೆ ಎಂದು ಹೇಳುವರು.

ಸರ್ವಪಳ್ಳಿಯವರು ನಾನಾ ದೇಶಗಳನ್ನು ಸುತ್ತಿ, ನಾನಾ ಧರ್ಮೀಯರ ಮಹಿಳೆಯರ ನಡವಳಿಕೆಯನ್ನೂ ಹಿಂದೂ ಮಹಿಳೆಯರ ನಡವಳಿಕೆಯನ್ನೂ ನೋಡಿದ್ದಾರೆ. ಮನಸ್ಸಿನಲ್ಲಿಯೇ ಹೋಲಿಸಿ ಕೊಂಡಿದ್ದಾರೆ. ಸನಾತನ ಆಚರಣೆಯಲ್ಲಿ ಕಳಂಕವಿದ್ದರೆ, ಹಿಂದಿನ ಕಾಲದಂತೆಯೇ ಈಗಲೂ ನಮ್ಮನ್ನು ಯಾರು ಪ್ರೀತಿಸುತ್ತಿದ್ದರು? ನಾವು ಹೊರಗಡೆಯಿಂದ್ಧ ಆಯಾಸವನ್ನು ಹೊಂದಿ, ಎಷ್ಟು ಹೊತ್ತಿಗೆ ಮನೆಗೆ ಬಂದರೂ, ನಮ್ಮನ್ನು ಶಾಂತಿಯಿಂದ ಯಾರು ಕಾಯುತ್ತಿದ್ದರು? ಬಂದಕೂಡಲೇ ತನಗೆಷು ಆಯಾಸವಾಗಿದ್ದರೂ ಹುಸಿ ಸಂತೋಷವನ್ನಾದರೂ ಯಾರು ತೋರತ್ತಿದ್ದರು? ಆದರ್ಶ ಮಹಿಳೆಯು ಪ್ರೀತಿಯ ಸಂಕೇತವಾಗಿರುತ್ತಾಳೆ. ನಮ್ಮನ್ನು ಉನ್ನತ ಸ್ಥಿತಿಯ ಕಡೆಗೆ ಎಳೆದೊಯ್ಯುತ್ತಾಳೆ. ಎಂದು ಹೇಳಿ ಸತಿಪತಿಯರ ಶುದ್ಧವಾದ ಪ್ರೇಮವು ಸ್ವರ್ಗಕ್ಕಿಂತಲೂ ಹಿರಿದಾದ ವರವೆಂದು ತಿಳಿಸುವರು. ಇದು ಅವರ ಸಂಸಾರದ ಸ್ವಾನುಭವ.

ಸರ್ವಪಳ್ಳಿಯವರು ಸದಾ ಅಧ್ಯಯನದಲ್ಲಿ ತೊಡಗಿರುತ್ತಿದ್ದರು ಗೃಹಕೃತ್ಯ ಕಾರ್ಯಭಾರವೆಲ್ಲವೂ ಅವರ ಪತ್ನಿಯವರ ಪಾಲಿನದಾಗಿತ್ತು. ಆದರೂ ಅವರ ಸತಿಯು ಎಂದೂ ಅವರ ವಿಷಯದಲ್ಲಿ ಬೇಸರವನ್ನು ತೋರಿದವರಲ್ಲ. ಅವರ ಕೆಲಸಕಾರ್ಯಗಳಿಗೆ ಅಡ್ಡಿಪಡಿಸಿದವರಲ್ಲ. ಎಲ್ಲಿ ಶುದ್ಧವಾದ ಪ್ರೇಮವಿರುತ್ತದೋ ಅಲ್ಲಿ ಆನಂದವಿರುತ್ತದೆ. ಮನಸ್ಸು ಹರ್ಷವಾಗಿರುತ್ತದೆ. ಯಾವ ಕೆಲಸಕ್ಕೆ ಕೈಹಚ್ಚಿದರೂ ಮನಸ್ಸು ಚೈತನ್ಯದ ಚಿಲುಮೆಯಾಗುತ್ತದೆ. ಸರ್ವಪಳ್ಳಿಯವರು ಇಷ್ಟೆಲ್ಲಾ ಕಾರ್ಯಗಳನ್ನು ಸಾಧಿಸಲು ಮತ್ತು ಇಷ್ಟು ಕೀರ್ತಿಶಾಲಿಗಳಾಗಲು ಮನೆಯಲ್ಲಿ ಗೃಹಲಕ್ಷ್ಮಿಯಂತಿದ್ದ ಇವರ ಪತ್ನಿಯವರ ಸಾತ್ವಿಕಗುಣವೇ ಕಾರಣವೆಂದು ಹೇಳಿದರೆ ಉತ್ಪ್ರೇಕ್ಷೆಯಾಗಲಾರದು.

ಆದರೆ 1956ನೇ ಇಸವಿಯಲ್ಲಿ ಸರ್ವಪಳ್ಳಿಯವರ ಜೀವನದಲ್ಲೊಂದು ಅಪರಿಹಾರ್ಯವಾದ ಅಪಘಾತವಾಯಿತು. ಇವರ ತಪೋಜೀವನದಲ್ಲಿ ನೆರಳಿನಂತೆ ಐವತ್ತು ವರ್ಷಗಳು ಹಿಂಬಾಲಿಸಿ, ಪತಿಯೆ ಪರದೈವವೆಂದು ಸೇವಿಸಿದ

ಇವರ ಧರ್ಮಪತ್ನಿಯು ಕಾಲವಶರಾದರು. ತಮ್ಮ ಜೀವನದಲ್ಲಿಯೇ ಕಣ್ಣೀರಿಡದ ಸರ್ವಪಳ್ಳಿಯವರು ಅಂದು ಕಂಬನಿಯ ಮಡುವಿನಲ್ಲಿ ಮೀಯ ಬೇಕಾಯಿತು. ಅವರೇ ಒಂದು ಕಡೆ "ಜೀವನವು ಅಸ್ಥಿರವಾದುದು. ಬಯಸದೆಯೆ ಸಾವು ಎಲ್ಲರಿಗೂ ಬರುತ್ತದೆ. ಇದಕ್ಕೆ ರಾಜ ಅಥವಾ ಭಿಕ್ಷುಕರೆಂಬ ತಾರತಮ್ಯವಿಲ್ಲ" ಎಂದಿದ್ದಾರೆ. ಒಂದು ಆಳವಾದ ಜ್ಞಾನ ದಿಂದ ಪತ್ನೀವಿಯೋಗದ ವ್ಯಥೆಯನ್ನು ದೂರೀಕರಿಸಬಲ್ಲರು.

ಇವರಿಗೆ ನಾಲ್ಕುಮಂದಿ ಹೆಣ್ಣುಮಕ್ಕಳೂ ಒಬ್ಬ ಗಂಡು ಮಗನೂ ಇದ್ದಾರೆ. ಇವರ ಮಗ ತಂದೆಯಷ್ಟೇ ಮೇಧಾವಿಯಲ್ಲದಿದ್ದರೂ ಕೀರ್ತಿ ಶಾಲಿಯಾಗದಿದ್ದರೂ ತನ್ನ ಕಾಲಿನ ಮೇಲೆ ತಾನು ನಿಂತಿದ್ದಾನೆ. ದೆಹಲಿ ಯಲ್ಲಿರುವ ಪ್ರಾಚ್ಯ ಸಂಶೋಧನಾ ಇಲಾಖೆಯಲ್ಲಿ ಉತ್ತಮ ಹುದ್ದೆಯಲ್ಲಿ ದ್ದಾನೆ.

ಸಾಮಾನ್ಯವಾಗಿ ಪ್ರತಿಯೊಬ್ಬನಿಗೂ ಏನಾದರೂಂದು ಚಿಂತೆಯು ಇದ್ದೇ ಇರುತ್ತದೆ. ಹಾಗೆಯೇ ಸರ್ವಪಳ್ಳಿಯವರಿಗೆ ಕೆಲವು ಚಿಂತೆಗಳಿರ ಬಹುದು. ಆದರೂ ವಿವಾಹ ವಾದಗಿನಿಂದ ಸಂಸಾರದಲ್ಲಿ ಅಂತಹ ಕ್ಲಿಷ್ಟಕರ ವಾದ ತೊಡಕುಗಳಿಗೆ ಅವಕಾಶ ಕೊಟ್ಟವರಲ್ಲ. ಸಾವು ಮನುಷ್ಯ ಪ್ರಯತ್ನಕ್ಕೆ ಮೀರಿದುದು. ಮಾನವ ಸಹಜವಾದ ಪ್ರೇಮಾ ಘಾತವು ಸರ್ವಪಳ್ಳಿಯವರಿಗಾಗಿದೆ. ಇದು ಹೊರತು ಇವರ ಸಂಸಾರವು ಸದಾ ಸುಖ ಮಯವಾದುದು.

## ಅಭ್ಯಾಸ

1. ಹಿಂದೂ ವಿವಾಹ ಪದ್ಧತಿಯು ಅತ್ಯುತ್ತಮವಾದುದು.
2. ಹಿಂದೂ ಮಹಿಳೆಯರ ವೈಶಿಷ್ಟ್ಯ.

## ಅಂತರರಾಷ್ಟ್ರೀಯ ಸಂಸ್ಥೆಗಳಲ್ಲಿ

### ವಿಶ್ವಸಂಸ್ಥೆಯಲ್ಲಿ

1914 ರಿಂದ 1918ರ ವರೆಗೆ ನಡೆದ ಮೊದಲನೆಯ ಯುದ್ಧದಿಂದ ಪ್ರಪಂಚಕ್ಕೆ ಅಪಾರ ನಷ್ಟವಾಯಿತು. ಇದನ್ನರಿತ ಗಣ್ಯವಕ್ತಿಗಳು ಯುದ್ಧ ವನ್ನು ತಡೆಗಟ್ಟಬೇಕೆಂದು ಆಲೋಚಿಸಿ, ಲೀಗ್ ಆಫ್ ನೇಷನ್ಸ್ ಎಂಬ ಪ್ರಪಂಚದ ನ್ಯಾಯಾಲಯ ಒಂದನ್ನು ಸ್ಥಾಪಿಸಿದರು. ಆದರೂ 1939ರಲ್ಲಿ ಮತ್ತೆ ಯುದ್ಧವು ಬ್ರಿಟಿಷರಿಗೂ ಜರ್ಮನರಿಗೂ ಪ್ರಾರಂಭವಾಯಿತು. ಈ ಸೋಂಕು ಯೂರೋಪಿನಲ್ಲೆಲ್ಲಾ ಹರಡಿ ರಷ್ಯಾ ಮತ್ತು ಜರ್ಮನಿಗೆ 1945ರ ವರೆಗೆ ಮಹಾಯುದ್ಧವಾಗಿ ಪರಿಣಮಿಸಿತು. ಈ ಎರಡುದೇಶಗಳೂ ತಮ್ಮ ತಮ್ಮ ಶಕ್ತಿ ಪ್ರಗತಿಗಾಗಿ ವಿಜ್ಞಾನಕ್ಕೆ ಮರೆಹೊಕ್ಕವು. ಅಣುಬಾಂಬು ಗಳ ಉತ್ಪಾದನೆಯಿಂದ ಬಲಯುತವಾದುವು. ಇವುಗಳನ್ನು ಯಾವ ಮೂಲೆ ಗಳಲ್ಲಿ ಪ್ರಯೋಗಿಸಿದರೂ ಅದರ ಪರಿಣಾಮವು ಕೆಲವೇ ಘಂಟೆಗಳಲ್ಲಿ ಜಗತ್ತನ್ನು ಪ್ರಳಯಮಾಡುವ ರೂಪವನ್ನು ತಾಳಿದುವು. ಇದರಿಂದ ಯುದ್ಧಮಾಡಿದ ರಾಷ್ಟ್ರಗಳಿಗೆ ನಷ್ಟವಾದುದಲ್ಲದೆ ಪ್ರಪಂಚವೇ ತಲ್ಲಣಿಸು ವಂತಾಯಿತು. ಮಾನವ ಕುಲಕ್ಕೆ ಯುದ್ಧವು ಕಳಂಕವೆಂಬುದು ಮನವರಿಕೆ ಯಾಯಿತು.

ಸ್ಯಾನ್ ಫ್ರಾನ್ಸಿಸ್ಕೊದಲ್ಲಿ 1945ನೇ ಜೂನ್ 26 ರಂದು ಮತ್ತೆ ಕೆಲವು ಗಣ್ಯರು ಸೇರಿ ವಿಶ್ವಸಂಸ್ಥೆಯೊಂದನ್ನು ಸ್ಥಾಪಿಸಿದರು. ಅದಾದ ಧರ್ಮ, ಮೂರು ವರ್ಷಗಳ ನಂತರ, ಅದರಲ್ಲಿ ಜಾತಿ, ಜನಾಂಗ, ಬಣ್ಣ, ಭಾಷೆ, ರಾಜಕೀಯ ಮತ್ತಿತ್ತರ ಭಿನ್ನಾಭಿಪ್ರಾಯಗಳಾಗಲೀ ರಾಷ್ಟ್ರೀಯ ಅಥವಾ ಸಾಮಾಜಿಕ ಸ್ಥಿತಿಗಳ ತಾರತಮ್ಯವಾಗಲೀ ಇರಕೂಡದೆಂದೂ ಸರ್ವರಿಗೂ ಸಮನಾದ ಹಕ್ಕುಭಾದ್ಯತೆಗಳಿರಬೇಕೆಂದು ತೀರ್ಮಾನವಾಯಿತು. ಅದರ ಮುಖ್ಯೋದ್ದೇಶವು ಯುದ್ಧನಿವಾರಣೆ ಮಾತ್ರವಲ್ಲದೆ. ಪ್ರಪಂಚಕ್ಕೆ ಕ್ಷೇಮಾಭ್ಯುದಯಗಳನ್ನು ಸಾಧಿಸಲು, ಸಾಮಾಜಿಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳ ಮೂಲಕ ಪರಸ್ಪರ ರಾಷ್ಟ್ರಗಳ ಐಕ್ಯತೆಯನ್ನು ಸಾಧಿಸುವ

ದಲ್ಲದೆ ಎಲ್ಲಾ ರಾಷ್ಟ್ರಗಳ ಆರ್ಥಿಕ ಮಟ್ಟವನ್ನೂ ಉತ್ತಮಗೊಳಿಸುವುದಾಗಿದೆ. ದುರ್ಬಲ ರಾಷ್ಟ್ರಗಳ ಮೇಲೆ, ಪ್ರಬಲ ರಾಷ್ಟ್ರಗಳು ಆಕ್ರಮಣವನ್ನು ಮಾಡಿದರೆ ಅಂತಹ ರಾಷ್ಟ್ರಗಳ ಮಧ್ಯದಲ್ಲಿ ಪ್ರವೇಶಿಸಿ ಸಂಧಾನವನ್ನು ಮಾಡಲು ಪ್ರಯತ್ನಿಸುತ್ತದೆ. ಅದು ವಿಫಲವಾದಾಗ ತೊಂದರೆಗೀಡಾದ ರಾಷ್ಟ್ರವನ್ನು ರಕ್ಷಿಸಲು ತನ್ನದೇ ಆದ ಸೈನ್ಯಬಲವನ್ನೂ ಕೂಡ ಅದು ಹೊಂದಿದೆ.

ಈ ಸಂಸ್ಥೆಗೆ ಪ್ರಪಂಚದ ಅನೇಕ ರಾಷ್ಟ್ರಗಳು ಸದಸ್ಯತ್ವವನ್ನು ಪಡೆದಿವೆ. ಅವುಗಳಲ್ಲಿ ಭಾರತವೂ ಒಂದು. ಅದರ ಸಭೆಯು ವರ್ಷಕೊಮ್ಮೆ ಪ್ರಪಂಚದ ನಾನಾ ಭಾಗಗಳ ಕೇಂದ್ರ ನಗರಗಳಲ್ಲಿ ಸೇರುತ್ತದೆ. ಡಾ|| ರಾಧಾಕೃಷ್ಣನ್ನರು ವಿಶ್ವಸಂಸ್ಥೆಯಲ್ಲಿ ಅನೇಕವೇಳೆ ಮಾತನಾಡಿದ್ದಾರೆ. ಕ್ಯಾರೋ ವಿಶ್ವವಿದ್ಯಾನಿಲಯದಲ್ಲಿ ಸರ್ವಪಳ್ಳಿಯವರು ವಿಶ್ವಸಂಸ್ಥೆಯ ವಿಷಯವಾಗಿ ಮಾತನಾಡುತ್ತಾ ಈ ರೀತಿ ಹೇಳುತ್ತಾರೆ:—

"ಬಹುಕಾಲದಿಂದ ಎಲ್ಲಾ ದೇಶದ ಪ್ರವಾದಿಗಳೂ ಮನುಷ್ಯಜಾತಿಯನ್ನು ಒಂದುಮಾಡಲು ಪ್ರಯತ್ನಪಟ್ಟಿದ್ದಾರೆ. ನಮ್ಮ ಹಿಂದೂಮತವು 'ಮೂರುಲೋಕಗಳು ನನ್ನ ಸ್ವದೇಶವೆಂದೂ, ಜಗತ್ತಿನ ಜನರೆಲ್ಲರೂ ನನ್ನ ಸೋದರರೆಂದೂ ಹೇಳುತ್ತದೆ. ಬುದ್ಧನು ಪರಿಶುದ್ಧವಾದ ಬಾಳನ್ನು ತಿಳಿಸಿ ಪ್ರಪಂಚದಲ್ಲಿ ಪ್ರಾಮಾಣಿಕವಾದ ಬಾಳನ್ನು ಬಯಸುವ, ಧರ್ಮರಾಜ್ಯದ ಸ್ಥಾಪನೆಯಾಗಬೇಕೆನ್ನುತ್ತಾನೆ! ಕಾನ್‌ಪ್ಯೂಷಿಯಸ್ಸನು ಸ್ವರ್ಗದ ಕೆಳಗೆ ಏಕೈಕ ಕುಟುಂಬವಾಗಲಿ! ಎನ್ನುತ್ತಾನೆ. ಕ್ರೈಸ್ತಮತವು ಒಳ್ಳೆಯ ಉದ್ದೇಶ ಮತ್ತು ಶಾಂತಿಯನ್ನು ಸಾರುತ್ತದೆ. ಸಂತಪಾಲನ ಅಭಿಪ್ರಾಯದಲ್ಲಂತೂ ಒಬ್ಬರಂತೆ ಮತ್ತೊಬ್ಬರು ಭಿನ್ನತೆಯ ಮಾತೇ ಇಲ್ಲ. ದೇವರ ದೃಷ್ಟಿಯಲ್ಲಿ ನಾವೆಲ್ಲರೂ ಒಂದೇ. ಆದುದರಿಂದ ವಿಶ್ವಕುಟುಂಬವನ್ನು ಆಶಿಸದ ಪ್ರವಾದಿಯೊಬ್ಬನಿಲ್ಲ. ದೇಶ, ಕಾಲ, ಭಾಷೆಗಳು ಭಿನ್ನವಾದರೂ, ಭಾವನೆ ಮಾತ್ರ ಒಂದೇ ಆಗಿದೆ. ಗುರು, ಶಿಷ್ಯ; ತಂದೆ, ಮಕ್ಕಳು; ಕಾರ್ಮಿಕ, ಮಾಲೀಕ; ಮುಂತಾದವರೆಲ್ಲರೂ ಧರ್ಮದಿಂದ ಆಳಲ್ಪಡುತ್ತಾರೆಯೇ ಹೊರತು, ಅಸೂಯೆ ಮತ್ತು ನಿಂದೆಯಿಂದಲ್ಲ" ಎಂದು ಹೇಳಿ 'ಪ್ರೇಮಮಯವಾದ ಜೀವನಕ್ಕಾಗಿ ಮಾನವತ್ವ' ಎನ್ನುತ್ತಾರೆ.

"ಆದರೂ, ವಿಶ್ವಶಾಂತಿಯನ್ನು ಸ್ಥಾಪಿಸುವುದು ಅಷ್ಟು ಸುಲಭವಲ್ಲ. ಹಾಗೆ ಮಾಡಬೇಕಾದರೆ, ಮೊದಲು ಯುದ್ಧವು ನಿಷೇಧವಾಗಬೇಕು. ಅದಕೆ ಪ್ರತಿಯೊಬ್ಬರಲ್ಲೂ ಸಹನೆಯು ಬೇಕು. ಒಬ್ಬರೊನ್ನೊಬ್ಬರು ಅರಿತುಕೊಳ್ಳ ಬೇಕು. ಹಾಗೆ ಅರಿತುಕೊಳ್ಳಲು ತಾಳ್ಮೆಯುಬೇಕು. ಇವು ಮಾತಿನಿಂದ್ರ ಬರತಕ್ಕವುಗಳಲ್ಲ. ಛಲದಿಂದ ಅಭ್ಯಾಸವನ್ನು ಮಾಡಿಕೊಳ್ಳಬೇಕು. ನಿಂದೆಗ್ರೆ ಸೌಜನ್ಯವನ್ನೂ, ಅಡ್ಡಿ ಆತಂಕಗಳಿಗೆ ಕಾರಣಗಳನ್ನೂ ಅನುಮಾನ ಮತು ಅವಮಾನಗಳಿಗೆ ನಂಬಿಕೆ ಮತ್ತು ಒಳ್ಳೆಯ ಭಾವನೆಗಳನ್ನು ತೋರಬೇಕು. ಇದೊಂದೇ ದಾರಿ, ನಮ್ಮ ಎದುರಾಳಿಗಳ ಮನಸ್ಸನ್ನು ಪರಿವರ್ತನೆಗೊಳಿಸು ವುದಕ್ಕೆ!" ಎನ್ನುತ್ತಾರೆ.

ಮತ್ತೊಂದುಕಡೆ ಉಪನ್ಯಾಸವನ್ನು ಮಾಡುತ್ತಾ, ಆಧುನಿಕ ಪ್ರಪಂಚ ದಲ್ಲಿ ಯಾವ ರಾಷ್ಟ್ರವೂ ಕೂಡ ಸ್ವತಂತ್ರವಾಗಿ ಬಾಳಲಾಗದು. ಒಂದ ಕ್ಕೊಂದು ಆಧಾರವಾಗಿ ಅನ್ಯೋನ್ಯತೆಯಿಂದ ಬಾಳಬೇಕು. ಪ್ರತಿಯೊಬ್ಬರೂ ಮೈತ್ರಿಯಿಂದ ವರ್ತಿಸಬೇಕು. ಇಂದು ಪ್ರಪಂಚಕ್ಕೆ ಬೇಕಾದುದು ರಾಜಕೀಯವಲ್ಲ; ಸೈನ್ಯವಲ್ಲ; ನಮ್ಮ ಎದುರಾಳಿಗಳ ತಪ್ಪನ್ನು ಹುಡುಕುವ ಮನೋಭಾವನೆಯಲ್ಲ. ಮುಖ್ಯವಾಗಿ ವಿನಯಬೇಕು. ಈ ಗುಣಗಳನ್ನು ಹೊಂದಬೇಕಾದರೆ, ನಮ್ಮ ಮನಸ್ಸಿನ ಭಾವನೆಯನ್ನೇ ಬದಲಾಯಿಸುವ ವಿದ್ಯಾಭ್ಯಾಸವು ಬೇಕಾಗಿದೆ ಎಂದು ಹೇಳುವರು.

ವಿಶ್ವಸಂಸ್ಥೆಯಲ್ಲಿ ಸದಸ್ಯತ್ವವನ್ನು ಪಡೆದಿರುವ ಪ್ರಬಲ ರಾಷ್ಟ್ರಗಳು ತಮ್ಮ ವಸಾಹತುಗಳ ಮೇರೆ ಬಲವಂತವನ್ನು ತೋರಬಾರದು. ಅಲ್ಲಿನ ಜನತೆಯು ದುರ್ಬಲರಾಗಿದ್ದರೂ, ಬಡವರಾಗಿದ್ದರೂ, ಹಸಿದಿದ್ದರೂ ಕೂಡ, ಅವರಲ್ಲಿ ವಿಚಾರ ಶಕ್ತಿಯು ಇರುತ್ತದೆ. ಸ್ವಾತಂತ್ಯ್ರಾಕಾಂಕ್ಷೆಯ ಬೆಳೆಯುತ್ತಿರುತ್ತದೆ. ಆದುದರಿಂದ ಪ್ರಬಲರಾಷ್ಟ್ರಗಳು, ತಮ್ಮ ಆಧೀನ ದಲ್ಲಿರುವ ರಾಷ್ಟ್ರಗಳಲ್ಲಿ ಶಾಂತಿಯು ನೆಲಸುವಂತೆ ಪ್ರಯತ್ನಿಸಬೇಕು. ವಿಶ್ವಸಂಸ್ಥೆಯು ವಸಾಹತುಗಳನ್ನಾಗಿ ಮಾಡಿಕೊಳ್ಳಲು ಬಲಯುತ ರಾಷ್ಟ್ರ ಗಳಿಗೆ ಅವಕಾಶವನ್ನು ನೀಡಬಾರದು ಭ್ರಷ್ಟಾಚಾರಕ್ಕೆ ಬೆಂಬಲವನ್ನು ನೀಡಿದರೆ, ದೇಶೀಯರಿಗೆ ಪ್ರಾತಿನಿಧ್ಯ ಕೊಡದಿದ್ದರೆ, ಅನ್ಯಾಯ ಮಾಡಿ ದಂತಾಗುತ್ತದೆ. ಮಾನವನ ಹಕ್ಕು ಭಾದ್ಯತೆಗಳನ್ನು ಉಲ್ಲಂಘಿಸಲು,

ಆಶಿಯಾದ ಭೋಗಕ್ಕೆಡೆಕೊಡುವ ಆರ್ಥಿಕ ಮಟ್ಟವನ್ನು ವೃದ್ಧಿಗೊಳಿಸು ವುದು ಮತ್ತು ಸೈನ್ಯದ ತೃಪ್ತಿಗೆ ಬೆಂಬಲವನ್ನು ನೀಡುವುದು, ವಿಶ್ವಶಾಂತಿಗೆ ಭಂಗವನ್ನು ತಂದಂತಾಗುತ್ತದೆ.

ನಮಗೆ ಮಾನವೀಯತೆಯ ಭಾವನೆಯು ಬೇಕಾಗಿದೆ. ಅದಕ್ಕಾಗಿ ಸ್ವಾರ್ಥಕ್ಕನುಗುಣವಾದ ಆಲೋಚನೆಗಳನ್ನು ಮಾಡಬಾರದು. ಅಧೀನ ದಲ್ಲಿರುವ ವಸಾಹತುಗಳನ್ನು ಸ್ವತಂತ್ರಗೊಳಿಸಬೇಕು. ನಮ್ಮದು ಸರಿ! ಎದುರಾಳಿಗಳದು ತಪ್ಪೆಂದು ನಾವು ಭಾವಿಸುತ್ತೇವೆ. ಆ ನಮ್ಮ ಭಾವನೆಯೇ ಸರಿಯಾಗಿರಲಾರದು! ನನ್ನದೆಂಬ ಹೆಚ್ಚುಗಾರಿಕೆಯನ್ನು ತ್ಯಜಿಸಿದರೆ, ನಿಜ ಸ್ಥಿತಿಯು ಅರಿವಾಗುತ್ತದೆ. ಮಿತಿಯಿಲ್ಲದ ಆತ್ಮ ಶ್ಲಾಘನೆಯಿಂದ ದೊಡ್ಡ ಸ್ತಿಕೆಯಿಂದ, ನಾವು ಭೀತಿಯ ಗುಲಾಮರಾಗುತ್ತೇವೆ. ಗಾಂಧೀಜಿಯವರು "ನಿಮ್ಮ ಶತ್ರುಗಳನ್ನು ನೀವು ಪ್ರೀತಿಸಿ" ಎಂದು ಹೇಳಿದ ಮಾತು ಯಾವ ಪ್ರವಾದಿಯ ಮಾತಿಗೂ ಕಡಿಮೆಯೇನಲ್ಲ. ಶತ್ರುಗಳನ್ನು ಪ್ರೀತಿಸಿದ ಮೇಲೆ ಯುದ್ಧವೆಲ್ಲಿ ಬಂತು?

ಒಟ್ಟನಲ್ಲಿ ಹೇಳುವುದಾದರೆ, ಪರಸ್ಪರ ಅರಿಯುವಿಕೆಯಿಂದ ಮತ್ತು ಸಮಾನತೆಯಿಂದ ಪ್ರಪಂಚದಲ್ಲಿ ಸಹಕಾರವು ಸಾಧ್ಯವಾದೀತು. ಸ್ವತಂತ್ರ ರಾಗಲು ನಮಗೆ ಹೇಗೆ ಬಯಕೆಯು ಇದೆಯೋ ಹಾಗೆಯೇ ಪ್ರತಿಯೊಂದು ರಾಷ್ಟ್ರಕ್ಕೂ ಬಯಕೆಯಿದೆ. ಯಾರೂ ತನ್ನ ಬಡತನಕ್ಕೆ ಆಲಕ್ಷ್ಯವನ್ನು ತೋರಲಾರರು. ಬಡತನವಿದ್ದೆಡೆಯಲ್ಲಿ ಕಡಿದಾಟವಿರುತ್ತದೆ. ಮಲಿನ ತೆಯು ಇದ್ದೆಡೆಯಲ್ಲಿ ರೋಗವಿರುತ್ತದೆ. ಇವೆಲ್ಲದರ ಸುಧಾರಣೆಯೆ ಶಾಂತಿಯುಗುರಿಯನ್ನು ಮುಟ್ಟುವ ದಾರಿಯಾಗುತ್ತದೆ. ವಿಶ್ವಸಂಸ್ಥೆಯು ಶಾಂತಿಗಾಗಿ ಜಗತ್ತನ್ನು ಮಾರ್ಪಡಿಸುವ ಸಾಧನವಾಗಬೇಕು ಎಂದು ಹೇಳುತ್ತಾರೆ.

ವಿಶ್ವಸಂಸ್ಥೆಯು ಕಾರ್ಯಾಂಗ ವಿಧಾಯಕಗಳಲ್ಲಿ ಭಾರತದ ಪಂಚ ಶೀಲಗಳನ್ನು ಅಳವಡಿಸಿಕೊಳ್ಳಲು ರಾಧಾಕೃಷ್ಣನ್‌ರವರ ಪ್ರಭಾವವೇ ಕಾರಣವೆಂದು ಹೇಳಬೇಕಾಗುತ್ತದೆ. ವಿಶ್ವಸಂಸ್ಥೆಗೆ ಸೇರದೇ ಉಳಿದಿದ್ದ ಚೀಣಾ, ಜಪಾನ್ ದೇಶಗಳನ್ನು ಸೇರಿಸಲು ಬಹಳ ಪ್ರಯತ್ನಿಸಿದವರಲ್ಲಿ ಸರ್ವ ಪಳ್ಳಿಯವರ ಪಾತ್ರವು ಹೆಚ್ಚಿನದು. ಚೀಣಾದೇಶವಂತೂ ಇನ್ನೂ ಸೇರಿಲ್ಲ;

## ಯುನಸ್ಕೋದಲ್ಲಿ

ವಿಶ್ವಸಂಸ್ಥೆಯ ಒಂದು ಅಂಗವಾಗಿ 'ಯುನೆಸ್ಕೋ' ಎಂಬ ಸಂಸ್ಥೆಯು ಪ್ಯಾರಿಸ್ಸಿನಲ್ಲಿ 1946ರಲ್ಲಿ ಸ್ಥಾಪಿತವಾಯಿತು. ಅದರ ಉದ್ದೇಶವು ಅಂತರ ರಾಷ್ಟ್ರೀಯ ಸಮಸ್ಯೆಗಳನ್ನು ಪರಿಹರಿಸವುದಲ್ಲದೆ, ಜಗತ್ತಿನ ಜನರ ಮನಸ್ಸನ್ನು ಶಾಂತಿಯ ಕಡೆಗೆ, ಮಾನವೀಯತೆಯ ಕಡೆಗೆ, ಮತ್ತು ತೃಪ್ತಿಯ ಭಾವನೆಯ ಕಡೆಗೆ ವಾಲುವಂತೆ ಮಾಡುವುದಾಗಿದೆ. ಬೇರೆ ಬೇರೆ ರಾಷ್ಟ್ರಗಳಲ್ಲಿನ ವಿದ್ಯಾಭ್ಯಾಸ, ವಿಜ್ಞಾನ, ಸಾಮಾಜಿಕ ಸ್ಥಿತಿ ಮತ್ತು ನಾಗರಿಕತೆಗಳಲ್ಲಿ ಪರಸ್ಪರ ಸಾಮ್ಯವನ್ನುಂಟುಮಾಡುವುದು ಇದರ ಗುರಿಗಳಲ್ಲೊಂದು ಎಲ್ಲಕ್ಕಿಂತಲೂ ಹೆಚ್ಚಾಗಿ, ಹಿಂದುಳಿದ ದೇಶಗಳಿಗೆ ವಿದ್ಯಾಭ್ಯಾಸ, ಸಾಹಿತ್ಯ ಆರೋಗ್ಯ, ಗ್ರಾಮನೈರ್ಮಲ್ಯ ಮುಂತಾದುವುಗಳನ್ನೊದಗಿಸುವುದು ಮತ್ತು ಸುಧಾರಿಸುವುದೂ ಇದರ ಕರ್ತವ್ಯಗಳು. ಮಾನವನ ಮೂಲತತ್ವಗಳನ್ನೂ ಅದಕ್ಕನುಗುಣವಾದ ವಿದ್ಯಾಭ್ಯಾಸವನ್ನೂ ಹರಡಲು ಈ ಸಂಸ್ಥೆಯು ನಾನಾ ಭಾಷೆಗಳನ್ನು ಬಳಸಿಕೊಂಡಿದೆ. ಜನರ ನಿತ್ಯಜೀವನಕ್ಕೆ ಸಹಕಾರಿಯಾಗುವಂತೆ ಸಾಮಾನ್ಯ ವಿಜ್ಞಾನವನ್ನೂ ಹರಡುತ್ತಿದೆ.

ಅದಕ್ಕೆ ಅನೇಕ ರಾಷ್ಟ್ರಗಳ ಪ್ರತಿಭಾವಂತ ಪ್ರತಿನಿಧಿಗಳು ಸದಸ್ಯರಾಗಿದ್ದಾರೆ. ನಮ್ಮ ದೇಶವೂ ಕೂಡ ಅಲ್ಲಿಗೆ ಮೇಧಾವಿಗಳನ್ನು ಕಳುಹಿಸಲು ನಿರ್ಧರಿಸಿತು. ಅದರ ಕಾರ್ಯಭಾರವು ಡಾ|| ರಾಧಾಕೃಷ್ಣನ್‌ರವರಿಗೆ ಸೇರಿತು. ಭಾರತದ ಪ್ರತಿನಿಧಿಗಳ ನಾಯಕರಾಗಿ 1946ರಲ್ಲಿ ಪ್ಯಾರಿಸ್ಸಿಗೆ ಹೋದರು. ಅದರ ಮಾರನೆಯ ವರ್ಷಕ್ಕೆ ಮೆಕ್ಸಿಕೋ ನಗರದಲ್ಲಿ ನಡೆದ ಅದರ ಸಭೆಯ ಕಾರ್ಯಾಡಳಿತ ಸಮಿತಿಯ ಸದಸ್ಯರಾಗಿ ಕೆಲಸ ಮಾಡಿದರು.

ಒಮ್ಮೆ ಅಲ್ಲಿ ಉಪನ್ಯಾಸವನ್ನು ಮಾಡುತ್ತಾ "ನಾವು ಯುವಕರು ಅಥವಾ ಮುದುಕರು ಎಂಬ ಭೇದವನ್ನು ತೋರದೆ, ಸರ್ವರಿಗೂ, ಸತ್ಯ ಮತ್ತು ಪ್ರೇಮದ ಆಧಾರವಿರುವ ಮೂಲ ವಿದ್ಯಾಭ್ಯಾಸವನ್ನು ನೀಡಬೇಕು, ಪರಸ್ಪರವಾಗಿ ಒಬ್ಬರನ್ನೊಬ್ಬರು ಅಥವಾ ಒಂದು ರಾಷ್ಟ್ರವು ಮತ್ತೊಂದ ರಾಷ್ಟ್ರವನ್ನು ತಿಳಿದು ಕೊಳ್ಳುವುದು ಅವಶ್ಯಕ. ಇದೇ ರಾಷ್ಟ್ರಗಳು ಸ್ಥಿರವಾಗಿ ಉಳಿಯುವ ಅಭ್ಯುದಯದ ಬೆಲೆ. ಸರ್ವನಾಶ ಮಾಡುವ ಆಯುಧಗಳನ್ನು ತಡೆಹಾಕಿದರೆ ಅಥವಾ ನಾಶಮಾಡಿದರೆ ಸಾಲದು

ಪ್ರೇಗ್‌ನ ಚಾರ್ಲ್ಸ್ ವಿಶ್ವವಿದ್ಯಾನಿಲಯ, 1956



ಯುನೆಸ್ಕೋ ಮಂಡುವೋಜಿನ ಪರಿಷತ್ತು, 1954

ಅವನ್ನು ನಾಶಮಾಡುವುದು ಸುಲಭ. ಆದರೆ, ಅದನ್ನು ಮತ್ತೆ ನಿರ್ಮಿಸಬಲ್ಲ ಜ್ಞಾನವನ್ನು ನಾಶಮಾಡಲಾಗದು. ಇಂದಲ್ಲ ನಾಳೆ ಮತ್ತೆ ಅವನ್ನು ತಯಾರಿಸಿಯೇ ತಯಾರಿಸುವರು ಉಪಯೋಗಿಸಿಯೇ ಉಪಯೋಗಿಸುವರು ಆದುದರಿಂದ ಆ ಶಕ್ತಿಯನ್ನು ಜನತೆಯ ಏಳಿಗೆಗಾಗಿ ಬಳಸುವ ಉತ್ತಮ ಜ್ಞಾನವನ್ನು ನೀಡಬೇಕು. ಜನತೆಯ ಮನಸ್ಸನ್ನು ಬದಲಾವಣೆ ಮಾಡಬೇಕು ಎಂದು ನುಡಿದರು.

1948–49ನೇ ಸಾಲಿನಲ್ಲಿ ಯುನೆಸ್ಕೋದ ಕಾರ್ಯಾಡಳಿತ ಮಂಡಲಿಯ ಅಧ್ಯಕ್ಷರಾದರು. ಅನಂತರ ಈ ಸಂಸ್ಥೆಯನ್ನು ತ್ಯಜಿಸಿದ್ದ ರಷ್ಯಾ, ಹಂಗೇರಿ, ಜೆಕೋಸ್ಲವೇಕಿಯಾ, ಪೋಲೆಂಡ್ ಮುಂತಾದ ರಾಷ್ಟ್ರಗಳು ಮತ್ತೆ ಇದರ ಸದಸ್ಯಸ್ಥಾನವನ್ನು ಪಡೆದವು. ಆದರೂ ಅವುಗಳಿಗೆ ಮತದಾನದ ಹಕ್ಕನ್ನು ಸಮಿತಿಯು ನೀಡಿರಲಿಲ್ಲ. ಅವುಗಳಿಗೆ ಹಕ್ಕನ್ನು ಕೊಡಿಸಲು ಸರ್ವಪಳ್ಳಿಯವರು ಹೋರಾಡಿದರು.

1952–54 ಮತ್ತು 58 ಈ ವರ್ಷಗಳಲ್ಲಿ, ಅದರ ಸಾಮಾನ್ಯ ಸಭೆಯ ಅಧ್ಯಕ್ಷರಾಗಿ ಚುನಾಯಿಸಲ್ಪಟ್ಟರು. ಅದರ ಕಾರ್ಯವನ್ನೂ ಉತ್ತಮವಾಗಿಯೇ ನಿರ್ವಹಿಸಿದರು. ಪೂರ್ವ ದೇಶೀಯರಲ್ಲಿ ಅದರ ಅಧ್ಯಕ್ಷರಾದವರ ಪೈಕಿ ಇವರೇ ಮೊಟ್ಟಮೊದಲಿಗರು.

ಪ್ಯಾರಿಸ್ಸಿನಲ್ಲಿ ಈ ಸಭೆಯ ಅಧ್ಯಕ್ಷ ಪೀಠದಲ್ಲಿ ಮಾತನಾಡುತ್ತಾ, ಈ ಸಂಸ್ಥೆಯ ಉದ್ದೇಶವು 'ಸ್ವಾತಂತ್ರ್ಯ ಮತ್ತು ಅಭಿವೃದ್ಧಿ'ಗಳನ್ನು ಏರ್ಪಡಿಸುವುದಾಗಿದೆ ಎಂದು ಹೇಳುವುದು ಸುಲಭ. ಈ ಪ್ರಪಂಚದಲ್ಲಿ ಹಸಿದವನು, ಛಳಿಯಲ್ಲಿ ನಡುಗುವವನು, ಮತ್ತೊಬ್ಬನಿಗೆ ಗುಲಾಮನಾಗಿರುವವನು, ಕೊಳಕು ಮತ್ತು ರೋಗದಲ್ಲಿರುವವನು ಮತ್ತು ಸಾಮಾನ್ಯ ಜೀವನಕ್ಕೆ ಅತ್ಯಗತ್ಯವಾದ ವಸ್ತುಗಳನ್ನು ಹೊಂದಲಾರದವನು ಯಾರು ತಾನೆ ಸುಖಿಯಾಗಿರಬಲ್ಲನು ? ಇವುಗಳ ಸೌಲಭ್ಯವನ್ನು ಒದಗಿಸುವುದೇ ಈ ಸಂಸ್ಥೆಯ ಗುರಿಯಾಗಿದೆ. ಇವನ್ನು ಸಾಧಿಸಿದಾಗಲೇ ಜನತೆಯ ಸುಖ ಮತ್ತು ಸಂತೋಷಗಳಿಗೆ ರಕ್ಷಣೆಯನ್ನು ನೀಡಿದಂತಾಗುತ್ತದೆ.

ಮಾನವನ ನಿಜವಾದ ಸ್ವಭಾವಕ್ಕೆ ಮೌಢ್ಯವು ವಿರೋಧವಾದುದು. ಮೊದಲು ಇದನ್ನು ಅಳಿಸಬೇಕು. ಅದರ ಜೊತೆಯಲ್ಲಿಯೇ ಮನುಷ್ಯ

ನಲ್ಲಿರುವ ನೀಚತನ, ಕ್ರೌರ್ಯ ಮತ್ತು ವಿರೋಧ ಭಾವನೆಗಳೆಂಬ ರೋಗ ಗಳನ್ನು ನಾವು ನಾಶಿಮಾಡಬೇಕಾಗಿದೆ ಎಂದು ಹೇಳುತ್ತಾರೆ.

ಈ ಕಾಲದಲ್ಲಿ ನಮಗೆ ಕೇವಲ ಸಾಮಾಜಿಕ ಅಭಿವೃದ್ಧಿಯಾದರೆ ಸಾಲದು. ಆಧ್ಯಾತ್ಮಿಕ ಉದ್ಧಾರವೂ ಆಗಬೇಕಾಗಿದೆ. ನಾವು ನಮ್ಮ ಮನಸ್ಸು ಮತ್ತು ಹೃದಯಗಳನ್ನು ಮಾರ್ಪಡಿಸಿಕೊಳ್ಳಲಾರದಿದ್ದರೆ, ಪ್ರಪಂಚದಲ್ಲಿ ಮತ್ತೆ ಏನನ್ನೂ ಬದಲಾಯಿಸಲಾರೆವು ಎಂದು ಹೇಳಿದರು.

ಇನ್ನೊಂದು ಕಡೆ ಮಾತನಾಡುತ್ತಾ, ಈ ಸಂಸ್ಥೆಯು ಜನತೆಯ ಭಾವನೆಯಲ್ಲಿರುವ ತಪ್ಪುಗಳನ್ನು ತಿಳಿದಿದೆ. ಅವನ್ನು ನಿವಾರಣೆಮಾಡಲು ಕೆಲವು ವಿಷಯಗಳಲ್ಲಿ ಶ್ರದ್ಧೆಯನ್ನು ವಹಿಸಬೇಕಾಗುತ್ತದೆ. ಕೆಲವು ಕ್ರಮ ಗಳನ್ನೂ ಕೈಗೊಳ್ಳಬೇಕಾಗುತ್ತದೆ. ಅವುಗಳು ಯಾವುವೆಂದರೆ :—

1) ಶತಮಾನಗಳಿಂದ ಸೈನ್ಯಬಲದಲ್ಲಿ ನಂಬಿಕೆಯನ್ನಿಟ್ಟು ಸೈನ್ಯ ವನ್ನು ಬೆಳಸುತ್ತಿರುವುದನ್ನು ಬಿಡಬೇಕು. ಹೊಸ ಹೊಸ ಅಣುಶಸ್ತ್ರ ಗಳನ್ನು ಪಡೆಯುತ್ತಿರುವುದರಿಂದ ಪರರಾಷ್ಟ್ರಗಳು ಹೆದರಿ ಗೌರವವನ್ನು ಕೊಡುತ್ತವೆ ಎಂಬ ಭಾವನೆಯನ್ನು ಮರೆಯಬೇಕು. ಪ್ರಬಲ ರಾಷ್ಟ್ರ ಗಳೆರಡು ತಮ್ಮ ತಮ್ಮ ಸೇನೆಗಳಿಂದ ಶಸ್ತ್ರಗಳಿಂದ ಸಿದ್ಧವಾಗಿವೆ. ಉಳಿದ ರಾಷ್ಟ್ರಗಳು ಭಯದಲ್ಲಿ ಯುದ್ಧವು ನಿಂತ ರಂಗಭೂಮಿಯಲ್ಲಿರುವಂತೆ ಬಾಳುತ್ತಿವೆ. ಇದರಿಂದ ಯಾವ ರಾಷ್ಟ್ರಕ್ಕೂ ಶಾಂತಿಯಿಲ್ಲ. ಒಬ್ಬರಿ ಗೊಬ್ಬರು ಭೀತಿಯಿಂದ ತಟಸ್ಥರಾಗಿದ್ದೇವೆ. ಅಷ್ಟೇ! ಮಿತಿ ಮೀರಿ ಮುಂದೆ ಯುದ್ಧವು ನಡೆಯುವುದೇ ಆದರೆ, ಮಾನವ ಸಮಾಜಕ್ಕೆ ಜಗತ್ತಿ ನಲ್ಲಿ ಏನೂ ಉಳಿಯುವುದಿಲ್ಲ. ಮಾನವ ಸಮಾಜವು ಉಳಿಯಬೇಕಾದರೆ, ಯುದ್ಧವು ಆಗಲೇ ಕೂಡದು.

2) ರಾಷ್ಟ್ರೀಯ ಭಾವನೆಯು ಪ್ರಪಂಚದ ಧರ್ಮಕ್ಕೆ ಅಧೀನವಾಗಿರ ಬೇಕು. ಅದು ಬಿಟ್ಟು, ಏನೇ ಆದರೂ, ನಮ್ಮ ರಾಷ್ಟ್ರವೇ ಸರಿ! ಎಂದು ವರ್ತಿಸುವುದು, ತನ್ನ ಸಂಸಾರಕ್ಕಾಗಿ ನೂರಾರು ಕುಟುಂಬಗಳನ್ನು ನಾಶ ಮಾಡುವ ದರೋಡೆಕೋರನ ಭಾವನೆಯಂತಾಗುತ್ತದೆ. ಆದುದರಿಂದ ನಮ್ಮ ಹಕ್ಕುಭಾಧ್ಯತೆಗಳು ಮಾನವ ಸಮಾಜದ್ದಾಗಿರಬೇಕು.

3) ವ್ಯಕ್ತಿಗತವಾದ ಶ್ರೇಷ್ಠತೆಗೆ ಪರರನ್ನು ತುಳಿಯುವ ಮನೋ ವೃತ್ತಿಯನ್ನು ಮೊದಲು ತ್ಯಜಿಸಬೇಕು. ಹಿಂದುಳಿದವರನ್ನು ನಮ್ಮಂತೆಯೇ ಮುಂದೆ ತರಬೇಕು. ವಿದ್ಯಾವಂತರನ್ನಾಗಿ ಮಾಡಬೇಕು. ಪ್ರತಿಯೊಬ ರಲ್ಲೂ ಮಾನವೀಯತೆಯ ಸಂಬಂಧವನ್ನು ಬೆಳೆಸಿಕೊಳ್ಳಬೇಕು. ಪ್ರತಿ ರಾಷ್ಟ್ರಗಳಲ್ಲೂ ಒಗ್ಗಟ್ಟನ್ನುಂಟುಮಾಡಬೇಕು.

ಈ ಮೂರರ ಗುರಿಯನ್ನು 'ಯುನಸ್ಕೋ'ವು ಸಾಧಿಸಲು ಪ್ರತಿ ರಾಷ್ಟ್ರವೂ ಸಹಕರಿಸಬೇಕು ಎಂದು ಹೇಳಿದರು

ಈ ಸಂಸ್ಥೆಯ ಸಾಂಸ್ಕೃತಿಕ, ನಾಗರಿಕ ಮತ್ತು ವಿದ್ಯಾಭ್ಯಾಸಗಳ ಅಭಿವೃದ್ಧಿಯ ಕಾರ್ಯಕ್ರಮಗಳಲ್ಲಿ ಸರ್ವಪಳ್ಳಿಯವರ ಪಾತ್ರವು ಹೆಚ್ಚಿನದು. ಭಾರತದ ಕವಿರತ್ನವಾಗಿದ್ದ ರವೀಂದ್ರನಾಥ ಠಾಗೂರರ ಶತಮಾನೋತ್ಸವ ವನ್ನು ಯುನೆಸ್ಕೋದಲ್ಲಿ ಆಚರಿಸುವಂತಾದುದು ಸರ್ವಪಳ್ಳಿಯವರ ಶ್ರದ್ಧೆ ಯಿಂದ ಎಂದೇ ಹೇಳಬೇಕಾಗುತ್ತದೆ.

## ಕವಿಗಳ, ಪ್ರಬಂಧಕಾರರ ಮತ್ತು ಕಥೆಗಾರರ ಸಂಘದಲ್ಲಿ (P.E.N. Society)

ಈ ಸಂಘವು 1933ರಲ್ಲಿ ಮೇಡಂ ಸೋಫಿಯಾವಾಡಿಯಾ ಎಂಬಾಕೆ ಯಿಂದ ಸ್ಥಾಪಿತವಾಯಿತು. ಕಾವ್ಯಗಳು ಜನತೆಯ ಭಾವನೆಯನು ಸುಸಂಸ್ಕೃತ ಗೊಳಿಸಲು ಬಹುಮುಖ್ಯವಾದ ಸಾಧನಗಳು. ಆದುದರಿಂದ ಕಾವ್ಯಗಳ ಮೂಲಕ, ಪ್ರಪಂಚದ ಎಲ್ಲಾ ಮಾನವರಲ್ಲಿಯೂ ಸಹೋದರ ಭಾವನೆಯು ಹುಟ್ಟುವಂತೆ ಏರ್ಪಡಿಸಿ ತನ್ಮೂಲಕ ಐಕ್ಯತೆಯನ್ನು ಸಾಧಿ ಸುವ ಉದ್ದೇಶದಿಂದ ಈ ಸಂಘವು ಸ್ಥಾಪಿತವಾಯಿತು. ಈ ಸಂಘದಲ್ಲಿ ಜಗತ್ತಿನ ಎಲ್ಲಾ ಭಾಷೆಗಳ ಪ್ರಮುಖ ಕವಿಗಳೂ, ಪ್ರಬಂಧಕಾರರೂ ಮತ್ತು ಕಥೆಗಾರರು ಸದಸ್ಯರಾಗಿದ್ದಾರೆ. ಇದರ ಶಾಖೆಗಳು ಪ್ರಪಂಚದ ನಾನಾ ಕಡೆಗಳಲ್ಲಿವೆ. ಈ ಸಂಘದ ಶಾಖೆಯು ಬೊಂಬಾಯಿನಲ್ಲಿದೆ. ಇದಕ್ಕೆ ರವೀಂದ್ರನಾಥ ಠಾಗೂರರು ಪ್ರಪ್ರಥಮ ಅಧ್ಯಕ್ಷರಾಗಿದ್ದರು ಅನಂತರ ಸರೋಜಿನಿನಾಯ್ಡು ರವರು ಅಧ್ಯಕ್ಷರಾದರು. ಅವರ ನಂತರ ಡಾ|| ರಾಧಾ ಕೃಷ್ಣನ್ನರು ಅದರ ಅಧ್ಯಕ್ಷರಾದರು.

ಇವರು ಸ್ವತಃ ಕವಿಹೃದಯರಾಗಿ, ಭಾರತದ ನಾಗರಿಕತೆ, ಸಂಸ್ಕೃತಿ ಮತ್ತು ದಾರ್ಶನಿಕ ವಿಷಯಗಳಲ್ಲಿ ಅತ್ಯುನ್ನತ ದರ್ಜೆಯ ಲೇಖಕರಾಗಿ, ಈ ಸಂಘದ ಸದಸ್ಯರೂ ಆಗಿದ್ದರು. 1935ರಲ್ಲಿ ಅಂತರ ರಾಷ್ಟ್ರೀಯ ಪಿ.ಇ.ಎನ್ ಕಾಂಗ್ರೆಸ್ಸಿನ ಸಮಾರಂಭಕ್ಕೆ ಜರ್ಮನಿಗೆ ಹೋಗಿದ್ದರು.

ಒಮ್ಮೆ ಈ ಸಂಘದಲ್ಲಿ ಮಾತನಾಡುತ್ತಾ "ಇಂಡಿಯಾದಲ್ಲಿ ಭಿನ್ನ ಭಿನ್ನ ನಾಗರಿಕತೆಗಳಿವೆ. ಸಾಹಿತಿಗಳು ಕವಿಗಳು ಮತ್ತು ನಾಟಕಕಾರರು ಜನತೆಯಲ್ಲಿನ ತಪ್ಪು ತಿಳಿವಳಿಕೆ ಮತ್ತು ಸಂದೇಹಗಳನ್ನು ಪರಿಹರಿಸುವಂತೆ ಪ್ರಯತ್ನಿಸಬೇಕು. ಪ್ರಪಂಚವೆಲ್ಲವೂ ಸ್ನೇಹದಿಂದ ವರ್ತಿಸುವಂತೆ ಮಾಡುವ ಹೊಣೆಗಾರಿಕೆಯನ್ನು ಸಾಹಿತಿಗಳು ಮತ್ತು ಕವಿಗಳು ಹೊಂದಿದ್ದಾರೆ. ಹಾಗೆ ನಾವು ಜನತೆಯ ಮನೋಭಾವನೆಯನ್ನು ಮಾರ್ಪಡಿಸಲು ಬಯಸುವುದಾದರೆ, ನಾವುಗಳು ಹೆಚ್ಚಾಗಿ ನಮ್ಮ ಆಲೋಚನಾ ರೀತಿಗಳನ್ನೇ ಬದಲಾಯಿಸಿಕೊಳ್ಳಬೇಕಾಗುತ್ತದೆ. ಜನತೆಯ ಮನಸ್ಸು ಮತ್ತು ಹೃದಯಗಳಲ್ಲಿ ಒಂದು ಕ್ರಾಂತಿಯನ್ನೇ ಹುಟ್ಟಿಸಬೇಕಾಗುತ್ತದೆ" ಎನ್ನುತ್ತಾರೆ.

ಶಾಂತಿ! ಶಾಂತಿ! ಎಂದು ಜಗತ್ತಿನ ಎಲ್ಲಾ ಮಾನವರು ಬಾಯಲ್ಲಿ ಹೇಳುತ್ತಾರೆ. ಮನಸ್ಸಿನಲ್ಲಿಯೂ ಬಯಸುತ್ತಾರೆ. ಆದರೆ, ಅದರ ಬೆಲೆಯನ್ನು ನಾವು ಕೊಡದಿದ್ದರೆ, ಅದು ನಮಗೆ ದೊರೆಯುವಂತಿಲ್ಲ. ಅದರ ಬೆಲೆ ಶಕ್ತಿ ಮತ್ತು ಸಂಪತ್ತು. ಆದರೆ ಇವುಗಳನ್ನು ಹೊಂದಿರುವವರು ಅಧಿಕಾರ ವ್ಯಾಮೋಹದಲ್ಲಿದ್ದಾರೆ. ಅವನ್ನು ಸರ್ವಾಧಿಕಾರ ನಡೆಸಲು ಜನತೆಯ ಮೇಲೆ ಪ್ರಯೋಗಿಸುತ್ತಿದ್ದಾರೆ. ಇದರಿಂದಲೇ ಶಾಂತಿಯಿಲ್ಲ. ಶಾಂತಿಯು ಬೇಕಾದರೆ ಶಕ್ತಿ ಮತ್ತು ಸಂಪತ್ತುಗಳನ್ನು ಸರ್ವಾಧಿಕಾರವನ್ನು ನಡೆಸಲು ಉಪಯೋಗಿಸಬಾರದು. ಭ್ರಷ್ಟತೆಗಾಗಿ ಬಳಸಿಕೊಳ್ಳಬಾರದು. ಮಾನವರೆಲ್ಲರ ಹಿತದೃಷ್ಟಿಯಿಂದ ಉಪಯೋಗಿಸಬೇಕು. ಆ ಭಾವನೆಯನ್ನುಂಟು ಮಾಡಲು ಸಾಹಿತ್ಯಗಳು ಪ್ರಯತ್ನಿಸಬೇಕು.

ಸಾಹಿತ್ಯ ಸಮಾರಂಭಗಳು ನಮ್ಮ ಜ್ಞಾನದಲ್ಲಿ ಒಂದು ಶಿಸ್ತನ್ನುಂಟು ಮಾಡುವುದರ ಜೊತೆಗೆ ನಮ್ಮ ಗ್ರಹಣ ಶಕ್ತಿಯನ್ನೂ ತೀವ್ರಗೊಳಿಸುತ್ತವೆ. ಆದುದರಿಂದ ಮೊಟ್ಟಮೊದಲು ಲೇಖಕರು ಸುಸಂಸ್ಕೃತರಾಗಬೇಕು. ನೈತಿಕ

ಮತ್ತು ಧಾರ್ಮಿಕ ವಿಷಯಗಳಲ್ಲಿ ತಮ್ಮ ಜ್ಞಾನವನ್ನು ಹೆಚ್ಚಿಸಿಕೊಳ್ಳಬೇಕು. ಹಾಗಾಗದಿದ್ದರೆ ಅವರು ತಮ್ಮ ಕಾರ್ಯದಲ್ಲಿ ಪೂರ್ಣತೆಯನ್ನು ಹೊಂದಿದಂತಾಗುವುದಿಲ್ಲ. ವಿದ್ಯಾಕಾಂಕ್ಷಿಯಾದವನು ಆತುರ ಪಡುವುದರಿಂದ ಉತ್ತಮ ಫಲವನ್ನು ಪಡೆಯಲಾರ. ಹಳೆಯದನ್ನು ನಂಬಬೇಕು. ಆದರೆ ಅದನ್ನು ಸತ್ಯಾಸತ್ಯತೆಗಳ ವಿವೇಚನೆಯಿಂದ ಒರೆಹಚ್ಚಬೇಕು. ಅಂದ ಮಾತ್ರಕ್ಕೆ ಅಪನಂಬಿಕೆಯ ನಡವಳಿಕೆಯಿಂದ ಎಂದಲ್ಲ; ವಿಶಾಲ ಜ್ಞಾನದಿಂದ ಆಯಾಸದ ಧ್ವನಿಯಿಂದ ಮಾತನಾಡುವವನು ಉತ್ತಮ ವಾಗ್ಮಿ ಎನಿಸಿಕೊಳ್ಳಲಾರ. ಹಾಗೆಯೇ ಬರಡು ಭೂಮಿಯಲ್ಲಿ ವಾಸಿಸುವವನು ಹಿರಿಯ ಲೇಖಕನೂ ಆಗಲಾರ. ಅಂತಹವರು ಭವಿಷ್ಯದಲ್ಲಿ ತಾಮಸ ನೋಟವನ್ನು ಮಾತ್ರ ನೋಡಬಲ್ಲರು. ದೊಡ್ಡ ಲೇಖಕರ ಮಾತು ಹಾಗಲ್ಲ. ಸಮೃದ್ಧಿಯಾದ ಕಡೆಯಲ್ಲಿರಲು ಬಯಸುತ್ತಾರೆ. ಸ್ವಚ್ಛವಾದ ಮನಸ್ಸಿನಿಂದ ಎಲ್ಲವನ್ನು ಆಲೋಚಿಸುತ್ತಾರೆ. ಜೊತೆಗೆ ಸಂಯಮವನ್ನು ಅಭ್ಯಾಸ ಮಾಡಿಕೊಂಡಿರುತ್ತಾರೆ. ಆದುದರಿಂದಲೆ ಅವರು ಕೀರ್ತಿಶಾಲಿಗಳಾಗುತ್ತಿರುವುದು ಎಂದು ಹೇಳುವರು.

ಆದುದರಿಂದ ನಮ್ಮ ಲೇಖನ ಶಕ್ತಿಯು ಓದುಗರ ಭಯ ಮತ್ತು ಅಜ್ಞಾನಗಳನ್ನು ನಿವಾರಿಸುವಂತಿರಬೇಕು. ಅವುಗಳಿಂದ ಬೇರ್ಪಡಿಸಿ ಉನ್ನತ ಮಟ್ಟಕ್ಕೇರಿಸುವ ಶಕ್ತಿಯುಳ್ಳವಾಗಿರಬೇಕು. ಅದಕ್ಕನುಕೂಲವಾಗುವಂತೆ ಲೇಖಕರು ಶೂನ್ಯಸ್ಥಳದಲ್ಲಿನಬಾರದು ತೀವ್ರಗತಿಯಲ್ಲಿ ಮಾರ್ಪಾಡಾಗುತ್ತಿರುವ ಸ್ಥಳವನ್ನೂ ಹೊಸ ಪ್ರಪಂಚಕ್ಕೆ ಹೊಂದಿಕೊಂಡು ಹೋಗುವ ಸ್ಥಳವನ್ನು ಹುಡುಕಿಕೊಂಡು ನೆಲಸಬೇಕು. ನಮ್ಮ ಸುತ್ತಲೂ ಏನೇನು ನಡೆಯುತ್ತದೆ ಎಂಬುದನ್ನು ಪ್ರತಿ ಗಳಿಗೆಯೂ ಆಸಕ್ತಿಯಿಂದ ಅರಿಯುತ್ತಿರಬೇಕು ಎಂದು ಹೇಳಿದ್ದಾರೆ.

ಸರ್ವಪಳ್ಳಿಯವರು ಬೊಂಬಾಯಿನ ಪಿ. ಇ. ಎನ್. ಸೊಸೈಟಿಯ ಅಧ್ಯಕ್ಷರಾದ ಮೇಲೆ ಇಂಡಿಯಾ ದೇಶದ ಭಾಷೆಗಳ, ಧರ್ಮಗಳ, ನಾಗರೀಕತೆಗಳ ಮತ್ತು ಸಂಸ್ಕೃತಿಗಳ ಸಂಪರ್ಕವನ್ನು ಹೆಚ್ಚಿಸಿದುದಲ್ಲದೆ, ಪ್ರಪಂಚದ ಇತರ ರಾಷ್ಟ್ರಗಳ ಸಂಪರ್ಕಕ್ಕೆ ಒಂದು ಸೇತುವೆಯಂತೆ ಈ ಸಂಘವನ್ನು ಏರ್ಪಡಿಸಿದರು.

1959ರಲ್ಲಿ ಜರ್ಮನಿಯ ಫ್ರಾಂಕ್‌ಫರ್ಟ್ ನಗರದಲ್ಲಿ ನಡೆದ ಈ ಸಂಘದ ಮಹಾ ಸಮ್ಮೇಳನವನ್ನು ಉದ್ಘಾಟಿಸಿದರು. ಅಷ್ಟಲ್ಲದೆ ಈಗಲೂ ಈ ಸಂಸ್ಥೆಯ ಸಂಬಂಧವನ್ನು ಇಟ್ಟುಕೊಂಡಿದ್ದಾರೆ.

## ಅಭ್ಯಾಸ

1. ವಿಶ್ವಸಂಸ್ಥೆಗೆ ಸರ್ವಪಳ್ಳಿಯವರ ಉಪದೇಶ.
2. ಯುನೆಸ್ಕೋದಲ್ಲಿ ಸರ್ವಪಳ್ಳಿಯವರ ಪಾತ್ರ.
3. ಕವಿಗಳಿಗೂ ಸಾಹಿತಿಗಳಿಗೂ ಸರ್ವಪಳ್ಳಿಯವರ ಹಿತೋಪದೇಶ.

# ಮತ್ತೆ ಉಪರಾಷ್ಟ್ರಪತಿಯಾಗಿ

ಭಾರತ ಪ್ರಜಾಪ್ರಭುತ್ವದ ದ್ವಿತೀಯ ಮಹಾ ಚುನಾವಣೆಯು 1957ರಲ್ಲಿ ನಡೆದ ನಂತರ, ರಾಷ್ಟ್ರಪತಿ ಮತ್ತು ಉಪರಾಷ್ಟ್ರಪತಿಗಳ ಚುನಾವಣೆಯು ನಡೆಯಿತು. ಆಗ ರಾಷ್ಟ್ರಪತಿಯಾಗಿ ಡಾ|| ರಾಜೇಂದ್ರ ಪ್ರಸಾದರೂ ಉಪರಾಷ್ಟ್ರಪತಿಯಾಗಿ ಡಾ|| ರಾಧಾಕೃಷ್ಣನ್ನರೂ ಮತ್ತೆ ಅವಿರೋಧವಾಗಿ ಆಯ್ಕೆಯಾದರು.

ನ್ಯೂಯಾರ್ಕಿನ ಕೊಲಂಬಿಯಾ ವಿಶ್ವವಿದ್ಯಾನಿಲಯವು 1957-58ನೇ ವರ್ಷದ 'ಗ್ಯಾಬ್ರಿಯಲ್ ಸಿಲ್ವರ್' ಉಪನ್ಯಾಸ ಮಾಲೆಯಲ್ಲಿ ಉಪನ್ಯಾಸ ನೀಡಲು ಸರ್ವಪಳ್ಳಿಯವರಿಗೆ ಆಹ್ವಾನ ನೀಡಿತು. ಆ ಉಪ ನ್ಯಾಸ ಮಾಲೆಯು 1949ರಲ್ಲಿ ಸ್ಥಾಪಿತವಾಗಿತ್ತು. ರಾಷ್ಟ್ರಗಳ ಮತ್ತು ಜನತೆಯ ನಡುವೆ ಭಿನ್ನಾಭಿಪ್ರಾಯವು ಬರದಂತೆ ಪರಸ್ಪರ ತಿಳುವಳಿಕೆ ಯನ್ನುಂಟುಮಾಡುವುದೇ ಅದರ ಉದ್ದೇಶವಾಗಿತ್ತು. ಇದಕ್ಕಾಗಿ ನಾನಾ ದೇಶಗಳ, ನಾನಾ ಸಮಸ್ಯೆಗಳನ್ನು ಬಿಡಿಸಬಲ್ಲಂತಹ ಗಣ್ಯವ್ಯಕ್ತಿಗಳನ್ನೂ, ವಿದ್ವಾಂಸರನ್ನೂ ಅದು ಆಹ್ವಾನಿಸುತ್ತಿತ್ತು.

ಸರ್ವಪಳ್ಳಿಯವರು 1958ನೇ ಏಪ್ರೆಲ್ ಎಂಟರಂದು ಅಲ್ಲಿ ಉಪ ನ್ಯಾಸವನ್ನು ನೀಡಿದರು. "ಈಗ ಮಾನವ ಜಾತಿಯು ಎರಡು ಗುಂಪು ಗಳಾಗಿವೆ. ಭೌಗೋಳಿಕ ಮತ್ತು ಚಾರಿತ್ರಿಕ ಭಿನ್ನತೆಯನ್ನು ಮರೆಯ ಬೇಕು. ಪ್ರಳಯಕಾರಕ ಶಸ್ತ್ರಗಳ ನಿರ್ಮಾಣವನ್ನು ನಿರ್ನಾಮ ಮಾಡ ಬೇಕು. ನೆರೆಯವರಂತೆ ಬಾಳುವ ಭಾವನೆಯನ್ನು ಹೊಂದಬೇಕು. ಈಗ ನಮಗೆ ಬಂದಿರುವ ಗಂಡಾಂತರಗಳು—ಸಾಮಗ್ರಿಗಳ ಬರವಲ್ಲ! ಆರ್ಥಿಕ ಮುಗ್ಗಟ್ಟಲ್ಲ. ಬೌದ್ಧಿಕಾಭಾವವಲ್ಲ. ಅದು ನೈತಿಕ ಮತ್ತು ಧಾರ್ಮಿಕ ಸಮಸ್ಯೆಗಳು. ನಾವು ಪ್ರಕೃತಿಯ ಪ್ರಾಬಲ್ಯಕ್ಕನುಗುಣವಾಗಿ ಪ್ರವೀಣ ರಾಗಿದ್ದೇವೆ. ವಿಜ್ಞಾನದಿಂದ ರೋಗಗಳನ್ನೆದುರಿಸಬಲ್ಲೆವು. ಸಮುದ್ರದ ಮೇಲೆ ಬೇಸಾಯಮಾಡಬಲ್ಲೆವು. ಆದರೆ, ವಿಶ್ವ ಸಮಾಜದಲ್ಲಿ ನಾವೂ ಒಬ್ಬರಾಗಿ ಬಾಳುವುದನ್ನು ಮಾತ್ರ ತಿಳಿದಿಲ್ಲ. ವಿದ್ಯಾಭಿವೃದ್ಧಿಗೆ ಕೊರತೆ

ಯಿಲ್ಲ. ಸ್ವಾತಂತ್ರ್ಯದ ಅರ್ಥವು ಮಾತ್ರ ಸರಿಯಾಗಿ ದೊರೆಯುತ್ತಿಲ್ಲ ಎಂದು ಹೇಳಿದರು.

ಅದೇ ವರುಷ ಮಾರ್ಚಿಯಲ್ಲಿ ಕ್ಲೆವ್‌ಲ್ಯಾಂಡಿನ ಓಹಿಯೋನಲ್ಲಿ ನ್ಯೂಟನ್ ಬೇಕರ್ ಉಪನ್ಯಾಸ ಮಾಲೆಯಲ್ಲಿ ಅಂತರರಾಷ್ಟ್ರೀಯ ಧರ್ಮಗಳ ಪರಸ್ಪರ ತಿಳುವಳಿಕೆ ಎಂಬ ವಿಷಯವಾಗಿ ಉಪನ್ಯಾಸವನ್ನು ನೀಡಿದರು "ನಾವು ಮಾನವ ಜನಾಂಗವನ್ನು ಕಾಪಾಡಬೇಕಾದರೆ, ಪ್ರಪಂಚವು ನಮ್ಮ ಮನೆಯಾಗಬೇಕು. ಅಂತಹ ಭಾವನೆಯು ಬರಬೇಕಾದರೆ, ಧರ್ಮಗಳು ಬೆಂಬಲವಾಗಬೇಕು" ಎಂದು ನಾನಾ ಧರ್ಮಗಳ, ನಾನಾ ಪ್ರವಾದಿಗಳ ತತ್ವಗಳನ್ನು ಉದಾಹರಿಸಿ ತಿಳಿಸುತ್ತಾರೆ.

ಅದೇವರುಷ ನವಂಬರ್ ತಿಂಗಳಲ್ಲಿ ಜರ್ಮನಿಗೆ ಭೇಟಿಕೊಟ್ಟರು. ಅಲ್ಲಿನ ಬಾನ್ ವಿಶ್ವವಿದ್ಯಾನಿಲಯದಲ್ಲಿ ಆಧ್ಯಾತ್ಮಿಕ ವಿಚಾರವಾಗಿ ಉಪನ್ಯಾಸ ಮಾಡಿದರು. ಸಿಲೋನಿನ ಆ ವರುಷದ ಸ್ವಾತಂತ್ರ್ಯ ದಿನಾಚರಣೆಯಲ್ಲಿ ಭಾಗವಹಿಸಿ ಪ್ರಜಾಪ್ರಭುತ್ವದ ಮಹತ್ವವನ್ನು ತಿಳಿಸಿದರು.

1959ನೇ ಜುಲೈ ತಿಂಗಳಲ್ಲಿ ಮೂರು ದಿನಗಳು ಹೊನಲುಲು ನಗರಕ್ಕೆ ಭೇಟಿಕೊಟ್ಟರು. ಮೊದಲನೆಯ ದಿವಸ ಅಲ್ಲಿನ 'ಹವಾಲಿ' ವಿಶ್ವವಿದ್ಯಾನಿಲಯವನ್ನುದ್ದೇಶಿಸಿ 'ನಂಬಿಕೆಯಲ್ಲಿ ಸದ್ಯದ ಗಂಡಾಂತರ (The Present crisis in faith)' ಎಂಬ ವಿಷಯವಾಗಿ ಉಪನ್ಯಾಸವನ್ನು ನೀಡಿದರು "ಆಧುನಿಕ ವಿಜ್ಞಾನವು ಮಾನವ ಬುದ್ಧಿಶಕ್ತಿಯನ್ನು ವಿಸ್ತರಿಸುತ್ತದೆ. ದುರ್ನಿವಾರ್ಯ ಆಯುಧಗಳನ್ನು ಮಾಡಲು ಸಹಾಯಕವಾಗಿದೆ. ಅಂತೆಯೇ ಅದು ಜೀವನ ಸೌಲಭ್ಯಗಳನ್ನೊದಗಿಸಬಲ್ಲದು. ಇದರಿಂದ, ವಿಜ್ಞಾನವು ಪಾಪಕೂಪವನ್ನೂ ನೀಡಬಲ್ಲುದು ಮತ್ತು ಪಾಪವನ್ನೂ ಪರಿಹರಿಸಬಲ್ಲದೆಂದು ತಿಳಿಯಬಹುದು. ಆಧುನಿಕ ಮಾನವನು ಜೀವನದಲ್ಲಿ ನಿರಾಶನಾಗಿದ್ದರೂ ಸಾಯಲು ಮಾತ್ರ ಬಯಸುವುದಿಲ್ಲ. ಮುಂದೆ ಸಂತೋಷದ ಘಟನೆಗಳು ಬರುತ್ತವೆ ಎಂಬ ಭರವಸೆಯಲ್ಲಿ ಬಾಳು ಸಾಗುತ್ತಿದೆ. ನಾವು ಹೋರಾಡಬೇಕಾದ ನಿಜವಾದ ಶತ್ರುವೆಂದರೆ, ಭಂಡವಾಳಶಾಹಿಯಲ್ಲ. ಕಮ್ಯೂನಿಸಂ ಅಲ್ಲ! ನಮ್ಮ ಅವಿವೇಕ! ನಮ್ಮ ದುರಾಶೆ! ಮತ್ತು ನಮ್ಮ ಸರ್ವಾಧಿಕಾರ ಭಾವನೆ!" ಎಂದು ತಿಳಿಸುತ್ತಾರೆ.

ಅದೇ ವರುಷ ಜುಲೈ ಮಾಹೆಯಲ್ಲಿ ಜರ್ಮನಿದೇಶದ ಪ್ರವಾಸವನ್ನು ಕೈಗೊಂಡರು. ಜುಲೈ ಇಪ್ಪತ್ತನಾಲ್ಕರಂದು ಫ್ರಾಂಕ್‌ಫೋರ್ಟ್ ನಗರವು ಸರ್ವಪಳ್ಳಿಯವರನ್ನು ಆಹ್ವಾನಿಸಿ ಗೌರವಿಸಿತು. ಅಲ್ಲಿನ ಅತ್ಯಂತ ಶ್ರೇಷ್ಠ ಬಹುಮಾನವಾದ 'ಗೋಥೆ' ಮೆಡಲನ್ನು ಸರ್ವಪಳ್ಳಿಯವರಿಗೆ ನೀಡಿತು. 'ಗೋಥೆ ಎಂಬುವನು ಜರ್ಮನಿಯ ಮಹಾ ವ್ಯಕ್ತಿ. ಅಷ್ಟೇ ಅಲ್ಲ! ಯುರೋಪಿನ ಹಾಗೂ ಪ್ರಪಂಚದ ಆದರ್ಶ ಮಾನವ ಎಂಬುದನ್ನು ತಿಳಿಸುವರು. ಅಲ್ಲಿ ಇವರು ಮಾನವ ಚೈತನ್ಯ ಸ್ಪರ್ಧೆಯ ವಿಷಯದಲ್ಲಿ ಭಾರತೀಯ ತತ್ವಗಳಲ್ಲಿರುವ ಮಹತ್ವವನ್ನು ತಿಳಿಸುವರು. ಪ್ರಪಂಚದ ಪ್ರತಿಯೊಂದು ದೇಶದಲ್ಲಿಯೂ ಸಮಾಜಗಳು ಅಲ್ಲಲ್ಲಿಯೇ ಪಂಗಡಗಳಾಗಿ ಹೋರಾಟ ನಡೆಸಿವೆ. ಅದನ್ನು ಚರಿತ್ರೆಯು ತಿಳಿಸುವಂತೆಯೇ ಅವರೆಲ್ಲರ ರಕ್ತಸಂಬಂಧದ ಸೋದರತ್ವವನ್ನೂ ಕೂಡ ತಿಳಿಸುತ್ತದೆ. ಆದುದರಿಂದ, "ನಾವು ಶತ್ರುಗಳೆಂದು ಭಾವಿಸಿ ಹೋರಾಡುವುದು. ನಮ್ಮಲ್ಲಿ ಕಾಣುವ ಅತಿಯಾದ ದೌರ್ಬಲ್ಯ. ಶತ್ರುತ್ವ ಭಾವನೆಯನ್ನು ಬಿಟ್ಟು ನಮ್ಮಲ್ಲಿ ನಾವು ಮಿತ್ರತ್ವ ಭಾವನೆಯನ್ನು ಬೆಳೆಸಿಕೊಳ್ಳಬೇಕು" ಎಂದು ಹೇಳಿದ ಗೋಥೆಯು ತನ್ನ ಸ್ವಜನರಿಂದಲೇ ಅಳಿವನ್ನು ಹೊಂದಿದನು. ನೆಪೋಲಿಯನ್ನನ ಸ್ವಾತಂತ್ರ್ಯ ಚಳುವಳಿಯಲ್ಲಿ ಭಯಂಕರವಾದ ಅಪಾಯಕ್ಕೊಳಗಾದನು. ಅವನ ಶರೀರವು ಮಣ್ಣಿನಲ್ಲಿ ಬೆರೆಯಿತು. ಅವನ ಧ್ಯೇಯವು ಮಾತ್ರ ಚಿರವಾಗುಳಿದಿದೆ ಎಂಬ ವಿಷಯಗಳನ್ನು ಆ ಸತ್ಕಾರ ಕೂಟದಲ್ಲಿ ತಿಳಿಸುತ್ತಾರೆ

1959ನೇ ಆಗಸ್ಟ್ ಇಪ್ಪತ್ತೊಂಭತ್ತರಲ್ಲಿ ಮೈಸೂರು ವಿಶ್ವವಿದ್ಯಾನಿಲಯವು ಸರ್ವಪಳ್ಳಿಯವರನ್ನು ಆಹ್ವಾನಿಸಿ ಗೌರವಿಸಿತು. ಅಲ್ಲಿ ತಾವು ಪ್ರಾಧ್ಯಾಪಕರಾಗಿದ್ದುದನ್ನು ಸ್ಮರಿಸಿಕೊಂಡರು. "ಶ್ರೀ ಜಯಚಾಮರಾಜ ಒಡೆಯರು ತಮ್ಮ ಹಿರಿಯರಂತೆಯೇ ಕನ್ನಡನಾಡಿನ ರಾಜರಾಗಿ, ರಾಜಪ್ರಮುಖರಾಗಿ, ವಿಶ್ವವಿದ್ಯಾನಿಲಯದ ಕುಲಪತಿಗಳಾಗಿ, ವಿದ್ಯಾರ್ಥಿದೆಸೆಯಿಂದಲೂ ದಾರ್ಶನಿಕ ವಿಚಾರದಲ್ಲಿ ಬಹಳ ಆಸಕ್ತಿಯನ್ನು ತೋರುತ್ತಿದ್ದಾರೆ. ಇಂತಹವರ ಕೈಯಿಂದ 'ಡಾಕ್ಟರ್ ಆಫ್ ಲಾಸ್' ಎಂಬ ಗೌರವ ಪದವಿಯನ್ನು ಪಡೆಯುತ್ತಿರುವುದು ನನಗೆ ಬಹಳ ಸಂತೋಷದಾಯಕವಾಗಿದೆ" ಎಂದು ಹೇಳಿದರು.

1961 ನೇ ಅಕ್ಟೋಬರಿನಲ್ಲಿ ಹಂಗೇರಿ, ನೆದರ್‌ಲ್ಯಾಂಡ್ ಮತ್ತು ಜರ್ಮನಿಗೆ ಭೇಟಿಕೊಟ್ಟರು. ಜರ್ಮನಿಯ ಪಾಶ್ಚಿಮಾತ್ಯ ಪುಸ್ತಕೋದ್ಯಮಿಗಳಿಂದ ಶಾಂತಿಯ ಸಂಭಾವನೆಯನ್ನು ಪಡೆದರು. ಈ ಬಹುಮಾನವು ಸಾಹಿತ್ಯದಲ್ಲಿ ವಿಶ್ವಶಾಂತಿಯನ್ನು ಸಾಧಿಸಲು ಪ್ರಯತ್ನಿಸಿದವರಿಗೆ ಮಾತ್ರ ಕೊಡತಕ್ಕದ್ದು. ಸರ್ವಪಳ್ಳಿಯವರ ಪ್ರತಿಯೊಂದು ಗ್ರಂಥದಲ್ಲಿಯೂ ವಿಶ್ವ ಶಾಂತಿಯನ್ನು ಪ್ರತಿಪಾದಿಸುತ್ತಿರುವುದರಿಂದ ಜರ್ಮನರೂ ಇವರಿಗೆ ಬಹುಮಾನವನ್ನು ನೀಡಿದರು.

## ರಾಷ್ಟ್ರಪತಿಯಾಗಿ

ಡಾ॥ ರಾಜೇಂದ್ರ ಪ್ರಸಾದರು ಹನ್ನೆರಡು ವರ್ಷಗಳಕಾಲ ಭಾರತದ ರಾಷ್ಟ್ರಪತಿಯಾಗಿದ್ದರು. ಭಾರತೀಯರೆಲ್ಲರ ಗೌರವಕ್ಕೆ ಪಾತ್ರರಾಗಿ ದಕ್ಷತೆಯಿಂದ ಕಾರ್ಯ ನಿರ್ವಹಿಸಿದರು. ಆದರೆ ಅವರ ವೃದ್ಧಾಪ್ಯ ಮತ್ತು ಅನಾರೋಗ್ಯಕ್ಕಾಗಿ ಭಾರತೀಯರು ಅವರಿಗೆ ಅನಿವಾರ್ಯವಾಗಿ ಬಿಡುವು ಕೊಡಬೇಕಾಯಿತು. ಆಗ ಭಾರತದ ಅಧ್ಯಕ್ಷ ಪೀಠಕ್ಕೆ ಡಾ॥ ರಾಧಾ ಕೃಷ್ಣನ್‌ರವರಿಗಿಂತ ಉತ್ತಮ ಘನವಂತ ವ್ಯಕ್ತಿಯನ್ನು ಹುಡುಕುವುದು ವ್ಯರ್ಥವೆನಿಸಿತು. ಉಪರಾಷ್ಟ್ರಪತಿಯಾಗಿದ್ದ ಸರ್ವಪಳ್ಳಿಯವರು ಸರ್ವಾನು ಮತದಿಂದ 1962ನೇ ಮೇ ಹದಿಮೂರರಲ್ಲಿ ರಾಷ್ಟ್ರಾಧ್ಯಕ್ಷರಾದರು. ಬಹುಮುಖ ಪ್ರತಿಭಾವಂತರಾದ, ಲೋಕ ಶಿಕ್ಷಕರಾದ, ಹಾಗೂ ವಿಶ್ವ ವೇದಾಂತಿಯಾದ ಇವರು ರಾಷ್ಟ್ರಪತಿಯಾದುದು ಭಾರತೀಯರೆಲ್ಲರ ಪುಣ್ಯ ವಿಶೇಷವೆಂದೇ ಹೇಳಬೇಕು ಆಗ ವಿಶ್ವದ ನಾನಾ ಕಡೆಗಳಿಂದ, ನಾನಾ ಗಣ್ಯವ್ಯಕ್ತಿಗಳಿಂದ ಸರ್ವಪಳ್ಳಿಯವರಿಗೆ ಅಭಿನಂದನೆಗಳು ಬಂದವು.

ಇವರ 74ನೇ ವರ್ಷದ ಹುಟ್ಟು ಹಬ್ಬವನ್ನು 1962ನೇ ಸೆಪ್ಟಂಬರ್ ಮಾಹೆಯಲ್ಲಿ ಆಚರಿಸಿದರು. ಆಗ ಭಾರತಸರ್ಕಾರವು ಇವರ ಹುಟ್ಟುದಿನ ವನ್ನು ಶಿಕ್ಷಕರ ದಿನವನ್ನಾಗಿ ಆಚರಿಸುವಂತೆ ಏರ್ಪಡಿಸಿತು. ಆ ದಿವಸ ದೆಹಲಿಯಲ್ಲಿ ಏಳುನೂರುಮಂದಿ ಗಣ್ಯವ್ಯಕ್ತಿಗಳು ರಾಧಾಕೃಷ್ಣನ್ನರಿಗೆ ಅಭಿನಂದನೆಗಳನ್ನು ಅರ್ಪಿಸಿದರು ಎಲ್ಲಾ ಭಾಷೆಯ ಕವಿಗಳೂ, ಸಾಹಿತಿ ಗಳೂ, ಇವರ ಗುಣಗಾನಮಾಡಿ, ಹಾಡುಗಳನ್ನು ಕಟ್ಟಿ, ಪ್ರಬಂಧಗಳನ್ನು ಬರೆದು ತಮ್ಮ ಗೌರವವನ್ನರ್ಪಿಸಿದರು. ಭಾರತದ ಭೂ, ಜಲ, ಮತ್ತು ವಾಯು ದಳಗಳ ದಂಡನಾಯಕರು ಶುಭಸಂದೇಶಗಳನ್ನು ಕಳುಹಿಸಿದರು.

1963ನೆಯ ಮೇ ಮಾಹೆಯಲ್ಲಿ ಆಫ್‌ಘಾನಿಸ್ಥಾನದ ದೊರೆ ಮಹಮದ್ ಜಹೀರ್‌ಷಾರವರ ಆಹ್ವಾನವನ್ನು ಮನ್ನಿಸಿ ಆಫ್‌ಘಾನಿ ಸ್ಥಾನಕ್ಕೆ ಭೇಟಿಕೊಟ್ಟರು. ಅಲ್ಲಿನ ಜನತೆಯು ಇವರನ್ನು ಬಹು ಗೌರವ ದಿಂದ ಸ್ವಾಗತಿಸಿತು. ಅಲ್ಲಿಯ ರಾಜಧಾನಿಯಾದ ಕಾಬೂಲಿನಲ್ಲಿ

ಚಹಿರ್‌ಷಾರವರ ದಿಲ್‌ಮಷಾ ಅರಮನೆಯಲ್ಲಿ ಏರ್ಪಡಿಸಿದ್ದ ಭೋಜನ ಕೂಟದಲ್ಲಿ ಭಾಗವಹಿಸಿದರು. ಭಾರತ ಮತ್ತು ಚೀಣಾದೊಡನೆ ವಿವಾದ ವನ್ನು ಅಲ್ಲಿ ಪ್ರಸ್ತಾಪಿಸುತ್ತಾ "ನಾವು ಚೀಣಾದೊಡನೆ ವಿವಾದವನ್ನು ಶಾಂತಿಯುತವಾಗಿ ತೀರ್ಮಾನಿಸಿಕೊಳ್ಳ ಬೇಕೆಂದು ಬಯಸುತ್ತೇವೆ. ಆದರೆ ಭಾರತದ ಗೌರವಕ್ಕೆ ಧಕ್ಕೆ ಬರುವುದಾದರೆ, ಸಹಿಸಲಸಾಧ್ಯ!" ಎಂದು ಸರ್ವಪಳ್ಳಿಯವರು, ತಮ್ಮ ನಿರ್ಧರನುಡಿ ನುಡಿದರು.

ಅದೇ ವರುಷ ಜೂನ್ ಮಾಹೆಯಲ್ಲಿ ಅಮೆರಿಕಾದ ಅಧ್ಯಕ್ಷರಾಗಿದ್ದ ದಿವಂಗತ ಕೆನಡಿಯವರ ಆಹ್ವಾನದಮೇಲೆ ಅಮೆರಿಕ ದೇಶದ ಪ್ರವಾಸವನ್ನು ಕೈಗೊಂಡರು. ಈಮೊದಲೇ ಅನೇಕಸಾರಿ ತತ್ವಜ್ಞಾನಿಯಾಗಿ ಆದೇಶಕ್ಕೆ ಹೋಗಿದ್ದರು. ಅಲ್ಲಿನ ಜನತೆಗೆ ಚಿರಪರಿಚಿತರೂ ಆಗಿದ್ದರು ಆದರೂ ಪ್ರಖ್ಯಾತ ವೇದಾಂತಿಯೊಬ್ಬ ರಾಷ್ಟ್ರಪತಿಯಾದುದು ಅಚ್ಚರಿಯಾಗಿತ್ತು! ಕೆನಡಿಯವರೇ ಖುದ್ದಾಗಿ ಸ್ವಾಗತಿಸಿದರು. ಅಲ್ಲಿನ ಜನತೆಯು ಬಹಳ ಹರ್ಷಗೊಂಡರು ಅಲ್ಲಿ ನಡೆದ ವಿಶ್ವದ ಆಹಾರ ಸಮ್ಮೇಳನದಲ್ಲಿ ಸರ್ವಪಳ್ಳಿ ಯವರು ಭಾಗವಹಿಸಿದರು. ಅಧ್ಯಕ್ಷ ಕೆನಡಿಯವರು ಆ ಸಮ್ಮೇಳನವನ್ನು ಉದ್ಘಾಟಿಸಿದರು. ಅಲ್ಲಿ ರಾಧಾಕೃಷ್ಣನ್ನರು ಮಾತನಾಡುತ್ತಾ ಆಹಾರ ಗಳಿಕೆಯು ಜೀವನದ ಮೂಲಭೂತ ಅಗತ್ಯಗಳಲ್ಲೊಂದು. ಮೊದಲು ನಾವು ಜೀವಿಸಬೇಕು ಅನಂತರ ನಾವು ಉತ್ತಮ ಜೀವನವನ್ನು ನಡೆಸ ಬಹುದು. ಪ್ರಪಂಚದ ಜನಸಂಖ್ಯೆಯಲ್ಲಿ ಅರ್ಧಕ್ಕೂ ಹೆಚ್ಚುಮಂದಿ ಹಸಿವೆ ಯಿಂದ ಬಳಲುತ್ತಿದ್ದಾರೆ. ಅದು ನಿವಾರಣೆಯಾಗುವ ತನಕ ವಿಶ್ವದಲ್ಲಿ ಶಾಂತಿ ಮತ್ತು ಸಮೃದ್ಧಿಯಾಗುವುದಿಲ್ಲ. ಆದಕ್ಕಾಗಿ ಪ್ರಪಂಚದ ಎಲ್ಲಾ ಕಡೆಯೂ ಆಹಾರದ ಉತ್ಪಾದನೆಯು ಹೆಚ್ಚಬೇಕು. ಬೇಸಾಯ ಕೈಗಾ ರಿಕೆಗೆ ವಿಜ್ಞಾನ ಮತ್ತು ತಾಂತ್ರಿಕ ವಿಧಾನಗಳು ಪರಿಚಯವಾಗಬೇಕು ಆಗ ಆಹಾರದ ಉತ್ಪಾದನೆಯು ಹೆಚ್ಚುತ್ತದೆ. ಎಂದು ಹೇಳಿದರು.

ಚೀಣಾ ವಿವಾದದ ವಿಷಯವಾಗಿ ಅಧ್ಯಕ್ಷ ಕೆನಡಿಯವರೊಡನೆ ಎಪ್ಪತ್ತು ನಿಮಿಷಗಳಕಾಲ ಮಾತನಾಡಿದರು. 1962ನೇ ನವಂಬರ್ ನಲ್ಲಿ ಚೀಣವು ಭಾರತದ ಉತ್ತರದ ಗಡಿಯನ್ನು ಆಕ್ರಮಿಸಿ ಹಿಂದಿರುಗಿತ್ತು. ಆದರೂ ಅದು ಮತ್ತೊಮ್ಮೆ ಧಾಳಿಮಾಡುವ ನಿರೀಕ್ಷೆಯಿತ್ತು. ಅದೇ

ವಿಷಯುವನ್ನು ಕುರಿತು ಶ್ವೇತಭವನದಲ್ಲಿ ಕೆನಡಿಯುವರು ಏರ್ಪಡಿಸಿದ್ದ ಭೋಜನಕೂಟದಲ್ಲಿ ಭಾಗವಹಿಸಿದ್ದಾಗ ಮಾತನಾಡಿದರು. ಅಮೆರಿಕಾ ಕಾಂಗ್ರೆಸ್ ಸದಸ್ಯರೆಲ್ಲರೂ ಸೇರಿ ಸರ್ವಪಳ್ಳಿಯುವರಿಗೆ ಗೌರವಿಸಿದರು. "ರಾಧಾಕೃಷ್ಣನ್ನರು ಭಾರತದ ಅಧ್ಯಕ್ಷರೂ 'ಪ್ರಾಜ್ಞರೂ ವಿದ್ವತ್ಪೂರ್ಣ ರಾದವರು " ಎಂದು ಅಲ್ಲಿನ ಸೆನೆಟ್ಟಿನ ಅಧ್ಯಕ್ಷರಾದ ಫುಲ್ ಬ್ರೈಟ್‌ರವರು ಹೇಳಿದರು.

ಅದರ ಮಾರನೆಗೆ ವಾಷಿಂಗ್‌ಟನ್ನಿನ ಸಭೆಯೊಂದರಲ್ಲಿ ಭಾಗವಹಿಸಿ ದಾರಿದ್ರ್ಯ ಮತ್ತು ಅನಕ್ಷರತೆಯನ್ನು ನಿರ್ಮೂಲ ಮಾಡುವುದೇ ಭಾರತದ ಗುರಿ. ಭಾರತವು ಪ್ರಜಾಸತ್ತೆಯ ಮೂಲಕ ಒಂದುಗೂಡಿದೆ. ಇದು ಯಾವ ಬಲಾತ್ಕಾರ ಅಥವಾ ನಿರಂಕುಶಾಧಿಕಾರಿಗಳಿಗೂ ಒಳಗಾಗದು. ಶಾಂತಿಗಾಗಿ ಶ್ರಮಿಸುವುದೇ ನಮ್ಮ ಸಹಜಗುಣ. ನಮ್ಮಲ್ಲಿ ನಾನಾ ಭಾಷೆ ಗಳು ಮತ್ತು ನಾನಾ ಧರ್ಮಗಳಿವೆ. ಎಲ್ಲಕ್ಕೂ ಸಮಾನವಾದ ಹಕ್ಕು ಭಾಧ್ಯತೆಗಳಿವೆ. ಆದುದರಿಂದಲೇ ಒಡಕುಂಟಾಗಲು ಕಾರಣವಿಲ್ಲ. ಎಂದು ತಿಳಿಸುತ್ತಾರೆ. ಆದರ ಮಾರನೆಗೆ ವಿಶ್ವಸಂಸ್ಥೆಯಲ್ಲಿ ಭಾಗವಹಿಸಿದರು. ಪೆನ್ಸಿಲ್ವೇನಿಯ ವಿಶ್ವವಿದ್ಯಾನಿಲಯವು ಡಾ|| ರಾಧಾಕೃಷ್ಣನ್‌ರವರನ್ನು ಆಹ್ವಾನಿಸಿ "ಡಾಕ್ಟರ್ ಆಫ್ ಲಾಸ್" ಎಂಬ ಗೌರವ ಪ್ರಶಸ್ತಿಯನ್ನು ನೀಡಿತು. ಆ ವಿಶ್ವವಿದ್ಯಾನಿಲಯದ ಅಧ್ಯಕ್ಷರಾದ ಡಾ|| ಡೇವಿಡ್ ಗೊಡಾರ್ಡ್‌ರವರು ಇವರಿಗೆ ಪ್ರಶಸ್ತಿನೀಡುತ್ತಾ, ರಾಧಾಕೃಷ್ಣನ್ನರು ಜಗತ್ತಿಗೆ ಧಾರ್ಮಿಕ ಬೆಳಕನ್ನು ಇತ್ತಿರುವುದರ ವಿಷಯದಲ್ಲಿ ಪ್ರಶಂಸಿಸಿದರು. ಅಲ್ಲಿ ವ್ಯಾಸಂಗ ಮಾಡುತ್ತಿದ್ದ 119 ಭಾರತೀಯ ವಿದ್ಯಾರ್ಥಿಗಳನ್ನು ಸರ್ವಪಳ್ಳಿಯುವರಿಗೆ ಪರಿಚಯ ಮಾಡಿಕೊಟ್ಟರು.

ಅದಾದ ಎರಡು ದಿನಗಳನಂತರ ಅಲ್ಲಿಂದ ಸುಮಾರು ಎರಡುಸಾವಿರ ಮೈಲಿ ದೂರದ ರಾಕೀ ಪರ್ವತ ಪ್ರದೇಶದಲ್ಲಿರುವ ಡೆನ್ವರ್ ವಿಶ್ವವಿದ್ಯಾ ನಿಲಯಕ್ಕೆ ಅದರ ಆಹ್ವಾನದ ಮೇಲೆ ಭೇಟಿಕೊಟ್ಟರು. ಆ ವಿಶ್ವವಿದ್ಯಾ ನಿಲಯವು ಇವರಿಗೆ " ಡಾಕ್ಟರ್ ಆಫ್ ಲಾಸ್ " ಎಂಬ ಗೌರವ ಪದವಿ ಯನ್ನಿತ್ತು ಗೌರವಿಸಿತು ಸರ್ವಪಳ್ಳಿಯುವರು ಅಲ್ಲಿನ ಪ್ರಕೃತಿಸೌಂದರ್ಯಕ್ಕೆ ಮಾರುಹೋದರು.

ಅಮೆರಿಕಾದೇಶವು ವಿಜ್ಞಾನದಲ್ಲಿ ಎಷ್ಟು ಮುಂದುವರಿದಿದೆ ಎಂಬು ದನ್ನು ಕೇಪ್ ಕೆನೆವರಾಟ್ ಎಂಬಲ್ಲಿ ಮಿನಿಟಮನ್ ಖಂಡಾಂತರ ಬೆಲಿಸ್ಟಿಕ್ ಕ್ಷಿಪಣಿಯನ್ನು ಪ್ರಯೋಗಿಸಿದುದನ್ನು ಪ್ರತ್ಯಕ್ಷವಾಗಿ ವೀಕ್ಷಿಸಿ ತಿಳಿದು ಕೊಂಡರು.

ಅದೇ ವರುಷ ನವಂಬರ್ ತಿಂಗಳಲ್ಲಿ ನೇಪಾಳಕ್ಕೆ ಭೇಟಿಕೊಟ್ಟರು ಅಲ್ಲಿ ಮಾತನಾಡುತ್ತಾ "ವಿಶ್ವದಲ್ಲಿ ಶಾಂತಿಯು ನೆಲಸಬೇಕಾದರೆ ವಿಶ್ವದಲ್ಲಿ ಏಕಪದ್ಧತಿಯು ಅನಿವಾರ್ಯ. ಪ್ರಪಂಚದಲ್ಲಿರುವ ಅನ್ಯಾಯ ನಿರ್ಮೂಲ ನಕ್ಕೆ ಪ್ರತಿರಾಷ್ಟ್ರವೂ ಕೂಡ ತನ್ನ ಪರಮಾಧಿಕಾರದಲ್ಲಿ ಕಿಂಚಿತ್ತನ್ನಾದರೂ ತ್ಯಾಗ ಮಾಡಬೇಕು" ಎಂದು ನುಡಿದರು. ಬರ್ಮಿಂಡು ವಿಶ್ವವಿದ್ಯಾ ನಿಲಯವು ಸರ್ವಪಳ್ಳಿಯವರಿಗೆ 'ಡಾಕ್ಟರ್ ಆಫ್ ಲಿಟರೇಚರ್' ಎಂಬ ಗೌರವ ಪದವಿಯನ್ನಿತ್ತು ಮನ್ನಿಸಿತು.

ಅದೇ ವರುಷ, ಕೇರಳ ವಿಶ್ವವಿದ್ಯಾನಿಲಯವು ಸರ್ವಪಳ್ಳಿಯವರನ್ನು ಆಹ್ವಾನಿಸಿ 'ಡಾಕ್ಟರ್ ಆಫ್ ಲೆಟರ್' ಎಂಬ ಗೌರವ ಪ್ರಶಸ್ತಿಯನ್ನಿತ್ತಿತು.

ಉಪಾಧ್ಯಾಯರಾಗಿ, ವೇದಾಂತ ಉಪದೇಶಕರಾಗಿ ರಾಜಕೀಯದ ಉನ್ನತವಲಯಗಳಲ್ಲಿ ಕಾರ್ಯನಿರ್ವಹಿಸಿ, ಅದರಲ್ಲಿಯೇ ಅತ್ಯುನ್ನತ ಮಟ್ಟವನ್ನೇರಿದ ಡಾ॥ ರಾಧಾಕೃಷ್ಣನ್ನರಿಗೆ ಆಡಳಿತದಲ್ಲಿರುವ ಲೋಪ ದೋಷಗಳು ಚೆನ್ನಾಗಿ ತಿಳಿದಿರುವುದರಲ್ಲಿ ಆಶ್ಚರ್ಯವೇನಿಲ್ಲ. ಆದರೂ ದೋಷಗಳನ್ನೇ ಕೆದಕುತ್ತಾ ವ್ಯಕ್ತಿಗತವಾಗಿ ಟೀಕಿಸುವುದು ಇವರ ಸ್ವಭಾವವಲ್ಲ. ಕಾಣಬರುವ ದೋಷಗಳಿಗೆ ಕಾರಣವೇನು? ಅದನ್ನು ಸರಿಪಡಿಸುವ ಬಗೆಯೆಂತು? ಹೇಗೆ ಮಾಡಿದರೆ ಪ್ರಜೆಗಳಿಗೆ ನೆಮ್ಮದಿಯೂ ಆಡಳಿತವಲ್ಲಿ ಸುಲಲಿತವೂ ಆದೀತು? ಎಂದು ಆಲೋಚಿಸುತ್ತಾರೆ. ಕೇವಲ ಕಾನೂನುಗಳನ್ನು ಮಾಡುವುದರಿಂದ ಕಾರ್ಯವನ್ನು ನಿರ್ವಹಿಸ ಲಾಗದು. ಸಂಬಂಧಪಟ್ಟವರ ಮನಸನ್ನು ಮಾರ್ಪಡಿಸಬೇಕು. ಎಂದು ಇವರ ಭಾವನೆ.

ರಾಜಕೀಯಕ್ಕೆ ಪ್ರಜಾಪ್ರತಿನಿಧಿಗಳು ಪ್ರವೇಶಿಸುವುದಲ್ಲದೆ ಕೆಲವು ಇಲಾಖಾ ಮುಖ್ಯಸ್ಥರು ಪ್ರವೇಶಿಸುತ್ತಿರುವುದರಿಂದ ಆಡಳಿತವು ಸಡಿಲ ವಾಗುತ್ತಿರುವುದಕ್ಕೆ ಒಂದು ಕಾರಣ ಎಂದು ಅರಿತ ಸರ್ವಪಳ್ಳಿಯವರು

ಮದರಾಸಿನ ನ್ಯಾಯಾಲಯದ ಶತಮಾನೋತ್ಸವವನ್ನು ತ್ತಾಟಿಸುದ್ದಾ "ನ್ಯಾಯಾಧೀಶರು ರಾಜಕೀಯಕ್ಕೆ ಪ್ರವೇಶಿಸಬಾರದು. ಹಾಗೆ ಪ್ರವೇಶಿಸುವುದರಿಂದ ಸರಿಯಾದ ನ್ಯಾಯ ಪರಿಶೀಲನೆಯಾಗುವುದಿಲ್ಲ. ದೇಶದ ಕಾಯಿದೆಗಳ ಉಪಯೋಗವು ಪ್ರತಿಯೊಬ್ಬ ಪ್ರಜೆಗೂ, ದೊರೆಯಬೇಕಾದರೆ, ನ್ಯಾಯಾಲಯಗಳ ಪ್ರಾಮಾಣಿಕತೆಯು ಅತ್ಯವಶ್ಯಕ. ದೇಶದಲ್ಲಿ ಸಮೃದ್ಧಿಯುಂಟಾಗ ಬೇಕಾದರೆ, ಕಾರ್ಯಾಂಗ, ಶಾಸಕಾಂಗ ಮತ್ತು ನ್ಯಾಯಾಂಗಗಳು ಅನ್ಯೋನ್ಯವಾಗಿ ಹೊಂದಿಕೊಂಡು ಕಾರ್ಯ ನಿರ್ವಹಿಸಬೇಕು. ಕಾರ್ಯಾಂಗ ಮತ್ತು ಶಾಸಕಾಂಗಗಳು ಕಾಯಿದೆಗಳನ್ನೂ ನ್ಯಾಯಸಂಹಿತೆಗಳನ್ನೂ ರಚಿಸುತ್ತವೆ. ಆದರೆ ಅವುಗಳನ್ನು ರಕ್ಷಿಸುವ ಹೊಣೆಯು ನ್ಯಾಯಾಂಗದ್ದು. ಆದುದರಿಂದ ನ್ಯಾಯಾಂಗವು ಶಾಸಕಾಂಗಗಳು ಮಾಡಿದ ಕಾಯಿದೆಗಳು ಸರಿಯಾಗಿವೆಯೆ? ಅಥವಾ ಇಲ್ಲವೆ? ಎಂಬುದನ್ನು ಪರೀಕ್ಷಿಸಿ ನೋಡಬೇಕು. ಹಾಗೆ ಮಾಡುವುದರಿಂದ ರಾಷ್ಟ್ರದ ಸುಭದ್ರ ಬುನಾದಿಯನ್ನು ಹಾಕಿದಂತಾಗುತ್ತಾದೆ" ಎಂದು ಹೇಳುತ್ತಾರೆ.

ಮತ್ತೊಮ್ಮೆ ಅಲ್ಲಿಯೇ ಮಾತನಾಡುತ್ತಾ "ಹಿಂದಿನಕಾಲಕ್ಕಿಂತಲೂ, ಇಂದು ಜನತೆಯು ಶ್ರದ್ಧಾ ಭಕ್ತಿಗಳಿಂದ ಕಾಯಿದೆಗಳನ್ನು ಪಾಲಿಸಬೇಕು ಪರಕೀಯರ ಆಡಳಿತದಲ್ಲಿ ತೋರುತ್ತಿದ್ದ ತಾತ್ಸಾರ ಮತ್ತು ಭೀತಿಗಳು ಈಗ ಸಲ್ಲದು. ದೇಶದ ಸತ್ಫಲ ಮತ್ತು ದುಷ್ಫಲಗಳು ನಮ್ಮನ್ನೇ ಹೊಂದಿವೆ" ಎಂದು ಹೇಳಿದ್ದಾರೆ,

ರಾಷ್ಟ್ರದಲ್ಲಿ ಕೆಲವು ರಾಜಕೀಯ ವ್ಯಕ್ತಿಗಳ ದುರಾಶೆಯ ವಿಷಯದಲ್ಲಿ ಕೆಲವು ಮಾತುಗಳನ್ನು ಹೇಳುತ್ತಾರೆ, ರಾಷ್ಟ್ರದ ಪ್ರತಿಯೊಬ್ಬ ವ್ಯಕ್ತಿಯೂ ನೇರವಾಗಿ ಸರ್ಕಾರದೊಡನೆ ಸಂಪರ್ಕವಿಟ್ಟುಕೊಳ್ಳಲು ಸಾಧ್ಯವಿಲ್ಲ. ಪ್ರಜಾಪ್ರಭುತ್ವದಲ್ಲಿ ಜನತೆಯಿಂದ ಚುನಾಯಿಸಲ್ಪಟ್ಟ, ನಾಯಕರು ಜನತೆಯ ಪರವಾಗಿ ಸರ್ಕಾರವನ್ನು ನಡೆಸಬೇಕು. ಜನತೆಯ ಸೌಕರ್ಯಕ್ಕನುಗುಣವಾಗಿ ಸರ್ಕಾರವು ವರ್ತಿಸುವಂತೆ ಮಾಡಬೇಕು. ಆದರೆ ಇತ್ತೀಚೆಗೆ ಕೆಲವು ರಾಜಕಾರಣಿಗಳು ಪ್ರಜಾಕ್ಷೇಮವನ್ನೇ ಮರೆತು ಪ್ರಜೆಗಳ ಹೆಸರಿನಲ್ಲಿ ಸರ್ಕಾರದ ಹಣವನ್ನು ದುರುಪಯೋಗ ಪಡಿಸಿಕೊಳ್ಳುತ್ತಿರುವ ವಿಷಯವು ಅನುಭವಕ್ಕೆ ಬಂದಿದೆ. ಪಾಂಡುಚೆರಿಯಲ್ಲಿ ಮಾತ

ನಾಡುತ್ತಾ " ರಾಜಕಾರಣಿಗಳಿಂದ ರಾಷ್ಟ್ರವು ಅಭ್ಯುದಯ ವಾಗಬೇಕಾಗಿದೆ. ಆದರೆ ಇತ್ತೀಚಿನ ಕೆಲವು ರಾಜಕಾರಣಿಗಳು ಮಹತ್ವಕಾಂಕ್ಷಿಗಳು. ಅವರಿಗೆ ತೃಪ್ತಿಎಂಬುದೇ ಇಲ್ಲ. ಅವರ ದುಡಿಮೆಯಲ್ಲವೂ ಸ್ವಾರ್ಥಕ್ಕಾಗಿ ರಾಷ್ಟ್ರದಕಡೆಗೆ ಅವರ ಗಮನವಿಲ್ಲ. ತಾನಿದ್ದರೆ ಮೂರುಲೋಕವೆಂಬ ಭಾವನೆಯನ್ನು ಹೊಂದಿದ್ದಾರೆ. ಈರೀತಿಯು ಪ್ರಜಾಪ್ರಭುತ್ವಕ್ಕೆಸಲ್ಲದು ರಾಜಕಾರಣಿಗಳು ದುರಾಶೆಯನ್ನು ಬಿಡಬೇಕು. ಜನಸೇವೆಯಲ್ಲಿ ಅವರು ತೃಪ್ತರಾಗಬೇಕು. ಆಗಲೇ ದೇಶದ ಶಕ್ತಿಹೆಚ್ಚುವುದು. ಸಮಾಜ ಸುಧಾರಣೆಯಾಗುವುದು " ಎಂದು ಹಿತವಚನವನ್ನು ನೀಡಿದ್ದಾರೆ.

ದೇಶಕ್ಕೆ ಸ್ವಾತಂತ್ರ್ಯವು ಬಂದಾಗ ಜನತೆಯು ರಾಮರಾಜ್ಯವನ್ನು ನಿರೀಕ್ಷಿಸಿತ್ತು. ಆದರೆ ಕೆಲವು ಸ್ವಾರ್ಥಿಗಳ ವರ್ತನೆಗಳಿಂದ ಬೇಸತ್ತ ಜನತೆಯು ಅತೃಪ್ತಿಯನ್ನು, ಹೊಂದುತ್ತಿದೆ ಅದನ್ನು ಹೋಗಲಾಡಿಸುವ ಮದ್ದು ಜನತೆಯಲ್ಲಿ ನಂಬಿಕೆಯನ್ನು ಹುಟ್ಟಿಸುವುದಾಗಿದೆ. ಎಂಬ ವಿಷಯವನ್ನು ಬೆಂಗಳೂರಿನಲ್ಲಿ ಮಾತನಾಡುತ್ತಾ. "ಸ್ವಾತಂತ್ರ್ಯಾನಂತರ ಜನರಲ್ಲಿ ನವಜಾಗೃತಿಯುಂಟಾಗಿದೆ. ಭವಿಷ್ಯತ್ತಿನಲ್ಲಿ ಉತ್ತಮ ಆಶೋತ್ತರಗಳನ್ನು ನಂಬಿಕೊಂಡಿದ್ದಾರೆ. ಅದನ್ನು ಸರ್ಕಾರವು ಕಾರ್ಯರೂಪಕ್ಕೆ ತರದಿದ್ದರೆ ಜನತೆಯಲ್ಲಿ ಅತೃಪ್ತಿಯ ಮನೋಭಾವನೆ ಯುಂಟಾಗುತ್ತದೆ. ಶುದ್ಧವಾದ ಸರ್ಕಾರ ಮತ್ತು ಉತ್ತಮ ಆಡಳಿತವಿದ್ದು ಎಂದಾದರೊಂದುದಿನ ಉತ್ತಮ ರೀತಿಯನ್ನು ಕಾರ್ಯರೂಪಕ್ಕೆ ತರುವುದೆಂಬ ನಂಬಿಕೆಯು ಜನತೆಯಲ್ಲುಂಟಾದರೆ ತಾತ್ಕಾಲಿಕ ತೊಂದರೆಗಳನ್ನು ಸಹಿಸಿಕೊಳ್ಳಬಲ್ಲರು. ಆದುದರಿಂದ ಸರ್ಕರವು ಈ ಧ್ಯೇಯವನ್ನು ಸದಾ ಹೊಂದಿರಬೇಕು" ಎಂದು ಸೂಚಿಸುತ್ತಾರೆ.

ದೇಶದ ಅಭಿವೃದ್ಧಿಗಾಗಿ ಪಂಚವಾರ್ಷಿಕ ಯೋಜನೆಗಳು ಏರ್ಪಟ್ಟವೆ. ಆದರೂ ನಿರೀಕ್ಷಿಸಿದಷ್ಟು ಫಲದಾಯಕವಾಗಿಲ್ಲ. ಜನತೆಯು ಯೋಜನೆಗಳ ಪೂರ್ಣ ಉಪಯೋಗವನ್ನು ಹೊಂದುತ್ತಿಲ್ಲ ಎಂಬ ವಿಷಯವು ಅವರ ಗಮನಕ್ಕೆಬಂದಿದೆ. ಜನತೆಯಲ್ಲಿ ತಾರತಮ್ಯ ಭಾವನೆಯ ಭ್ರಮೆಯು ತಾಂಡವವಾಡುತ್ತಿದೆ. ಅದನ್ನು ಮರೆಯಬೇಕು! ಉಪಯೋಗವನ್ನು ಹೊಂದಬೇಕು. ಎಂಬ ಅಭಿಪ್ರಾಯವನ್ನು ದೆಹಲಿಯಲ್ಲಿ ಒಮ್ಮೆ

ಮಾತನಾಡುತ್ತಾ ತಿಳಿಸುವರು "ರಾಷ್ಟ್ರದಲ್ಲಿ ಕೋಟ್ಯಾಂತರ ರೂಪಾಯಿಗಳ ಯೋಜನಾಕಾರ್ಯಗಳು ನಡೆಯುತ್ತಿವೆ. ಆರ್ಥಿಕ ಅಸಮಾನತೆಯನ್ನು ಹೋಗಲಾಡಿಸುವುದಕ್ಕಾಗಿ ಕೈಗಾರಿಕಾ ಕೇಂದ್ರಗಳು ಹೆಚ್ಚಾಗುತ್ತಿವೆ. ಆದರೂ ಜನತೆಯ ಮನಸ್ಸು ಈ ಕಡೆಗೆ ವಾಲುತ್ತಿಲ್ಲ. ರಾಷ್ಟ್ರದ ಯಾವುದೊ ಒಂದು ಪ್ರದೇಶದ ಅಭಿವೃದ್ಧಿಗಾಗಿ ಯೋಜನೆಯು ಹಾಕಲ್ಪಟ್ಟಿಲ್ಲ. ಇಡೀ ರಾಷ್ಟ್ರದ ಅಭ್ಯುದಯವೇ ಆದರಗುರಿ. ಯೋಜನೆಯ ಅನುಕೂಲತೆಯನು ಪಡೆಯಲು ಪ್ರತಿಯೊಂದು ಪ್ರದೇಶಕ್ಕೂ ಹಕ್ಕಿದೆ ದೇಶದ ದಾರಿದ್ರ್ಯವನು, ನಿರ್ಮೂಲಗೊಳಿಸುವುದು ನಮ್ಮೆಲ್ಲರ ಕರ್ತವ್ಯ ಹಾಗೆಯೇ ಪ್ರಜೆಗಳ ಜೀವನದಲ್ಲಿ ಸುಖಸಂತೋಷಗಳನ್ನು ಕಲ್ಪಿಸುವುದೂ ನಮ್ಮೆಲ್ಲರ ಧರ್ಮ ವಾಗಿದೆ." ಎಂದಿದ್ದಾರೆ.

ನೆಹರೂರವರ ಭಾವನೆಯಂತೆಯೇ ಸಾಧ್ಯವಾದಷ್ಟು ಪ್ರಯತ್ನಿಸಿ ಯುದ್ಧವನ್ನು ನಿವಾರಿಸಬೇಕೆಂಬುದೇ ಇವರ ಇಷ್ಟ. ಚೀಣಾ ಮತ್ತು ಭಾರತದ ತಿಕ್ಕಾಟದ ಸಮಯದಲ್ಲಿ ಪಾಕಿಸ್ಥಾನವು ಭಾರತದ ಗಡಿಯನ್ನು ಆಕ್ರಮಿಸಲು ಪ್ರಯತ್ನಿಸಿದಾಗ ಸರ್ವಪಳ್ಳಿಯವರು ದುಡುಕಲಿಲ್ಲ. "ಭಾರತ ಮತ್ತು ಪಾಕಿಸ್ಥಾನಗಳ ಜನತೆಯು ಘರ್ಷಣೆಯನ್ನು ಮಾಡಿಕೊಳ್ಳಬಾರದು ಶಾಂತಿ ಮತ್ತು ಸೌಹಾರ್ದವನ್ನು ಬೆಳೆಸಿಕೊಳ್ಳಬೇಕು. ಅದರ ಪ್ರಥಮ ಹೆಜ್ಜೆಯಾಗಿ ಎರಡು ರಾಷ್ಟ್ರಗಳ ಮುಖ್ಯಸ್ಥರು ಜಂಟಿಮನವಿಯನ್ನು ಹೊರ ಡಿಸಬೇಕು" ಎಂದು ಸಲಹೆಮಾಡಿದರು. ಅದೇ ವಿಷಯವನ್ನೂ ಪಾಕಿಸ್ಥಾನದ ಅಧ್ಯಕ್ಷರಾದ ಅಯೂಬ್‌ಖಾನರಿಗೂ ತಿಳಿಸುವರು.

ಸಾವಿರಾರು ಗ್ರಂಥಗಳನ್ನು ಓದಿ ಬಳಲಿದ ಇವರ ನೇತ್ರಗಳ ಶಕ್ತಿ ಕುಗ್ಗಿತು. 1964ನೆಯ ಫೆಬ್ರವರಿಯಲ್ಲಿ ನಾಲ್ಕರಂದು ನೇತ್ರ ಚಿಕಿತ್ಸೆಯಾಯಿತು. ಆಗ ಅವರಿಗೆ ಅನಿವಾರ್ಯವಾಗಿ ವಿಶ್ರಾಂತಿಯು ಬೇಕಾಯಿತು. ಉಪರಾಷ್ಟ್ರಪತಿ ಡಾ|| ಜಕೀರ್ ಹುಸೇನರಿಗೆ ರಾಷ್ಟ್ರಪತಿಯ ಅಧಿಕಾರವನ್ನು ತಾತ್ಕಾಲಿಕವಾಗಿ ವಹಿಸಿದರು. 18 ದಿನಗಳ ವಿಶ್ರಾಂತಿಯನ್ನು ಹೊಂದಿದ ನಂತರ 22–2–64ರಂದು ಮತ್ತೆ ಅಧಿಕಾರವನ್ನು ಸ್ವೀಕರಿಸಿದರು ಆದರೂ ವೈದ್ಯರ ಸಲಹೆಯಂತೆ ರಷ್ಯಾ, ಇಥಿಯೋಪಿಯಾ, ಯುಗಾಸ್ಲೇವಿಯಾ ದೇಶಗಳ ಆಹ್ವಾನದ ಮೇರೆಗೆ ಕೊಡಬೇಕಾಗಿದ್ದ ಕಾರ್ಯಕ್ರಮಗಳು ನಿಂತು ಹೋದುವು

ಭಾರತದ ರಾಷ್ಟ್ರಪತಿಯ ಅಧಿಕಾರದಲ್ಲಿದ್ದಾಗ ಒಮ್ಮೆ ಮಾತ್ರ ನಡೆಯುವ ನೌಕಾಪಡೆಯ ಗೌರವ ರಕ್ಷೆಯು ಬೊಂಬಾಯಿಯಲ್ಲಿ 27–3–64 ರಂದು ಬಹು ವಿಜೃಂಭಣೆಯಿಂದ ನಡೆಯಿತು. ಆ ಗೌರವ ರಕ್ಷೆಯನ್ನು ಡಾ|| ರಾಧಾಕೃಷ್ಣರು ಸ್ವೀಕರಿಸಿದರು. ದಿವಂಗತ ಡಾ|| ರಾಜೇಂದ್ರಪ್ರಸಾದರು ರಾಷ್ಟ್ರಪತಿಯಾಗಿದ್ದಾಗ ಇಂತಹ ಗೌರವ ರಕ್ಷೆಯ ಸಮಾರಂಭವು ನಡೆದಿತ್ತು.

27–5–1964 ಭಾರತಿಯರೆಲ್ಲರ ದುರ್ದಿನ. ವಿಶ್ವದ ಇತಿಹಾಸಕ್ಕೆ ಕಂಬನಿ ಸವರಿದ ಕಪ್ಪುದಿನ. ಭಾರತದ ಸ್ವಾತಂತ್ರ್ಯ ವೀರಾಗ್ರಣ್ಯನಾದ, ಹದಿನೇಳು ವರ್ಷಗಳು ಸತತವಾಗಿ ಸ್ವತಂತ್ರ ಭಾರತದ ಪ್ರಥಮ ಪ್ರಧಾನಿಯಾಗಿದ್ದ, ಭಾರತದ ನಿಜವಾದ ಜೀವಂತ ರತ್ನವಾಗಿದ್ದ, ಜವಹಿರಲಾಲ್ ನೆಹರೂರವರು ಕಣ್ಮರೆಯಾದ ದುರ್ದಿನವದು. ಅಂದು ಸರ್ವಪಳ್ಳಿಯವರ ಬಲಭುಜವೆ ಕುಗ್ಗಿತು "ರಾಷ್ಟ್ರದ ಇತಿಹಾಸದಲ್ಲಿ ಒಂದು ಶಕೆ ಮುಕ್ತಾಯಗೊಂಡಿತು. ಮಾನವ ಜನಾಂಗದ ವಿಮೋಚಕ ಭಾರತದ ನಿರ್ಮಾಪಕ" ಎಂದು ಹೊಗಳಿದರು. "ಭಾರತರತ್ನ" ಪ್ರಶಸ್ತಿಯನ್ನು ನೆಹರೂರವರಿಗಿಂತ ದಿನವನ್ನು ಸ್ಮರಿಸಿ ಕಣ್ಣೀರಿಟ್ಟರು ಅದೆಲ್ಲಕ್ಕಿಂತಲೂ ಹೆಚ್ಚಾಗಿ ನೆಹರೂರವರ ಸ್ಥಾನವನ್ನು ತುಂಬುವುದು ಸುಲಭಸಾಧ್ಯವಾಗಿರಲಿಲ್ಲ. ಮತ್ತೆ ಮಂತ್ರಿ ಮಂಡಲವನ್ನು ರಚಿಸುವುದಂತೂ, ಕ್ಲಿಷ್ಟಕರವಾದುದೇ ಆಗಿತ್ತು. ಆ ಸಮಸ್ಯೆಯನ್ನೂ ಬಗೆಹರಿಸಿದರು. ನೆಹರೂರವರ ಧ್ಯೇಯಾನುಯಾಯಿ ಶ್ರೀ ಲಾಲ್‌ಬಹದ್ದೂರ್‌ಶಾಸ್ತ್ರಿಯವರನ್ನು ಪ್ರಧಾನಿಯನ್ನಾಗಿ ಸ್ವೀಕರಿಸಿದರು. ಮಂತ್ರಿಮಂಡಲದಲ್ಲೂ ಅಲ್ಪಸ್ವಲ್ಪ ಬದಲಾವಣೆಗಳಾಯಿತು.

ಭಾರತದಲ್ಲಿ ಭಿನ್ನ ಭಿನ್ನ ಮತೀಯ ಧರ್ಮಗಳಿದ್ದರೂ ಐಕ್ಯತೆಗೆ ಭಂಗವಿಲ್ಲವೆಂದು ಪರದೇಶಗಳಲ್ಲಿ ಮಾತನಾಡುವಾಗ ಭಾರತದ ಪ್ರೌಢಿಮೆಯನ್ನೇನೋ ತೋರುತ್ತಾರೆ. ಆದರೂ ಭಾರತದಲ್ಲಿರುವ ಮತೀಯ ಧರ್ಮಗಳ ತಿಕ್ಕಾಟದಿಂದ ದೇಶದ ಅಭ್ಯುದಯಕ್ಕೆ ಹಾಗೂ ಶಾಂತಿಗೆ ಭಂಗವಾಗುತ್ತಿರುವುದಕ್ಕಾಗಿ ಬಹಳ ವ್ಯಥೆಯನ್ನು ಪಡುತ್ತಾರೆ. ದೇಶದಲ್ಲಿ ಆಗಾಗ ಉಂಟಾಗುತ್ತಿರುವ ಕೋಮುವಾರು ಗಲಭೆಗಳು ಇವರ ಮನಸ್ಸಿಗೆ ವ್ಯಥೆಯನ್ನುಂಟು ಮಾಡುತ್ತಿವೆ. ಅದನ್ನೇ ಸರ್ವಪಳ್ಳಿಯವರು ಇಂಡಿಯನ್

ಸ್ಕೂಲುಗಳ ಸಮ್ಮೇಳನದ ರಜತ ಮಹೋತ್ಸವವನ್ನುದ್ಘಾಟಿಸುತ್ತಾ "ಶಾಂತಿ, ಸಹನೆ ಮತ್ತು ಪರಸ್ಪರ ಅರಿವಿನ ಸಂಪ್ರದಾಯವನ್ನು ಹೊಂದಿರುವ ಭಾರತದಲ್ಲಿ ಈಗಲೂ ಗಲಭೆಗಳೇಕೆ ನಡೆಯುತ್ತಿವೆ ! ಇದು ರಾಷ್ಟ್ರದ ಕೀರ್ತಿಗೆ ಕಳಂಕ ತರುವಂತಹ ವಿಷಯ, ಈ ಘರ್ಷಣೆಗೆ ಪರರ ಪ್ರಚೋದನೆ ಎನ್ನುವುದು ಸರಿಯಾದ ಕಾರಣವಲ್ಲ. ಏನೇ ತೊಂದರೆಗಳು ಬರಲಿ ! ಅದನ್ನೆಲ್ಲವನ್ನೂ ಮೆಟ್ಟಿ ನಿಲ್ಲಬೇಕು. ಇತರರಿಗೆ ಮೇಲ್ಪಂಕ್ತಿಯನ್ನು ಹಾಕಬೇಕು. ಉನ್ನತ ಸಂಪ್ರದಾಯದಲ್ಲಿ ನಾವು ನಿಷ್ಠಾವಂತರೆಂಬುದನ್ನು ಜಗತ್ತಿಗೆ ತೋರಬೇಕು. ಈ ಭಾವನೆಗಳು ದೊಡ್ಡವರಲ್ಲಿ ಮೂಡುವುದರ ಜೊತೆಗೆ ಮಕ್ಕಳ ಮನಸ್ಸಿನಲ್ಲಿಯೂ ಬಿತ್ತಲ್ಪಡಬೇಕು. ಇದು ಭವಿಷ್ಯತ್ತಿನಲ್ಲಿ ಉತ್ತಮ ಪರಿಣಾಮ ಕೊಡುತ್ತದೆ ಎಂದು ಅವರ ಭಾವನೆ. ಅದಷ್ಟೇ ನವದೆಹಲಿಯಲ್ಲೊಮ್ಮೆ ಮಾತನಾಡುತ್ತಾ " ವಿಶ್ವ ಪ್ರೇಮವನ್ನು ಅರಿಯುವಂತೆ ಇಂದಿನ ಚಿಣ್ಣರಿಗೆ ಕಲಿಸಬೇಕು" ಎಂದು ಹೇಳಿದ್ದಾರೆ.

ನೇತಾಜಿಯವರ ಹುಟ್ಟುಹಬ್ಬದಂದು ಅಂಚೆಯ ಇಲಾಖೆಯು ನೇತಾಜಿಯ ಜ್ಞಾಪಕಾರ್ಥವಾಗಿ ಅಂಚೆ ಚೀಟಿಯನ್ನು ಹೊರತಂದಿತು. ಆ ಸಂದರ್ಭದಲ್ಲಿ ರಾಧಾಕೃಷ್ಣರು " ನಾವು ಜಾತೀಯತೆಯನ್ನು ಬಿಡುವುದಾದರೆ, ಅದೇ ನೇತಾಜಿಯವರಿಗೆ ನಾವು ಕೊಡುವ ಕಾಣಿಕೆಯಾಗುತ್ತದೆ" ಎಂದು ಹೇಳಿದ್ದಾರೆ.

ದೇಶದಲ್ಲಿ ಮೂರು ಯೋಜನೆಗಳು ಕಳೆದಿವೆ. ಅನೇಕ ಅಣೆಕಟ್ಟುಗಳಾಗಿವೆ. ಬೆಟ್ಟಗುಡ್ಡಗಳೆಲ್ಲವೂ ನೀರಾವರಿಗಳೇ ! ಕೈಗಾರಿಕೆಗಳಂತೂ ದಿನದಿನಕ್ಕೆ ಹೆಚ್ಚುತ್ತಿವೆ. ಆದರೂ ಜನಜೀವನಕ್ಕೆ ಅತ್ಯಗತ್ಯವಾಗಿ ಬೇಕಾದ ಪದಾರ್ಥಗಳ ಬೆಲೆಯು ತಾನೇ ತಾನಾಗಿ ದಿನದಿನಕ್ಕೆ ಏರುತ್ತಿದೆ. ಇದರಿಂದ ಜೀವನದ ಮಟ್ಟವು ಕುಗ್ಗುತ್ತಿದೆ. ಇದಕ್ಕೆ ಕಾರಣವನ್ನು ಸರ್ವಪಳ್ಳಿಯವರು ಆಲೋಚಿಸಿದ್ದಾರೆ. ಇತ್ತೀಚೆಗೆ ದೆಹಲಿಯಲ್ಲಿ ವಿಜ್ಞಾನ ಮತ್ತು ರಾಷ್ಟ್ರ ಎಂಬ ವಿಷಯವಾಗಿ ಮಾತನಾಡುತ್ತಾ " ನಮ್ಮ ದೇಶದಲ್ಲಿ ಸಾಕಷ್ಟು ಆಹಾರ ಧಾನ್ಯಗಳಿವೆ. ಆದರೂ ಬೆಲೆಗಳು ಹೆಚ್ಚುತ್ತಿವೆ. ಇದಕ್ಕೆ ಕೆಲವು ಸಮಾಜ ಘಾತುಕರು ಸರಿಯಾದ ಸ್ಥಾನಗಳಲ್ಲಿ ಸೇರಿಕೊಂಡಿರುವುದೇ ಕಾರಣ

ಅವರು ಸ್ವಾರ್ಥಕ್ಕಾಗಿ ಎಲ್ಲವನ್ನೂ ಹದಗೆಡಿಸುತ್ತಿದ್ದಾರೆ. ಆಹಾರ ಧಾನ್ಯ ಗಳನ್ನು ಸರಿಯಾಗಿ ಸರಬರಾಜು ಮಾಡುತ್ತಿಲ್ಲ. ಅಂತಹವರನ್ನು ಗೊತ್ತು ಹಚ್ಚುವುದು ಸರ್ಕಾರದ ಮೊದಲ ಕರ್ತವ್ಯ. ಪ್ರತಿ ವ್ಯಕ್ತಿಗೂ ಆಹಾರ ಧಾನ್ಯಗಳು ಸುಲಭವಾಗಿ ದೊರೆಯುವಂತೆ ಮಾಡುವುದು ಸರ್ಕಾರದವರ ಎರಡನೆಯ ಕರ್ತವ್ಯ" ಎಂದಿದ್ದಾರೆ.

## ಅವರ ಪ್ರವಾಸಗಳಲ್ಲಿ ತೋರುವ ವೈಶಿಷ್ಟ್ಯ

ಸರ್ವಪಳ್ಳಿಯವರು ಯಾವ ದೇಶಕ್ಕೆ ಹೋದರೂ, ಆ ದೇಶೀಯರ ಒಲವನ್ನು ಗಳಿಸಿಕೊಳ್ಳಬಲ್ಲವರಾಗಿದ್ದಾರೆ. ತಾವು ಹೋಗುವ ದೇಶ ಮತ್ತು ನಗರಗಳ ಪೂರ್ವೇತಿಹಾಸವನ್ನೂ, ಅಲ್ಲಿನ ಜನ ಜೀವನವನ್ನೂ ಚೆನ್ನಾಗಿ ತಿಳಿದು ಅಲ್ಲಿರುವ ಉತ್ತಮತೆಗಳನ್ನು ಅಲ್ಲಿನ ಜನತೆಗೆ ದರ್ಪಣದಂತೆ ಪ್ರತಿಬಿಂಬಿಸುವರು. ಆ ದೇಶದಲ್ಲಿ ಏನಾದರೂ ಅವ್ಯವಹಾರಿಕ ವಿಷಯಗಳಿದ್ದರೆ ಕಂಡೂ ಕಾಣದಂತೆ ಬರುವ ಸ್ವಭಾವದವರಲ್ಲ. ಆ ದೇಶದ ಪೂರ್ವಕವಿಗಳ, ಪ್ರವಾದಿಗಳ, ಅಥವಾ ಧರ್ಮಗ್ರಂಥಗಳ ಆಧಾರವನ್ನು ತೋರಿ ಪ್ರತಿಭಟಿಸಿ ಸಮರ್ಥಿಸುವರು. ಪ್ರತಿಯೊಂದು ದೇಶದವರಿಗೂ ಅವರವರ ಪ್ರವಾದಿಗಳಲ್ಲಿ, ಗುರುಗಳಲ್ಲಿ ಮತ್ತು ಧರ್ಮಗ್ರಂಥಗಳಲ್ಲಿ ಬಹಳ ಶ್ರದ್ಧೆ, ಭಕ್ತಿ, ಗೌರವ ಮತ್ತು ಆಸಕ್ತಿಗಳಿರುತ್ತವೆ. ಅವುಗಳಲ್ಲಿನ ವಿಷಯಗಳನ್ನು ಪರದೇಶಿಯರು ಹೊಗಳಿದಾಗ ಹಿಗ್ಗುತ್ತಾರೆ. ಆದುದರಿಂದಲೇ ರಾಧಾಕೃಷ್ಣನ್ನರ ಮಾತಿಗೆ ಮಾರುಹೋಗುತ್ತಾರೆ ಇವರ ಪ್ರತಿಭೆ ಹಾಗೂ ವಿಶಾಲಭಾವನೆಗೆ ಗೌರವವನ್ನು ನೀಡುತ್ತಾರೆ.

ಉದಾಹರಣೆಗೆ ಕೆಲವು ಸಂದರ್ಭಗಳನ್ನು ತಿಳಿಯಬಹುದು. ಈಜಿಪ್ಟಿನಲ್ಲಿ ಅನೇಕ ಸಾವಿರ ವರ್ಷಗಳಿಂದ ಆ ದೇಶವು ನಾಗರಿಕತೆಯನ್ನು ಹೊಂದಿದೆ. ಇಲ್ಲಿನ ಪಿರಿಮಿಡ್ಸ್‌ಗಳು ಲೋಕಪ್ರಸಿದ್ಧವಾದುವುಗಳು. ಆ ದೇಶವನ್ನು ಪರ್ಶಿಯನ್ನರು, ಗ್ರೀಕರು, ಮ್ಯಾಸ್ಡೋನಿಯನ್ನರು ಮತ್ತು ರೋಮನ್ನರು ಆಳಿದ್ದಾರೆ. ಕ್ರೈಸ್ತ, ರೋಮ್, ಇಸ್ಲಾಮ್ ಪರ್ಷಿಯನ್ ಮುಂತಾದ ಧರ್ಮಗಳೆಲ್ಲವೂ ಈ ದೇಶದ ಮೇಲೆ ಪ್ರಭಾವ ಬೀರಿವೆ. ಇತ್ತೀಚೆಗೆ ಸ್ವತಂತ್ರಗೊಂಡಿದೆ. ಸ್ವತಂತ್ರ ಚಳುವಳಿಯಲ್ಲಿ ಮುಕ್ರಾಮ್, ಅರಾಭಿ, ಜಘಲಾಲ್ ಮುಂತಾದವರು ಸ್ಮರಣೀಯ ವ್ಯಕ್ತಿಗಳು. ಈ ದೇಶವು ಪ್ರಪಂಚದ ಎಲ್ಲಾ ಮಾರ್ಗಗಳಿಗೂ ಕೇಂದ್ರವಾಗಿದೆ. ಭಾರತಕ್ಕೂ ಈಜಿಪ್ಟಿಗೂ ಪರಸ್ಪರ ಪ್ರೇಮವಿದೆ, ಅಭಿಮಾನವಿದೆ ಎಂದು ಹೇಳುವರು.

ಇಂಡೋನೇಷ್ಯಾಕ್ಕೆ ಹೋಗಿದ್ದಾಗ ಅನೇಕ ಶತಮಾನಗಳಿಂದ ಭಾರತಕ್ಕೂ ಇಂಡೋನೇಷ್ಯಾಕ್ಕೂ ಸಂಬಂಧವಿದೆ. ಆದರ್ಶ ಜೀವನದಲ್ಲಿ

ನಮ್ಮೆರಡು ರಾಷ್ಟ್ರಗಳು ಹೋಲುತ್ತವೆ. ಈ ದೇಶದ ಸಂಗೀತ ನೃತ್ಯ ಮತ್ತು ಕಲೆಗಳು ನಮ್ಮ ದೇಶದಲ್ಲಿ ಹರಡಿವೆ. ಇಲ್ಲಿನ ಗರುಡ ಎಂಬ ಪವಿತ್ರವಾದ ಪದವು ನಮ್ಮ ದೇಶದ ವಿಷ್ಣುವಿನ ವಾಹನವಾಗಿದೆ. ಇದರಿಂದ ನಮ್ಮೆರಡು ದೇಶಗಳ ಪೂರ್ವೀಕರ ದೇವತಾ ಭಾವನೆಗಳಲ್ಲಿ ಸಾಮ್ಯವನ್ನು ಊಹಿಸ ಬಹುದು ಎಂದು ಹೇಳುವರು. ಆ ದೇಶದ ಬೋಲೋಬದರ್‌ನಲ್ಲಿರುವ ಬುದ್ಧ ದೇವಾಲಯಕ್ಕೆ ಭೇಟಿಕೊಟ್ಟರು. ಪೂರ್ವೇತಿಹಾಸಗಳನ್ನು ಹೇಳಿ ಈಗ ಈ ದೇವಾಲಯದ ಭವ್ಯತೆಯು ಜಗತ್ತನ್ನೆ ಮರುಳುಗೊಳಿಸುತ್ತಿದೆ. ಇಲ್ಲಿ ಬೌದ್ಧಮತವು ಉತ್ತಮ ಸ್ಥಿತಿಯಲ್ಲಿರುವುದರಿಂದ ನಮ್ಮೆರಡು ರಾಷ್ಟ್ರ ಗಳಿಗೆ ಧಾರ್ಮಿಕ ವಿಷಯದಲ್ಲಿ ಸಂಬಂಧವಿದೆ ಎಂದು ಹೇಳುವರು.

ಚೀಣಾದೇಶಕ್ಕೆ ಹೋದಾಗ—"ನಮ್ಮೆರಡು ರಾಷ್ಟ್ರಗಳ ಸಂಬಂಧವು ಬಹು ಪುರಾತನವಾದುದು ಹಾಗೂ ಗಣನೀಯವಾದುದು. ನಾಗರಿಕತೆ, ಸಾಹಿತ್ಯ ಮತ್ತು ಕಲೆಗಳಲ್ಲಿ ಹೊಂದಾಣಿಕೆಯಿದೆ. ಪ್ರಜಾಸಂಖ್ಯೆಯ ಸಮಸ್ಯೆಯೂ ಸಮಾನವಾದುದೆ. ಇಲ್ಲಿನ ಹ್ಯೂಯನ್‌ತ್ಸಾಂಗ್, ಮತ್ತು ಫಾಹಿಯನ್‌ರು ಪುರಾತನ ಕಾಲದಲ್ಲಿಯೇ ನಮ್ಮ ದೇಶಕ್ಕೆ ಬಂದು ಬಂಧುತ್ವದ ಅಡಿಪಾಯವನ್ನು ಹಾಕಿದ್ದಾರೆ. ಬೌದ್ಧಧರ್ಮವು ನಮ್ಮ ದೇಶದಲ್ಲಿ ಹುಟ್ಟಿತು. ಆದರೆ, ಅದು ಬೆಳೆದುದು ಈ ದೇಶದಲ್ಲಿ ಆದುದರಿಂದ ನಮ್ಮೆರಡು ರಾಷ್ಟ್ರಗಳ ಮಿತ್ರತ್ವವು ಹೆಚ್ಚಿನದು. ಈ ರಾಷ್ಟ್ರವು ಇತ್ತೀಚಿಗೆ ಮಂಚೂ ಆಳ್ವಿಕೆಯಿಂದ ಸ್ವತಂತ್ರಗೊಂಡಿದೆ. ಚೀಣೀಯರಲ್ಲಿ ಒಂದು ಜೀವಂತ ನೋಟವಿದೆ. ಕಷ್ಟಸಹಿಷ್ಣುತೆಯಿದೆ. ಸದಾ ಉಲ್ಲಾಸದಿಂದಿ ರುವುದು ಮತ್ತು ಒಂದು ಶಿಸ್ತಿನಿಂದಿರುವುದು ಇಲ್ಲಿಯವರ ಹುಟ್ಟುಗುಣ" ಎಂದು ಹೊಗಳಿದ್ದಾರೆ.

ಬಾಲಿಯಲ್ಲಿ ಮಾತನಾಡುತ್ತಾ, "ಸಾಮಾಜಿಕ ವೃತ್ತಿ ಮತ್ತು ಕಾಯಿದೆಗಳಲ್ಲಿ ನಮ್ಮೆರಡು ದೇಶದಲ್ಲಿ ಹೋಲಿಕೆಯಿದೆ. ಈ ದ್ವೀಪವು ಬಹಳ ಕಾಲದವರೆಗೆ ಹಿಂದೂ ಸಂಸ್ಕೃತಿ ಮತ್ತು ಧರ್ಮವನ್ನು ಆಶ್ರಯಿಸಿತ್ತು ಇಂದೂ ಕೂಡ ಹಬ್ಬ ಹರಿದಿನಗಳಲ್ಲಿ ನಮ್ಮಂತೆಯೇ ಆಚರಣೆಯಿದೆ. ಭಾರತೀಯರಂತೆಯೇ ಇಲ್ಲಿನ ಜನತೆಯು ಕರ್ಮಕ್ಕೆ ಮಾನ್ಯತೆಯನ್ನು

ಕೊಡುತ್ತದೆ. ಇಲ್ಲಿನ ಪ್ರತಿಯೊಬ್ಬ ಮಹಿಳೆಯೂ ನೃತ್ಯಗಾತಿ! ಪ್ರತಿಯೊಬ್ಬ ಪುರುಷನೂ ಕಲೆಗಾರ! ಎಂದು ಹೊಗಳುವರು.

ಸಿಲೋನಿನಲ್ಲಿ ಮಾತನಾಡುತ್ತಾ ಪುರಾಣಗಳ ಕಾಲದಿಂದ ಭಾರತಕ್ಕಿರುವ ಸಂಬಂಧವನ್ನು ತಿಳಿಸುವರು. ಪುರಾತನರಾದ ಮಹಿಂದ, ಪರಾಕ್ರಮಬಾಹು ಮುಂತಾದವರು ಬಹಳ ಸುಂದರವಾದ ನಗರಗಳನ್ನೂ ಸ್ತೂಪಗಳನ್ನೂ ಕಟ್ಟಿರುವ ವಿಷಯಗಳನ್ನು ಹೇಳುವರು.

ಜರ್ಮನಿಯ ದೇಶಕ್ಕೆ ಭೇಟಿಕೊಟ್ಟಾಗ ಆ ದೇಶದ ವಿದ್ವಾಂಸರಾದ ಮಾಕ್ಸಮುಲ್ಲರ್, ಡ್ಯೂಸೆನ್, ರುಡಾಲ್ಫ್‌ಓಟೋ ಮುಂತಾದವರು ನಮ್ಮ ದೇಶಕ್ಕೆ ಬಂದು ಸಂಸ್ಕೃತ ಸಾಹಿತ್ಯಕ್ಕೊಂದು ಬೆಳಕನ್ನು ಕೊಟ್ಟಿರುವ ವಿಷಯವನ್ನು ಹೇಳಿ, ಈಗಲೂ ಜರ್ಮನರು ದ್ವಿತೀಯ ಮಹಾಯುದ್ಧದಲ್ಲಿ ಬಳಲಿದ್ದರೂ ಕೂಡ ನಮ್ಮ ಆರ್ಥಿಕ ಸಮಸ್ಯೆಗೆ ಸಹಾನುಭೂತಿಯನ್ನು ತೋರುತ್ತಿದ್ದಾರೆ. ಹೀಗೆ ನಮ್ಮೆರಡು ರಾಷ್ಟ್ರಗಳು ಬಹಳ ಕಾಲದಿಂದ ಮಿತ್ರತ್ವವನ್ನು ಹೊಂದಿವೆ ಎಂದು ಹೇಳುವರು.

ಜಪಾನಿಗೆ ಹೋದಾಗ ಅಲ್ಲಿಯ ಜನತೆಯ ಚುರುಕು ಬುದ್ಧಿಯನ್ನೂ ಅವರಲ್ಲಿರುವ ಉತ್ಸಾಹ ಮತ್ತು ಶ್ರದ್ಧೆಗಳನ್ನೂ ಹೊಗಳುವರು. ರಷ್ಯಾ ಮತ್ತು ಅಮೆರಿಕಾ ಮುಂತಾದ ಮುಂದುವರಿದ ರಾಷ್ಟ್ರಗಳಿಗೆ ಹೋದಾಗ ನಮ್ಮ ದೇಶದ ಸ್ವಾತಂತ್ರ್ಯ ಚಳುವಳಿಯಲ್ಲಿ ಮತ್ತು ಈಗ ಅವುಗಳು ನಮ್ಮ ರಾಷ್ಟ್ರಕ್ಕೆ ನೀಡುತ್ತಿರುವ ಆರ್ಥಿಕ ಮತ್ತು ಯಾಂತ್ರಿಕ ನೆರವುಗಳ ವಿಷಯದಲ್ಲಿ ಶ್ಲಾಘಿಸಿ ಮತ್ತಷ್ಟು ಮೈತ್ರಿಯು ವೃದ್ಧಿಯಾಗುವಂತೆ ವರ್ತಿಸುತ್ತಾರೆ.

ಹೀಗೆ ಸರ್ವಪಳ್ಳಿಯವರು ಯಾವ ದೇಶಕ್ಕೆ ಹೋದರೂ ರಾಜಕೀಯವಾಗಿ ಅಥವಾ ಧಾರ್ಮಿಕವಾಗಿ, ಸಾಮಾಜಿಕವಾಗಿ, ಆರ್ಥಿಕವಾಗಿ ಅಥವಾ ಭೌಗೋಳಿಕವಾಗಿ ಆ ದೇಶಕ್ಕೂ ನಮ್ಮ ದೇಶಕ್ಕೂ ಸಂಬಂಧವನ್ನು ಕಲ್ಪಿಸುತ್ತಾರೆ. ಮಿತ್ರತ್ವವನ್ನು ಬಲಪಡಿಸುತ್ತಾರೆ. ಎಲ್ಲಕ್ಕಿಂತಲೂ ಹೆಚ್ಚಾಗಿ ಇವರು ಹೋದ ಕಡೆಯಲ್ಲೆಲ್ಲಾ ಶಾಂತಿಧೂತರಾಗಿ ವಿಶ್ವಶಾಂತಿಯನ್ನೂ, ಅದಕ್ಕೆ ಅನುಕೂಲವಾದ ಪಂಚಶೀಲಗಳನ್ನೂ ಅನುಸರಿಸುವಂತೆ ಇವರು ಪ್ರೋತ್ಸಾಹಿಸುತ್ತಾರೆ.

**ಪಂಚಶೀಲಗಳು** :—ಪ್ರತಿಯೊಬ್ಬ ಮಾನವನ ಸುಖ ಮತ್ತು ಶಾಂತಿಯಿಂದ ಜಗತ್ತಿನ ಶಾಂತಿಯುಂಟಾಗುತ್ತದೆ. ಆಸೆ ಮತ್ತು ಅತ್ಯಾಸೆಗಳು ಕಲಹಕ್ಕೆ ಮೂಲ. ಒಂದು ದೇಶದ ದುರಾಸೆಯಿಂದ ಮತ್ತೊಂದು ದೇಶಕ್ಕೆ ಹಾನಿ. ಅಷ್ಟೇ ಅಲ್ಲ, ಯುದ್ಧಕ್ಕೆ ಸಿದ್ಧವಾದ ಎರಡು ರಾಷ್ಟ್ರಗಳೂ ವಿನಾಶದ ದಾರಿ ಹಿಡಿಯುತ್ತವೆ. ಇದರ ಪರಿಹಾರದ ಮಂತ್ರವೆಂದರೆ, ಭಾರತದ ಪಂಚಶೀಲಗಳು

ಅದನ್ನು ರಾಧಾಕೃಷ್ಣನ್ನರು ಹೀಗೆ ವಿವರಿಸುವರು. "ಪಂಚಶೀಲವೆಂಬುದು ಹೊಸದಲ್ಲ! ಭಾರತದಲ್ಲಿ 2500 ವರ್ಷಗಳ ಹಿಂದೆ ಮಹಾತ್ಮ ಬುದ್ಧನು ಸಾರಿದ ತತ್ವ. ಪ್ರತಿಯೊಬ್ಬ ಮನುಷ್ಯನೂ ತನ್ನನ್ನು ತಾನು ಮಾರ್ಪಡಿಸಿಕೊಂಡರೆ, ಸಮಾಜವು ತಾನಾಗಿ ಮಾರ್ಪಾಡಾಗುತ್ತದೆ. ಅದನ್ನೇ ಚೀಣಾದ ಕಾನ್‌ಫ್ಯೂಷಿಯಸ್ಸನು ಸಂಸ್ಥಾನಗಳನ್ನು ಮಾರ್ಪಡಿಸುವುದರಿಂದ ಪ್ರಪಂಚವನ್ನು ಮಾರ್ಪಡಿಸಬಹುದು. ಕುಟುಂಬವನ್ನು ಮಾರ್ಪಡಿಸುವುದರಿಂದ ಸಂಸ್ಥಾನವು ಮಾರ್ಪಡುತ್ತದೆ. ನಮ್ಮನ್ನು ನಾವು ಮಾರ್ಪಡಿಸಿಕೊಳ್ಳುವುದರಿಂದ ಕುಟುಂಬವು ಮಾರ್ಪಡುತ್ತದೆ" ಎಂದು ಹೇಳಿದ ಮಾತನ್ನು ಉದಾಹರಿಸುತ್ತಾರೆ.

ಸಾಲಿಸ್‌ಬರಿಯಲ್ಲಿ ಸರ್ವಪಳ್ಳಿಯವರು, ಕಾಮನ್‌ವೆಲ್ತಿನ ಆದರ್ಶಗಳ ವಿಷಯಗಳಲ್ಲಿ ಮಾತನಾಡುತ್ತಾ, ನಮ್ಮ ಭಾರತದ ಪಂಚಶೀಲದ ವಿವರಣೆಯನ್ನು ಕೊಡುತ್ತಾರೆ. ಬುದ್ಧನ ಪಂಚತತ್ವಗಳೇ ಇಂದಿನ ಪಂಚಶೀಲಗಳು.

ಮೊದಲನೆಯದು —ಜನರನ್ನು ಹಿಂಸಿಸಬೇಡ. ಅಹಿಂಸೆಯನ್ನು ಅಭ್ಯಾಸಮಾಡು, ಎಂಬುದು. ಇದು ಪ್ರಜಾಪ್ರಭುತ್ವಕ್ಕೆ ಅನ್ವಯಿಸುತ್ತದೆ. ಶಾಂತಿ ಮತ್ತು ಅಹಿಂಸೆಯನ್ನು ಸಾರುತ್ತದೆ.

ಎರಡನೆಯದು —ಜಿಪುಣತನ ಮಾಡಬೇಡ. ಇದು ವೈಯುಕ್ತಿಕವಾಗಿ ಮತ್ತು ಸಾಮೂಹಿಕವಾಗಿ ಅನ್ವಯಿಸುತ್ತದೆ. ಇದರಿಂದ ಸ್ವಾರ್ಥವು ಕೂಡದೆಂಬ ಭಾವನೆಯು ಬರುತ್ತದೆ. ಪರರ ಸ್ವತ್ತಿಗೆ ಆಶಿಸಬಾರದು.

ಮೂರನೆಯದು —ಆತ್ಮ ಸಂಯಮವನ್ನು ಬೆಳಸಿಕೊ. ನಮ್ಮನ್ನು ನಾವು ಆಳಲಾರದಿದ್ದರೆ ಪರರನ್ನು ಆಳಲಾರೆವು. ನಮಗೆ ಭಯವಿದ್ದರೆ

ಜೆಕೊಸ್ಲೋವಾಕಿಯಾ ಮುಖ್ಯಮಂತ್ರಿಯೊಡನೆ ಪ್ರೇಗ್



ಸಾಹಿತ್ಯ ಅಕಾಡಮಿ ಉದ್ಘಾಟನೆ 1954

ಕೋಪವಿರುತ್ತದೆ. ಕೋಪವು ನಮ್ಮನ್ನು ಭೂತೋನ್ಮಾದಕ್ಕೊಯ್ಯುತ್ತದೆ. ಭೂತೋನ್ಮಾದವು ನಮ್ಮಿಂದ ಎಲ್ಲಾ ಹೀನ ಕಾರ್ಯಗಳನ್ನು ಮಾಡಿಸು ತ್ತದೆ. ಇದರಿಂದ ಪಾರಾಗಬೇಕಾದರೆ ಆತ್ಮಸಂಯಮವು ಬೇಕು. ನಮ್ಮ ಮನಸ್ಸಿನ ಹೀನ ವಿಕಾರಗಳನ್ನು ತಡೆಗಟ್ಟಿ ಉನ್ನತ ಮಟ್ಟಕ್ಕೇರಬೇಕು. ಎಲ್ಲಾ ಮೋಹಗಳನ್ನೂ ದೂರಮಾಡಬೇಕು. ಚಿತ್ತ ಸ್ಥೈರ್ಯವನ್ನು ಬೆಳಸಿಕೊಳ್ಳಬೇಕು. ಹೀಗೆ ಮಾಡಲು ಆತ್ಮಸಂಯಮವನ್ನು ಅಭ್ಯಾಸ ಮಾಡಿಕೊಳ್ಳಬೇಕು.

ನಾಲ್ಕನೆಯದು—ಅಸತ್ಯವನ್ನು ನುಡಿಯಬೇಡ ಹೆದರಿಕೆಗಾಗಲೀ, ಪ್ರಬಲ ಶಕ್ತಿಗಾಗಲೀ, ನಿರ್ಧಾರಕ್ಕಾಗಲೀ, ಸತ್ಯದಿಂದ ದೂರವಾಗಬೇಡ. ಆತ್ಮ ಸಮ್ಮತಿಯಿಂದ ಬಾಳಲು ಪ್ರಯತ್ನಿಸು. ಅಸತ್ಯವನ್ನೆಂದೂ ನುಡಿಯ ಬೇಡ.

ಐದನೆಯದು—ಮತ್ತನ್ನುಂಟುಮಾಡುವ ಪದಾರ್ಥಗಳಿಂದ ದೂರ ವಿರು. ಚಳುವಳಿ ಎಂಬುದೊಂದು ಅಮಲು. ರಾಜನಿಷ್ಠೆಯ ಗುಂಪಿನ ಹೆಸರಿನಲ್ಲಿ ಜನರು ತಮ್ಮ ತಲೆಗಳನ್ನೇ ಕಳೆದುಕೊಳ್ಳುತ್ತಾರೆ.

ಈ ಐದು ತತ್ವಗಳನ್ನು ಬುದ್ಧನು ವೈಯಕ್ತಿಕವಾಗಿ ಪ್ರತಿಯೊಬ್ಬ ನನ್ನೂ ಮಾರ್ಪಡಿಸಲು ಪ್ರಯೋಗಿಸಿದನು. ಸ್ವಲ್ಪ ಹೆಚ್ಚು ಕಡಿಮೆ ಪ್ಲೇಟೋವಿನ ಅಭಿಪ್ರಾಯವೂ ಇದನ್ನೇ ಹೋಲುತ್ತದೆ. 'ಪ್ರಪಂಚವು ದಿನದಿನಕ್ಕೆ ವಿಜ್ಞಾನದಿಂದ ಕಿರಿದಾಗುತ್ತಿದೆ. ನಾವೀಗ ನಮ್ಮ ಹೃದಯ ಗಳನ್ನೂ ಮತ್ತು ಮನಸ್ಸಿನ ಭಾವನೆಗಳನ್ನೂ ವಿಶಾಲಗೊಳಿಸಿಕೊಳ್ಳ ಬೇಕಾಗಿದೆ.

ವಿಶ್ವದ ಶಾಂತಿಗಾಗಿ ಭಾರತವು ಈ ಪಂಚಶೀಲಗಳನ್ನೇ ಅವಲಂಬಿ ಸಿದೆ. ಇತರ ರಾಷ್ಟ್ರಗಳೂ ಇದನ್ನೇ ಅನುಸರಿಸುವಂತೆ ತೋರುತ್ತಿದೆ. ನಮ್ಮ ರಾಷ್ಟ್ರಧ್ವಜದ ಸಂಕೇತವೂ ಕೂಡ ಇದನ್ನೇ ಸಾರುತ್ತಿದೆ ಎಂದು ಹೇಳಿ, ರಾಷ್ಟ್ರಧ್ವಜದ ಸಂಕೇತಗಳನ್ನು ತಮ್ಮದೇ ಆದ ರೀತಿಯಲ್ಲಿ ವಿವರಿಸುವರು.

ರಾಷ್ಟ್ರಧ್ವಜ—ಭಾರತಧ್ವಜದ ಮಧ್ಯದಲ್ಲಿ ತಿರುಗುತ್ತಿರುವ ಚಕ್ರವು ಕಾಲಸೂಚಕವಾಗಿದೆ. ಪ್ರಪಂಚದ ಎಲ್ಲಾ ವಸ್ತುಗಳೂ ಚಲನೆಯನ್ನು

ಹೊಂದುತ್ತಿರುತ್ತವೆ. ಆ ಚಕ್ರಕ್ಕೆ ಹಾಕಿರುವ ಗೆರೆಯೂ ನೀಲಿಬಣ್ಣದ್ದು. ಆಕಾಶ ಮತ್ತು ಸಮುದ್ರಗಳೆರಡೂ ನೀಲಿಬಣ್ಣದವುಗಳು. ಅವೆರಡೂ ಪರಸ್ಪರ ನೀಲಿಬಣ್ಣಗಳನ್ನು ವಿನಿಮಯ ಮಾಡಿಕೊಂಡಿವೆ. ಜನ ಜೀವನ ದಲ್ಲೂ ಪರಸ್ಪರ ವಿನಿಮಯವಿರದಿದ್ದರೆ, ಬಾಳ್ಮೆಯು ಕಷ್ಟವಾದೀತು ಎಂಬು ದನ್ನು ಸೂಚಿಸುತ್ತದೆ. ಅದರ ಮಧ್ಯದಲ್ಲಿರುವ ಸಣ್ಣ ಚಕ್ರವು ವಿಶ್ವದ ಅನುರಾಗದ ಸಂಕೇತವಾಗಿದೆ. ಅದು ಕಾಲವನ್ನು ತಡೆಯಲಾರದು; ಕಾಲವೂ ನಿಲ್ಲಲಾರದು ಎಂದು ಸೂಚಿಸುತ್ತದೆ.

ಈ ಚಕ್ರವು ವಿಶಾಲವಾದ ಬಿಳಿಯಬಣ್ಣದ ಮೇಲಿದೆ. ಬಿಳಿಯ ಬಣ್ಣವು ಯಾವ ಒಂದು ಪಂಥವನ್ನಾಗಲೀ ಒಂದು ಸಿದ್ಧಾಂತವನ್ನಾಗಲೀ ಸಮರ್ಥಿಸುವುದಿಲ್ಲ. ಇಷ್ಟಲ್ಲದೆ ಆ ಬೆಳಕು ಸ್ವಚ್ಛತೆಯನ್ನು ತಿಳಿಯುತ್ತದೆ. ನಿಮ್ಮ ದಿನ ನಿತ್ಯದ ಆಗುಹೋಗುಗಳಲ್ಲಿ ಕಲಹ ಮಾಡಬೇಡಿ. ಸತ್ಯಕ್ಕೆ ಮನ್ನಣೆಯನ್ನು ಕೊಡಿ. ಸತ್ಯವೇ ಸ್ಥಿರವಾದ ಜಯವನ್ನು ನೀಡತಕ್ಕದ್ದು ಎಂದು ಬೋಧಿಸುತ್ತಿದೆ. ಆದುದರಿಂದ ಬಣ್ಣರಹಿತವಾದ ಬಿಳಿಯಬಣ್ಣವು ರಾಗರಹಿತವಾದ ಸತ್ಯದ ಸಂಕೇತವಾಗಿದೆ.

ಧ್ವಜದ ಮೇಲುಗಡೆ ಕಿತ್ತಳೆಯ ಹಣ್ಣಿನ ಬಣ್ಣವಿದೆ. ಇತರ ಸಂಕೇತವು ಮಾನವನ ಬಾಳು ನೀರಸವಾಗಿರಬಾರದು. ಹೃದಯದ ಭಾವನೆಯು ಸಿಹಿಯಾಗಿರಬೇಕು. ಕಷ್ಟದಿಂದ, ಸಂಯಮದಿಂದ, ಶಿಸ್ತಿನಿಂದ, ನಾವು ಈ ಗುರಿಯನ್ನು ಸೇರಬೇಕು. ಭವಿಷ್ಯತ್ತಿನಲ್ಲಿ ಆನಂದವನ್ನು ನಾವು ಕಲ್ಪಿಸಿ ಕೊಳ್ಳದಿದ್ದರೆ ನಮ್ಮ ಬಾಳು ಕಷ್ಟವಾದೀತು! ಎಂಬುದನ್ನು ಸೂಚಿಸುತ್ತದೆ.

ತಳಗಡೆಯ ಹಸಿರುಬಣ್ಣವು ಭೂಮಿಯಲ್ಲಿ ಹಸಿರು ಸ್ವರ್ಗವನ್ನು ಕಟ್ಟುವ ಉದ್ದೇಶವುಳ್ಳದ್ದಾಗಿದೆ. ನಮ್ಮ ದೇಶವು ವ್ಯವಸಾಯದ ದೇಶ. ನಮ್ಮ ನಮ್ಮ ಕಾರ್ಯತತ್ಪರತೆಯ ಫಲವೆಂದರೆ ಸಮೃದ್ಧಿ ಎಂಬುದರ ಸಂಕೇತವಾಗಿದೆ.

ಒಟ್ಟಿನಲ್ಲಿ ನಮ್ಮ ಧ್ವಜವು, ಪ್ರಪಂಚವು ತಿರುಗುತ್ತಿರುವ ಪ್ರವೃತ್ತಿ ಯುಳ್ಳದ್ದು. ಅನಾದ್ಯನಂತ ಹಿನ್ನಲೆಯುಳ್ಳದ್ದು, ಮನುಷ್ಯನು ಶಿಸ್ತಿನಿಂದ ಸತ್ಯವನ್ನು ತಲುಪಬಲ್ಲನು, ಇದರಿಂದ ಪ್ರಪಂಚವನ್ನು ಒಂದು ಸುಂದರ ವಾದ ವನವನ್ನಾಗಿ ಮಾಡಬಹುದೆಂಬುದರ ವಿಶಾಲಾರ್ಥವುಳ್ಳ ಸಂಕೇತ

ವಾಗಿದೆ. ಈ ಭಾವನೆಯು ಸತ್ಯವಾದುದು. ವಿಶ್ವಸಮ್ಮತವೂ ಹೌದು. ಇದರಲ್ಲಿ ದೇಶ, ಕಾಲ, ಜಾತಿ, ಅಥವಾ ಬಣ್ಣಗಳ ಭಿನ್ನಭಾವನೆಯಿಲ್ಲ. ಪ್ರಪಂಚದ ಪ್ರತಿಯೊಬ್ಬ ಪ್ರಜೆಯೂ ಇದರಂತೆ ನಡೆದರೆ, ವಿಶ್ವಶಾಂತಿಯು ದೊರೆಯುವುದರಲ್ಲಿ ಅನುಮಾನವಿಲ್ಲ.

ಮತ್ತೊಂದು ಕಡೆ ಮಾತನಾಡುತ್ತಾ ರಾಷ್ಟ್ರದ ಸಂಕೇತವಾದ ಮೂರು ಸಿಂಹಗಳ ಗುರುತನ್ನು ವಿವರಿಸಿದ್ದಾರೆ. "ಸಿಂಹವು ಮೃಗರಾಜ. ಸಿಂಹಕ್ಕಿಂತಲೂ ಆನೆಯು ದೊಡ್ಡ ಪ್ರಾಣಿ. ಆದರೂ ಸಿಂಹದ ಠೀವಿಯು ಆನೆಗಿಲ್ಲ. ನಡತೆಯಲ್ಲಿ ಗಂಭೀರವಾದುದು. ಅಷ್ಟೇ ಬಲಯುತವಾದುದು. ಆದುದರಿಂದ ಸಿಂಹವು ನಮ್ಮ ರಾಷ್ಟ್ರದ ಘನತೆ, ಠೀವಿ, ಹಾಗೂ ಬಲದ ಸೂಚಕವಾಗಿದೆ" ಎಂದು ತಿಳಿಸುತ್ತಾರೆ.

## ಆರ್ಡರ್ ಆಫ್ ಮೆರಿಟ್ ಪ್ರಶಸ್ತಿ

ಬ್ರಿಟಿಷ್ ಚಕ್ರಾಧಿಪತ್ಯಕ್ಕೆ ಒಳಪಟ್ಟಿದ್ದು ಅನಂತರ ಸ್ವತಂತ್ರಗೊಂಡ ರಾಷ್ಟ್ರಗಳೆಲ್ಲವೂ ಒಂದು ಸಂಘವನ್ನು ಮಾಡಿಕೊಂಡಿವೆ. ಅದೇ ಕಾಮನ್ ವೆಲ್ತ್ ಸಂಘವೆಂಬುದು. ಇದರಲ್ಲಿ ಕೆನಡ, ಆಸ್ಟ್ರೇಲಿಯಾ, ನ್ಯೂಜಿಲೆಂಡ್, ಐರ್ಲೆಂಡ್, ಇಂಡಿಯಾ, ಪಾಕಿಸ್ಥಾನ, ಸಿಲೋನ್, ಬರ್ಮ, ಘಾನ, ಮತ್ತು ಮಲಯಾ ದೇಶಗಳು ಸದಸ್ಯತ್ವವನ್ನು ಪಡೆದಿರುವುದಲ್ಲದೆ, ಬ್ರಿಟಿಷ್ ರಾಜ್ಯವೂ ಕೂಡ ಅದರಲ್ಲಿ ಸೇರಿದೆ. ಈ ರಾಷ್ಟ್ರಗಳೆಲ್ಲವೂ ಸೋದರ ರಾಷ್ಟ್ರಗಳಾಗಿ ವರ್ತಿಸಬೇಕೆಂಬುದೇ ಈ ಸಂಘದ ಉದ್ದೇಶವಾಗಿದೆ. ಪ್ರತಿ ವರ್ಷವೂ ಈ ರಾಷ್ಟ್ರಗಳ ಪ್ರಧಾನಿಗಳು ಸೇರಿ ಈ ಸಂಘದ ಕಾರ್ಯ ಕಲಾಪಗಳನ್ನು ನಿರ್ವಹಿಸುತ್ತಾರೆ.

ರಾಧಾಕೃಷ್ಣನ್ನರು ಕಾಮನ್‌ವೆಲ್ತಿನ ವಿಷಯವಾಗಿ ಅನೇಕ ವೇಳೆ ಮಾತನಾಡಿದ್ದಾರೆ. ಉಪರಾಷ್ಟ್ರಪತಿಯಾದಮೇಲೆ ಆ ಸಂಘದಲ್ಲಿ ಭಾಗ ವಹಿಸಿಯೂ ಇದ್ದಾರೆ. ವಿಶ್ವದ ಶಾಂತಿಯನ್ನು ಐಕ್ಯಮತ್ಯವನ್ನೂ ಕುರಿತು ಮಾತನಾಡಿದ್ದಾರೆ. ಬ್ರಿಟಿಷ್ ಚಕ್ರಾಧಿಪತ್ಯದಲ್ಲಿಯೇ ಅತ್ಯುನ್ನತ ಗೌರವ ವಾದ "ಆರ್ಡರ್ ಆಫ್ ಮೆರಿಟ್" ಎಂಬ ಮಹಾ ಪ್ರಶಸ್ತಿಯು ರಾಧಾ ಕೃಷ್ಣನ್ನರಿಗೆ ದೊರೆಯಿತು. ಆ ಗೌರವವು ಇಡೀ ಪ್ರಪಂಚದಲ್ಲಿ ಮೂವರಿಗೆ

ಮಾತ್ರ ಲಭಿಸಿದೆ. ಅದರಲ್ಲಿ ಮೊದಲನೆಯವರ ಜನರಲ್ ಡ್ವೈಟ್ ಐಸೆನ್ ಹೋವರ್. ಎರಡನೆಯದರು ಡಾ|| ಆಲ್ಬರ್ಟ್ ಸ್ಕಿಟ್ಸರ್, ಮೂರನೆಯವರೇ ಡಾ|| ರಾಧಾಕೃಷ್ಣನ್ನರು.

ರಾಧಾಕೃಷ್ಣನ್ನರ ಬಹುಮುಖ ಪ್ರತಿಭೆ, ಅದ್ವಿತೀಯ ಜ್ಞಾನ, ಮತ್ತು ಇವರು ಮಾಡಿರುವ ವಿಶ್ವಧರ್ಮದ ಪ್ರತಿಪಾದನೆಯ ಫಲವಾಗಿ, ಎಲಿಜಿಬೆತ್ ರಾಣಿಯವರೇ ಸ್ವಹಸ್ತದಿಂದ ಈ ಗೌರವವನ್ನು ದಯಪಾಲಿಸಿದರು. ಹೀಗೆ ಚಕ್ರವರ್ತಿನಿಯು ಸ್ವತಃ ಬಂದು ಬಹುಮಾನಿಸಿದುದು ಇದೇ ಮೊಟ್ಟ ಮೊದಲನೆಯ ಸಾರಿ. ಇದನ್ನು ಕಂಡ ಆಂಗ್ಲರಿಗೆ ಬಹಳ ಆಶ್ಚರಿಯಾಯಿತು.

---

# ಇವರ ರಾಜಕೀಯ ತತ್ವ

ವೇದಾಂತಿಯಾದವನು ಆಚಾರ್ಯನಾಗಿ ಕೇವಲ ಧರ್ಮಗಳನ್ನು ಉಪದೇಶ ಮಾಡಿಕೊಂಡಿರಬೇಕು. ಮತ್ತಾವ ಹವ್ಯಾಸಕ್ಕೂ ಹೋಗ ಬಾರದು ಎಂದು ಕೆಲವರ ಭಾವನೆ. ಆದರೆ, ಜೀವನ, ಸಂಸ್ಕೃತಿ, ನಾಗ ರೀಕತೆ, ಧರ್ಮ ಮುಂತಾದವನ್ನೊಳಗೊಂಡಿರುವ ಒಂದು ಸಮಾಜದ ಸೂತ್ರವೇ ಆಡಳಿತ. ಆದುದರಿಂದಲೇ ನಮ್ಮ ಪುರಾಣಗಳಲ್ಲಿ, ನಾರದ, ವಶಿಷ್ಠ, ಗೌತಮ, ಮುಂತಾದ ಋಷಿಗಳು, ಸಿದ್ಧಪುರುಷರು ಮತ್ತು ತಾಪಸಿಗಳು ರಾಜಕೀಯದಲ್ಲಿ ತಲೆಹಾಕಿರುವುದನ್ನು ಕಾಣುತ್ತೇವೆ. ಅದನ್ನನುಸರಿಸಿಯೇ ಕೌಟಿಲ್ಯನು ಗುಪ್ತ ಸಾಮ್ರಾಜ್ಯ ಸ್ಥಾಪನೆಗೆ ಕಾರಣ ನಾಗುತ್ತಾನೆ. ವಿದ್ಯಾರಣ್ಯರು ವಿಜಯನಗರ ಸಾಮ್ರಾಜ್ಯಕ್ಕೆ ಬೆಂಬಲ ವಾದರು. ಹೀಗೆಯೇ ಗಂಗರಾಜ್ಯ, ಹೊಯ್ಸಳ ರಾಜ್ಯಗಳು ಸನ್ಯಾಸಿಗಳ ರಾಜಕಾರ್ಯ ನಿಪುಣತೆಯಿಂದ ಸ್ಥಾಪಿತವಾಗಿ ಅಭ್ಯುದಯ ಸ್ಥಿತಿಯನ್ನು ಹೊಂದಿರುವುದನ್ನು ನಾವು ಇತಿಹಾಸದಲ್ಲಿ ಕಾಣುತ್ತೇವೆ

ಅದೇ ಗುಣವನ್ನು ನಾವು ಸರ್ವಗಳ್ಳಿಯವರಲ್ಲಿ ಕಾಣಬಹುದು. ಇವರ ಗ್ರಂಥಗಳಲ್ಲಿ ನಾವು ದಾರ್ಶನಿಕ ವಿಷಯವನ್ನು ಮಾತ್ರ ಕಾಣು ವುದಿಲ್ಲ ರಾಜಕೀಯ ತತ್ವಗಳನ್ನು ನೋಡುತ್ತೇವೆ. ರಾಜಕೀಯವು ಬದಲಾದಂತೆ ಧರ್ಮವೂ ಬದಲಾಗುತ್ತಿರುತ್ತದೆಂದು ಇವರ ಭಾವನೆ.

ಕ್ರಿಸ್ತಪೂರ್ವದಿಂದ ಇಂದಿನವರೆಗಿನ ಇತಿಹಾಸವನ್ನೆಲ್ಲಾ ಅಧ್ಯಯನ ಮಾಡಿದ್ದಾರೆ. "ಎಲ್ಲಿ ಸ್ವಾತಂತ್ರ್ಯವಿಲ್ಲವೋ ಅಲ್ಲಿ ಚರಿತ್ರೆಯ ಕೊಲೆಯಾ ಗುತ್ತದೆ." ಎಂದು ಇವರು ಹೇಳುತ್ತಾರೆ. ಚರಿತ್ರೆಗೆ ಆಧಾರವಾಗಿರುವ ಶಾಸನಗಳೂ, ಗ್ರಂಥಗಳೂ, ಆಯಾಕಾಲದ ನಿಜವಾದ ಸ್ಥಿತಿಯನ್ನು ತಿಳಿಸುವುದಿಲ್ಲ. ಅವೆಲ್ಲವೂ ಆಯಾಕಾಲದ ರಾಜರ ಹಂಗಿನಲ್ಲಿದ್ದ ಕವಿ ಗಳಿಂದ ರಚಿಸಲ್ಪಟ್ಟವುಗಳು. ಆದುದರಿಂದಲೇ "ನಾವು ಚರಿತ್ರೆಯನ್ನು ಬೋಧಿಸಿದರೂ, ನಮಗೆ ಚರಿತ್ರೆಯು ಬೋಧಿಸುವುದಿಲ್ಲ" ಎಂದು ಹೇಳುವರು.

ಮತ್ತೊಂದುಕಡೆ ಮಾತನಾಡುತ್ತಾ ಚರಿತ್ರೆಯು ಅಂತರರಾಷ್ಟ್ರೀಯ ಸಹಕಾರಕ್ಕೆ ಸಹಕಾರಿಯಾದುದು. ಇದು ನಿಜವಾಗಿಯೂ ಎಂದೋ ಸತ್ತು ಹೋದವರ ಕಥೆಯಲ್ಲ. ಬರಿಯ ಯುದ್ಧಗಳ ವರ್ಣನೆಯಲ್ಲ. ಮಾನವನು ಜಗತ್ತಿನಲ್ಲಿ ಶಾಂತಿಯನ್ನು ಜಯಿಸಿದ ವಿವರ! ಜಗತ್ತಿನ ಜನ ಕೋಟಿಗೆ ಸಹೋದರ ಭಾವನೆಯನ್ನು ನೀಡುವ ಚಿಲುಮೆ! ಎಂದಿದ್ದಾರೆ. ಒಟ್ಟಿನಲ್ಲಿ ಹೇಳುವುದಾದರೆ ಪ್ರಪಂಚದ ಆರು ಖಂಡಗಳ ಪ್ರಾಚೀನ ಮತ್ತು ಆಧುನಿಕ ಇತಿಹಾಸವನ್ನು ಸಂಗ್ರಹಿಸಿಕೊಂಡಿದ್ದಾರೆ.

ವ್ಯಾಸನ ಕಾಲದಿಂದ ಇಲ್ಲಿಯತನಕ ಇರುವ ರಾಜಕೀಯ ಗ್ರಂಥಗಳನ್ನು ನೋಡಿದ್ದಾರೆ. ಕೌಟಿಲ್ಯನ ಅರ್ಥಶಾಸ್ತ್ರ, ಅಲೆಕ್ಸಾಂಡರ್, ನೆಪೋಲಿಯನ್, ಸೀಸರ್, ಸಿಸಿರೋ, ವಾಷಿಂಗ್‌ಟನ್, ಲೆನಿನ್ ಮುಂತಾದ ಪುರಾತನರ ಹಾಗೂ ತಮ್ಮ ಸಮಕಾಲೀನರಾದ ಸ್ಟಾಲಿನ್, ಪ್ರೆಸಿಡೆಂಟ್ ರೂಸ್‌ವೆಲ್ಟ್, ಹಿಟ್ಲರ್, ಚರ್ಚಿಲ್, ಅಟ್ಲಿ ಮುಂತಾದವರ ರಾಜಕೀಯವನ್ನು ಅಧ್ಯಯನ ಮಾಡಿದ್ದಾರೆ. ಸ್ವಲ್ಪ ಹೆಚ್ಚು ಕಡಿಮೆ ಪ್ರಪಂಚವನ್ನೇ ಪರ್ಯಟನ ಮಾಡಿ, ನಾನಾ ದೇಶಗಳ ರಾಜಕೀಯ ಸ್ಥಿತಿಗಳನ್ನೂ ನೋಡಿದ್ದಾರೆ. ಇದರಿಂದ ನಮ್ಮ ದೇಶಕ್ಕೆ ಎಂತಹ ಆಡಳಿತ ಬೇಕು ಎಂಬುದನ್ನು ಅವರು ಆಲೋಚಿಸಿದ್ದಾರೆ.

"ಮಾನವನು ರಾಜಕೀಯ ಪ್ರಾಣಿ" ಎಂದು ಹೇಳಿ "ಮಾನವನ ಹೃದಯದಲ್ಲಿ ದ್ವೇಷಭಾವನೆಯು ಬೆಳೆದು, ಅದು ರಾಜಕೀಯದ ಜೀವಾಳವಾಗಿ ಪರಿಣಮಿಸಿದೆ. ಈ ಪ್ರವೃತ್ತಿಯನ್ನು ನಿವಾರಿಸದಿದ್ದರೆ, ಪರರಿಗೂ ನಮ್ಮಂತೆ ಬಾಳಲು ಹಕ್ಕಿದೆ, ಎಂಬ ಮನೋಭಾವನೆಯನ್ನು ರೂಪಿಸಿಕೊಳ್ಳದಿದ್ದರೆ, ನಾವು ಉದ್ದೇಶಿಸಿದ ಗುರಿಯನ್ನು ಮುಟ್ಟಲು ಸಾಧ್ಯವಿಲ್ಲ. ಹಿಟ್ಲರ್ ಮುಂತಾದ ಸರ್ವಾಧಿಕಾರಿಗಳು, ಪ್ರಜೆಗಳ ಕ್ಷೇಮವನ್ನು ಕಡೆಗಣಿಸಿದರು. ಇದರಿಂದ ತಾವು ನಾಶವಾದರೂ ದೇಶವನ್ನು ಗಂಡಾಂತರಕ್ಕೀಡು ಮಾಡಿದರು. ನಮ್ಮ ದೇಶವು ಕೂಡ ಕೆಲವುಕಾಲ ರಾಜರುಗಳ ಸರ್ವಾಧಿಕಾರದಲ್ಲಿ ಬಾಳಿದೆ. ಆದುದರಿಂದ ಸರ್ವಾಧಿಕಾರವು ಒಬ್ಬ ವ್ಯಕ್ತಿಯ ಕೈಯಲ್ಲಿರುವುದು ನಮ್ಮ ದೇಶಕ್ಕೆ ಸಲ್ಲದು" ಎಂದು ಹೇಳಿದ್ದಾರೆ.

ಇನ್ನು ಸಮತಾವಾದವನ್ನು ನೋಡುವುದಾದರೆ, ಅದೇನೋ ಒಳ್ಳೇ

ಯಿದೇ. ಯಾವ ಒಬ್ಬ ವ್ಯಕ್ತಿಗೂ, ಹಣವಾಗಲೀ, ಭೂಮಿಯಾಗಲೀ, ಅಧಿಕಾರವಾಗಲೀ ಅತ್ಯಧಿಕವಾಗಿ ಸೇರುವಂತಿಲ್ಲ, ಎಲ್ಲರೂ ದುಡಿಯು ಬೇಕು. ದುಡಿಯುವನೊಬ್ಬ, ಭೋಗ ಪಡುವವನೊಬ್ಬ ಎಂಬುದಕ್ಕೆ ಅವಕಾಶವಿಲ್ಲ. ಸೋಮಾರಿತನವು ವ್ಯಕ್ತಿಗತವಾಗಿ ಕೆಟ್ಟದ್ದಾದರೂ, ರಾಷ್ಟ್ರಕ್ಕೂ ಮುಳ್ಳಾಗುತ್ತದೆ. ಆದರೆ ಸಮತಾವಾದದಲ್ಲಿ ಎರಡು ಬಗೆ ಯಿದೆ. ಒಂದು ಉಗ್ರಸಮತಾವಾದ ಅದನ್ನು ಕಮ್ಯೂನಿಸಂ ಎಂದು ಕರೆಯುವರು ಮತ್ತೊಂದು ಮಂದ ಸಮತಾವಾದ. ಅದನ್ನು ಸೋಷಿ ಯಾಲಿಸಂ ಎಂದು ಕರೆಯುತ್ತಾರೆ.

ಇವೆರಡರ ಗುರಿಯೂ ಒಂದೇ ಆದರೂ. ಆಚರಣೆಯಲ್ಲಿ ಸ್ವಲ್ಪ ವ್ಯತ್ಯಾಸವಿದೆ. ನಾವು ಸಮಾಜವನ್ನು ಮಾರ್ಪಡಿಸದೆ, ಮಂದಿಯನ್ನು ಮಾರ್ಪಡಿಸಲಾಗದು ಎಂದು ಕಮ್ಯುನಿಸಂ ಹೇಳುತ್ತದೆ. ಮನುಷ್ಯನನ್ನು ಮಾರ್ಪಡಿಸದೆ ಸಮಾಜವನ್ನು ಮಾರ್ಪಡಿಸಲಾಗದು ಎಂದು ಸೋಷಿಲಿಸ ಹೇಳುತ್ತದೆ.

ಕಮ್ಯೂನಿಸ್ಟ ದೇಶಗಳಲ್ಲಿ. ಪ್ರತಿಯೊಬ್ಬನ ಏಳಿಗೆಯ ಸ್ಥಿತಿಯೂ ಸರ್ವರ ಅಭಿವೃದ್ಧಿ ದೇಶದ ಸಂಪತ್ತು ಸರ್ವರಿಗೂ ಸಮನಾಗಿ ಹಂಚಿಕೆ ಯಾಗಬೇಕು. ಅನಾರೋಗ್ಯದ ಶರೀರ ಮತ್ತು ವ್ಯರ್ಥಜೀವನದಿಂದ ಬಡತನವು ಬರುತ್ತದೆ. ಅಸಮಾನ ಸಂಪತ್ತು ಗುಲಾಮಗಿರಿಯ ಚಿಹ್ನೆ. ಅದೊಂದು ಸಾಮಾಜಿಕ ರೋಗ. ರಾಜಕೀಯದಲ್ಲಿ ಹೆಚ್ಚಿನ ಸಿರಿಯು ಶಕ್ತಿಯು ಶಾಂತಿಗೆ ಭಂಗ ತರುತ್ತದೆ.'' ಎಂದು ಕಮ್ಯೂನಿಸಂ ಬಂಡವಾಳ ಶಾಹಿಯನ್ನು ವಿರೋಧಿಸುತ್ತದೆ. ಆದುದರಿಂದಲೇ ಆಸ್ತಿಪಾಸ್ತಿಗಳನ್ನು ಅದರ ಯಜಮಾನನ ಕೋರಿಕೆಯಿಲ್ಲದೆ ಸರ್ಕಾರವು ಆಕ್ರಮಿಸಿಕೊಳ್ಳು ತ್ತದೆ.

ಎಲ್ಲಿ ಬಡತನ, ಸ್ವಾರ್ಥತೆ ಆಡಂಬರ ಜೀವನಗಳು ಅಕ್ಕಪಕ್ಕಗಳಲ್ಲಿ ರುತ್ತವೆಯೊ ಅಲ್ಲಿನ ಸಮಾಜವನ್ನು ಪುನರ್ವ್ಯವಸ್ಥಿತಗೊಳಿಸಲು ಕಮ್ಯೂ ನಿಸ್ಟ ಪದ್ಧತಿಯು ಒಪ್ಪಿಕೊಳ್ಳುತ್ತದೆ. ಇದು ಹೊಟ್ಟೆಗಿಲ್ಲದೆ ಬಳಲುವ ರೈತರನ್ನಾಗಲೀ, ಪ್ರಜೆಗಳ ಸ್ವಾತಂತ್ರ್ಯಕ್ಕೆ ಧಕ್ಕೆ ಬರುವುದನ್ನಾಗಲಿ ಸಹಿಸದು. ಅಲ್ಲಿನ ಯಾವ ಪ್ರಜೆಯೂ ಮತ್ತಾವ ಪಕ್ಷವನ್ನೂ ನಿರೀಕ್ಷಿ

ಸಕೂಡದು. ಪ್ರತಿಯೊಬ್ಬ ಮನುಷ್ಯನೂ ತನ್ನ ಕರ್ತವ್ಯವನ್ನು ತಾನೇ ಮಾಡಬೇಕು. ಆಲಸ್ಯಪಟ್ಟು ಮತ್ತೊಬ್ಬನಿಂದ ಮಾಡಿಸುವಂತಿಲ್ಲ. ಈ ತತ್ವಗಳನ್ನು ಪ್ರಪಂಚದ ಪ್ರತಿಯೊಬ್ಬರೂ ಒಪ್ಪುತ್ತಾರೆ. ಆದರೆ, ಸೋಷಲಿಸ್ಟ್ ಧ್ಯೇಯವು ಈ ಕಾರ್ಯಗಳನ್ನು ಬಲವಂತದಿಂದ ಮಾಡಿಸುವುದಿಲ್ಲ. ನಿಧಾನವಾಗಿ ತನಗೆ ತಾನೇ ಸಮಾಜವು ಮಾರ್ಪಡುವಂತೆ ಪ್ರಯತ್ನಿಸುತ್ತದೆ. ಕಮ್ಯೂನಿಸ್ಟ್ ಧ್ಯೇಯದಲ್ಲಿ ಬಲವಂತವಾಗಿ ಒತ್ತಾಯ ಪೂರ್ವಕವಾಗಿ ಮಾಡಿಸುತ್ತದೆ. ಈ ಒತ್ತಾಯವು ಆಧುನಿಕ ಸಮಾಜದಲ್ಲಿ ಅಸಹ್ಯವಾಗಿ ಕಾಣುತ್ತದೆ. ಬಡತನದಿಂದ ತಾತ್ಕಾಲಿಕವಾಗಿ ಬಳಲುತ್ತಿರುವವರಿಗೆ, ಬಂಡವಾಳಗಾರರ ಕೈಗೆ ಸಿಕ್ಕಿ ತೊಳಲುತ್ತಿರುವವರಿಗೆ ಮಾತ್ರ ಕಮ್ಯೂನಿಸ್ಟ್ ಧ್ಯೇಯವು ಪವಿತ್ರವಾದುದೆಂದು ಕಾಣುತ್ತದೆ.

ಅಹಿಂಸಾ ತತ್ವವುಳ್ಳ ನಮ್ಮ ದೇಶಕ್ಕೆ ಇದು ಒಗ್ಗುವುದಿಲ್ಲ. ಉಪನಿಷತ್ತಿನ ಕಾಲದಿಂದಲೂ, ಭಾರತಕ್ಕೂ ಭಾರತೀಯರ ಮನೋವೃತ್ತಿಗೂ ಪ್ರಜಾಪ್ರಭುತ್ವವು ಸರಿಹೊಂದಿಕೊಂಡಿದೆ. ಈ ಪದ್ಧತಿಯು ಪುರಾತನ ಗ್ರೀಸ್ ದೇಶದಲ್ಲಿಯೂ ಇತ್ತು. ಅಮೇರಿಕಾದೇಶವು ಸ್ವತಂತ್ರಗೊಂಡಾಗ ಇದೇ ಧ್ಯೇಯಕ್ಕೆ ಮನ್ನಣೆಯನ್ನು ಕೊಟ್ಟಿತ್ತು.

ಮಾನವನು ಸ್ವತಂತ್ರ ಕರ್ತನು, ಪ್ರತಿಯೊಬ್ಬನಲ್ಲೂ ಒಂದು ಚೈತನ್ಯ ಕಿಡಿಯಿದೆ. ಆದುದರಿಂದಲೇ ಮಾನವ ಸ್ವಭಾವಕ್ಕೊಂದು ಗೌರವವು ಇದೇ ಪ್ರಜಾಪ್ರಭುತ್ವದ ತಳಹದಿ. ನಮ್ಮ ಭಾರತದಲ್ಲಿ ರಾಜಕಾರ್ಯಾಲೋಚನಾ ಪ್ರಜಾಪ್ರಭುತ್ವವಿದೆ ಅದನ್ನು ಸಮತಾವಾದದ ರೀತಿಯಲ್ಲಿ ಅಳವಡಿಸಿದೆ. ಪ್ರಜಾಪ್ರಭುತ್ವದಲ್ಲಿರುವ ಎರಡು ಮುಖಗಳೆಂದರೆ ಪ್ರತ್ಯೇಕವಾಗಿ ವೈಯಕ್ತಿಕ ಅಂತಸ್ಥನ್ನು ಹೆಚ್ಚಿಸುವುದು ಮತ್ತು ತನ್ಮೂಲಕ ರಾಷ್ಟ್ರದ ಐಕ್ಯಮತ್ಯವನ್ನುಂಟು ಮಾಡುವುದು.

ವೈಯಕ್ತಿಕ ಅಂತಸ್ಥನ್ನು ಹೆಚ್ಚಿಸುವುದೆಂದರೆ, ಪ್ರತಿಯೊಬ್ಬನ ಆರ್ಥಿಕ, ಸಾಮಾಜಿಕ, ಮತ್ತು ಜ್ಞಾನದ ಮಟ್ಟವನ್ನು ಹೆಚ್ಚಿಸುವುದರಿಂದ ಪ್ರತಿಯೊಬ್ಬನೂ ಸುಧಾರಣೆಯನ್ನು ಹೊಂದುತ್ತಾನೆ. ಮನುಷ್ಯನಿಗೆ ಆಹಾರ, ಉಡುಪು ಮತ್ತು ವಸತಿಗಳು ದೊರೆತ ಮೇಲೆ ರಾಜಕೀಯ ಮತ್ತಿತರ ಕಡೆಗೆ ಗಮನ ಕೊಡುತ್ತಾನೆ. 'ಸುಖಕ್ಕಾಗಿ ಮಾನವನು'

ಎಂದೇ ಕೆಲವರ ಭಾವನೆಯಾಗಿದೆ. ಆದುದರಿಂದ ಪ್ರಜಾ ಪ್ರಭುತ್ವದ ಮೊದಲನೆಯ ಕರ್ತವ್ಯವು ಪ್ರತಿಯೊಬ್ಬ ವ್ಯಕ್ತಿಗೂ ಆಹಾರ, ಉಡುಪು ಮತ್ತು ವಸತಿಗಳನ್ನು ಕಲ್ಪಿಸುವುದಾಗಿದೆ.

ಸ್ವಾರ್ಥತೆಯು ಪ್ರತಿಯೊಬ್ಬನಿಗೂ ಬೇಕು. ಆದರೆ ಆ ಸ್ವಾರ್ಥವು ಮತ್ತೊಬ್ಬನ ಸ್ವಾರ್ಥಕ್ಕೆ ಭಂಗತರುವಂತಿರಬಾರದು. ಇದರಿಂದ ಯಜಮಾನ, ಬಡವ, ರೋಗಿ, ಹೆಂಗಸು, ಗಂಡಸು; ಕಾರ್ಮಿಕ ಮತ್ತು ಮಾಲಿಕ ಎಂಬ ಭೇದವಿಲ್ಲ ಸಮಾನವಾದ ಹಕ್ಕೂ ಇರುತ್ತದೆ. ಅಧಿಕಾರ ಲಾಲಸೆಯು ಕೆಲವರಲ್ಲಿದೆ. ಆದರೆ, ಅದೂ ಕೂಡ ಇತ್ತೀಚೆಗೆ ಬದಲಾವಣೆಯನ್ನು ಹೊಂದುತ್ತಿದೆ.

‘ಕೆಲವರು ಮಾತುಮಾತಿಗೂ ಕ್ರಾಂತಿ! ಕ್ರಾಂತಿ! ಎನ್ನುತ್ತಾರೆ. ಬರಿಯ ಮಾತಿನಲ್ಲಿ ಕ್ರಾಂತಿ ಎಂದರೆ ಸಾಲದು. ಕ್ರಾಂತಿ ಎಂಬುದು ಗಾಳಿಯಲ್ಲಿಲ್ಲ. ಮನುಷ್ಯನ ಹೃದಯದಲ್ಲಿದೆ. ನಾವು ಮತ್ತೊಬ್ಬರಿಗೆ ಗೌರವವನ್ನು ಪಡೆಯ ಬೇಕಾದರೆ, ನಮ್ಮನ್ನು ನಾವು ಪ್ರೀತಿಸುವಂತೆಯೇ ಪರರನ್ನು ಅದಕ್ಕಿಂತ ಹೆಚ್ಚಾಗಿ ಪ್ರೀತಿಸಬೇಕು. ಅಂದರೆ ಪ್ರಜಾಪ್ರಭುತ್ವದ ಗುರಿಯು ಪ್ರತಿಯೊಬ್ಬರನ್ನೂ ಗೌರವವಂತರನ್ನಾಗಿ ಮಾಡುವುದಾಗಿದೆ. ಜಗತ್ತಿನ ಏಳಿಗೆಗಾಗಿ ಬರಿಯ ವಾದ ವಿವಾದಗಳನ್ನು ಮಾಡಲು ಹೋಗುವ ಕೊಟಡಿಯ ಬಾಗಿಲು ಶಾಂತಿಗಾಗಿ ದ್ವಾರವಾದರೆ ಒಳ್ಳೆಯದು’ ಎಂದು ಸರ್ವಪಳ್ಳಿಯವರು ಹೇಳುವರು.

“ಮತ್ತೊಮ್ಮೆ ಮೈಸೂರಿನಲ್ಲಿ ಪ್ರಜಾಪ್ರಭುತ್ವದ ವಿಷಯವಾಗಿ ಮಾತನಾಡುತ್ತಾ ಪ್ರಜಾಪ್ರಭುತ್ವದ ಧ್ಯೇಯದ ಮೂಲಕ ಶಾಂತಿಯುತ ಸಹಬಾಳ್ವೆಗೆ ಶ್ರಮಿಸುತ್ತಿದ್ದೇವೆ. ತಾನು ಬದುಕಿ ಪರರನ್ನು ಬದುಕಿಸಬೇಕೆನ್ನುವುದೇ ಅದರ ಧ್ಯೇಯ. ಇರುವ ಬಿಕ್ಕಟ್ಟುಗಳನ್ನು ಬದಿಗೊರಿಸಿ ಸಮಾಜದಲ್ಲಿ ಸಮರವನ್ನು ಕಲ್ಪಿಸದಿದ್ದರೆ, ಯುದ್ಧ ಮತ್ತು ಘರ್ಷಣೆಗಳು ಸಂಭವಿಸೀತು” ಎಂದು ಹೇಳಿದರು.

ಆದರೆ ಪ್ರಜಾಪ್ರಭುತ್ವದ ಗುರಿಯು ಒತ್ತಾಯದಿಂದ ಜನರ ಮನಸ್ಸನ್ನು ಬಾಗಿಸುವುದಾಗಿರಬಾರದು. ಆತ್ಮ ಸಂತೋಷದಿಂದ ಒಲಿಸಿಕೊಳ್ಳಬೇಕು. ಅಂದರೆ, ಪ್ರಜಾಪ್ರಭುತ್ವದಲ್ಲಿ ನಂಬಿಕೆ ಹುಟ್ಟುವಂತೆ ಮಾಡ

ಬೇಕು. ಜನರ ಬಯಕೆಗಳನ್ನೂ, ಅವರ ಸ್ವಪ್ನಗಳನ್ನೂ ಕಡಿದುಹಾಕ ಬಾರದು. ಅವರಿಗೆ ಉತ್ತೇಜನ ಕೊಟ್ಟು ನಮ್ಮ ದಾರಿಗೆಳೆಯಬೇಕು.

ಒಟ್ಟಿನಲ್ಲಿ ಪ್ರಜಾಪ್ರಭುತ್ವವೇದರೆ, ದೇಶದ ಶಕ್ತಿಯನ್ನು ಪ್ರತಿಯೊಬ್ಬ ರಿಗೂ ಸಮವಾಗಿ ಹಂಚುವುದು ಎಂದರ್ಥ. ಆದುದರಿಂದಲೇ ಜನರು ಮನವೊಪ್ಪಿ ಆರಿಸಿದ ನಾಯಕರನ್ನು ರಾಜ್ಯದ ಕಾರ್ಯಾಲೋಚನೆಯ ಸಭೆಗೆ ಕಳುಹಿಸಿ ಅವರ ಮೂಲಕ ಆಡಳಿತವನ್ನು ನಡೆಸುವುದಾಗಿದೆ. ಆದರೆ ಇದು ನಮಗೆ ಹಳೆಯದಾದರೂ, ಅಭ್ಯಾಸವಿಲ್ಲದುದರಿಂದ ಹೊಸಕ್ರಮವಾಗಿ ಕಾಣುತ್ತದೆ. ಒಂದು ಪ್ರಯೋಗದಂತಿದೆ. ಇದರಿಂದ ಕೆಲವು ಅವಿವೇಕ ಗಳೂ ನಡೆಯುತ್ತವೆ. ಜಾತಿ, ಪಕ್ಷ ಅಥವಾ ಮತ್ತಾವುದೋ ಮೋಹಕ್ಕೆ ಬಲಿಯಾಗಿ ನಾವು ಆರಿಸುವ ಮುಂದಾಳುಗಳಲ್ಲಿ ಕೆಲವರು ದೋಷಯುಕ್ತ ರಾಗುತ್ತಾರೆ. ಅದಕ್ಕೆ ಕಾರಣ ಅಜ್ಞಾನ. ಅದನ್ನು ಸರಿಪಡಿಸಬೇಕಾದರೆ ಸರ್ಕಾರಕ್ಕೂ ಪ್ರಜೆಗಳಿಗೂ ಹತ್ತಿರವಾಗುವಂತಹ ವಿದ್ಯಾಭ್ಯಾಸವನ್ನು ನಾವು ಕೊಡಬೇಕು. ಆಗ ರಾಜ್ಯಾಂಗದ ನಿಯಮಗಳು ಸಾರ್ಥಕವಾಗು ತ್ತವೆ" ಎಂದು ಹೇಳುತ್ತಾರೆ.

"ಪ್ರತಿಪಕ್ಷವಿಲ್ಲದೆ ಯಾವ ಸರ್ಕಾರವೂ ಉತ್ತಮವಾಗಿ ನಡೆಯುವು ದಿಲ್ಲ. ನಿಜವಾದ ಪ್ರಜಾಪ್ರಭುತ್ವದಲ್ಲಿ ಪ್ರತಿಪಕ್ಷವಿದ್ದೇಯಿರುತ್ತದೆ. ಬಹು ಮತದಿಂದ ಬಂದ ಪಕ್ಷವು ಆಡಳಿತವನ್ನು ನಡೆಸುತ್ತದೆ. ಆದರೆ ಪ್ರತಿಪಕ್ಷ ವನ್ನು ಮತದಾನ ಮಾಡಬಾರದೆಂದು ಅಡ್ಡಿಪಡಿಸಿದರೆ, ಅದು ಪ್ರಜಾ ಪ್ರಭುತ್ವವಾಗುವುದಿಲ್ಲ. ರಾಜ್ಯಾಂಗ ನಿಯಮದಲ್ಲಿ, ಮಾತಿಗೆ ಮತ್ತು ಆಲೋಚನೆಗೆ ಪ್ರತಿಯೊಬ್ಬರಿಗೂ ಅವಕಾಶವಿರಬೇಕು. ಆಗಲೇ ಅದು ಪ್ರಜಾಪ್ರಭುತ್ವವೆನಿಸಿಕೊಳ್ಳುವುದು. ಹಾಗಲ್ಲದೆ ವಿರೋಧ ಪಕ್ಷವನ್ನು ನಾವು ತಡೆಯುವುದಾದರೆ, ಪ್ರಜಾಪ್ರಭುತ್ವಕ್ಕೆ ಹಾನಿ" ಎಂದು ಹೇಳಿ ಬುದ್ಧ, ಸಾಕ್ರಟೀಸ್, ಮತ್ತು ಜಿಸಸ್‌ರವರ ವಿಷಯಗಳನ್ನು ಉದಾಹರಿಸುತ್ತಾರೆ. 'ನಾವು ಎದುರು ಪಕ್ಷವನ್ನು ಮಟ್ಟಹಾಕಬಹುದು. ಆದರೆ, ಎದುರು ಪಕ್ಷ ದವರ ಅಂತರ್ಯದಲ್ಲಡಗಿರುವ ಜ್ವಾಲೆಯು ಆರಿಹೋಗುವುದಿಲ್ಲ. ಆದ ಕ್ಕಾಗಿ ಅವರ ಮನಸ್ಸನ್ನು ತಾಳ್ಮೆಯಿಂದ ಪರಿವರ್ತಿಸಬೇಕು. ಆಗ ಗಲಭೆಗೆ ಅವಕಾಶವಿರುವುದಿಲ್ಲ'ವೆಂದು ಅವರ ಅಭಿಪ್ರಾಯ.

ಮತ್ತೊಮ್ಮೆ ಮಾತನಾಡುತ್ತಾ "ಜೀವನದ ನಿಜವಾದ ಗುರಿಯಲ್ಲ ಬೇರೆ ಬೇರೆಯಾಗಿಯೇ ಹೃದಯಗಳನ್ನು ತಾಗಬೇಕು. ಸುಖ ಮತ್ತು ದುಃಖಗಳಲ್ಲಿ ಪರಸ್ಪರ ಭಾಗಿಯಾಗಬೇಕು. ಪ್ರಜಾಪ್ರಭುತ್ವವು ಇದನ್ನೇ ಹೇಳುತ್ತದೆ. ಮನಷ್ಯನು ತನ್ನ ಹಕ್ಕು ಮತ್ತು ಕರ್ತವ್ಯಗಳನ್ನು ತಾನೇ ಅರಿತು ಅದರಂತೆ ವರ್ತಿಸಬೇಕು. ತನ್ನನ್ನು ತಾನು ಆಳುವ ಶಕ್ತಿಯನ್ನು ಪಡೆಯಬೇಕು. ಆಗ ಅವನು ಸಮಾಜವನ್ನು ಕಟ್ಟಬಲ್ಲವನಾಗುತ್ತಾನೆ.

ಹೀಗೆ ವ್ಯಕ್ತಿಯಿಂದ ಸಮಾಜ, ಸಮಾಜದಿಂದ ರಾಷ್ಟ್ರ, ರಾಷ್ಟ್ರದಿಂದ ಪ್ರಪಂಚವು ಕ್ರಮವಾಗಿ ಅರಿಯುತ್ತಾ ಬಂದರೆ, ಯುದ್ಧದ ಮಾತೇ ಬರುವುದಿಲ್ಲ. ಕೆಲವು ವೇಳೆ ಕೆಲವು ರಾಷ್ಟ್ರಗಳು ನಮ್ಮೊಡನೆ ಸೇರುವುದಿಲ್ಲ. ಆದರೂ ನಾವು ಅವರಲ್ಲಿ ಆಸಕ್ತಿಯನ್ನು ವಹಿಸಬೇಕು. ಅವರ ಮನಸ್ಸನ್ನು ಆಕರ್ಷಿಸಲು ಮಿತ್ರತ್ವವನ್ನು ತೋರಬೇಕು. ಹೀಗೆ ಮಾಡಲು ತಾಳ್ಮೆಬೇಕು. ಅರಿವು ಬೇಕು. ಇವೆರಡೇ ಇದರ ಮೂಲ ತತ್ವಗಳು.

ಒಟ್ಟಿನಲ್ಲಿ ಹೇಳುವುದಾದರೆ, ಪ್ರಜಾಪ್ರಭುತ್ವದ ಆಡಳಿತವು ಸ್ವಚ್ಛವಾದ ಮತ್ತು ಸಾಮರ್ಥ್ಯದಿಂದ ಕೂಡಿರುವುದಾದರೆ, ಸ್ಥಿರವಾಗಿ ಉಳಿಯುತ್ತದೆ. ಪ್ರತಿಯೊಬ್ಬನಿಗೂ ಸಮಾನವಾದ ಅವಕಾಶವನ್ನು ಸರ್ಕಾರದಲ್ಲಿ ಅಧಿಕಾರದಲ್ಲಿ ಮತ್ತು ಅವುಗಳ ಚುನಾವಣೆಗಳಲ್ಲಿ ನೀಡಬೇಕು. ಚುನಾಯಿಸುವಾಗ ಅವರವರ ಯೋಗ್ಯತಾನುಸಾರ ಪಕ್ಷಪಾತವಿಲ್ಲದೆ ವರ್ತಿಸಬೇಕು.

" ಇಷ್ಟಾದರೂ ನಮ್ಮ ದೇಶವು ಎಲ್ಲಿಯತನಕ ಬಡತನ, ಹಸಿವು ರೋಗ ಮತ್ತು ಅಜ್ಞಾನಗಳಿಂದ ಬಿಡುಗಡೆ ಹೊಂದುವುದಿಲ್ಲವೋ ಅಲ್ಲಿಯ ತನಕ ಪ್ರಜಾಪ್ರಭುತ್ವ ಬರದು " ಎಂದು ಸರ್ವ ಪಳ್ಳಿಯವರ ಮತ.

ಇದನ್ನೆಲ್ಲಾ ತಿಳಿದ ಆಂಗ್ಲ ವಿದ್ವಾಂಸರೊಬ್ಬರು " ಭಾರತದ ಪ್ರತಿಭಾವಂತ ಪ್ರತಿನಿಧಿಗಳು, ಈ ದಿನಗಳಲ್ಲಿ ರಾಜಕೀಯ ಸಮಸ್ಯೆಗಳೊಡನೆ ಹೊಂದಿಕೊಂಡಿರುತ್ತಾರೆ. ರಾಧಾಕೃಷ್ಣನ್ನರ ಪ್ರಜಾಪ್ರಭುತ್ವದ ರಾಜಕೀಯ ಅಭಿಪ್ರಾಯಗಳು ನೈತಿಕ ತತ್ವವುಳ್ಳವು. ಅದೇ ಮಾನವನ ನಿಜವಾದ ಗುರಿ ಮತ್ತು ಜವಾಬ್ದಾರಿಯುತವಾದ ಸ್ವಾತಂತ್ರ್ಯ" ಎಂದು ಹೇಳಿದ್ದಾರೆ.

ಇತ್ತೀಚೆಗೆ ಅಂದರೆ 1964ನೇ ಸೆಪ್ಟಂಬರ್ ಮಾಹೆಯಲ್ಲಿ ಸರ್ವ ಪಳ್ಳಿಯವರು ರಷ್ಯಾ, ಲಂಡರ್ನ ಮತ್ತು ಐರ್ಲೆಂಡಿನ ಪ್ರವಾಸವನ್ನು ಕೊಂಡರು. ಅವರ ಜೊತೆಯಲ್ಲಿ ಅವರ ಮಗ ಡಾ|| ಗೋಪಾಲ್, ಡಾ|| ಜೀವರಾಜ್ ಮೆಹತಾ, ಶ್ರೀ ಎಸ್. ದತ್, ಶ್ರೀಮತಿ ಲಕ್ಷ್ಮಿಮೆನನ್ ಮುಂತಾದವರಿದ್ದರು. ಇದರಿಂದ ಭಾರತಕ್ಕೂ ರಷ್ಯಾಕ್ಕೂ ಇದ್ದ ಮೈತ್ರಿಯು ಮತ್ತಷ್ಟು ಬಲವಾಯಿತು. ಪಾಕೀಸ್ಥಾನ ಮತ್ತು ಇಂಡಿಯಾದ ವಾದ ವಿವಾದಗಳ ವಿಷಯದಲ್ಲಿ ಐರ್ಲೆಂಡ್ ದೇಶವು ತಪ್ಪುಭಾವನೆಯನ್ನು ಹೊಂದಿದ್ದಿತು. ಅಲ್ಲಿ ಸರ್ವಪಳ್ಳಿಯವರಿತ್ತ ವಿವರಣೆಯಿಂದ ಅಲ್ಲಿನ ಅಧ್ಯಕ್ಷ ಈರ್ಮ ಡಿವೆಲಾರವರು ಕಾಶ್ಮೀರದ ವಿಷಯದಲ್ಲಿ ಭಾರತದ ನಿಲವು ನ್ಯಾಯ ಬದ್ಧವಾದುದೆಂದರಿತರು. ಅಲ್ಲಿನ ಐರಿಷ್ ಇಂಡಿಪೆಂಡೆಂಟ್ ಎಂಬ ಪ್ರಸಿದ್ಧ ಪತ್ರಿಕೆಯು "ಭಾರತದ ರಾಷ್ಟ್ರಪತಿಯವರು ಉದ್ದಾಮ ಪಂಡಿತರು. ದಾರ್ಶನಿಕರೆಂದು ನಾವು ತಿಳಿದಿದ್ದೆವು. ಆದರೆ ಶತ್ರುಗಳನ್ನು ತಮ್ಮ ಭಾವನೆ ಗಳಿಗನುಗುಣವಾಗಿ ಪರಿವರ್ತಿಸಬಲ್ಲ ಕಾರ್ಯಶೀಲ ರಾಜಕಾರಣಿಗಳೆಂದು ನಮಗೀಗ ತಿಳಿದು ಆಶ್ಚರ್ಯವಾಗಿದೆ. ಇಂತಹವರನ್ನು ರಾಷ್ಟ್ರಪತಿಯಾಗಿ ಹೊಂದಿರುವುದು ಭಾರತೀಯರ ಭಾಗ್ಯ. ಭಾರತವು ಬೃಹತ್ ರಾಷ್ಟ್ರ. ರಾಧಾಕೃಷ್ಣರು ಹಿರಿಯ ವ್ಯಕ್ತಿ" ಎಂದು ಪ್ರಸಾರಮಾಡಿತು.

---

# ರಾಧಾಕೃಷ್ಣನರ ವ್ಯಕ್ತಿತ್ವ

ಇಲ್ಲಿಯ ತನಕ ಸರ್ವಪಳ್ಳಿಯವರ ಕಾರ್ಯ ಮತ್ತು ಕಾರ್ಯರಂಗಗಳನ್ನು ತಿಳಿದೆವು. ಒಬ್ಬ ಮನುಷ್ಯನು ಯಾವುದಾದರೂ ಒಂದು ರಂಗದಲ್ಲಿ ಪ್ರಖ್ಯಾತಿಯನ್ನು ಗಳಿಸುವುದೇ ದುಸ್ತರ. ಜೊತೆಗೆ ಮಾನವನ ಆಯುಸ್ಸು ಅತ್ಯಲ್ಪ. ಹೀಗಿರುವಾಗ ಸರ್ವಪಳ್ಳಿಯವರು. ದಾರ್ಶನಿಕ ವಿಷಯದ ಉಪಾಧ್ಯಾಯರಾದರು. "ಹತ್ತುಮಂದಿ ಉಪಾಧ್ಯಾಯರ ಮಹಿಮೆಯುಳ್ಳವರು ಮತ್ತು ಸದಾಚಾರವುಳ್ಳವರೇ ಆಚಾರ್ಯರು" ಎಂದು ಅವರೇ ಹೇಳುವಂತೆ ಹಂತಹಂತವಾಗಿ ಆಚಾರ್ಯರಾದರು. ಕಟ್ಟಕಡೆಗೆ ಜಗತ್ತಿನ ದಾರ್ಶನಿಕಾಚಾರ್ಯರೂ ಆಗಿದ್ದಾರೆ. ಸಾಹಿತ್ಯವಂತೂ ಇವರ ಬಾಳಿನ ಹಾಸುಹೊಕ್ಕಾಗಿದೆ. ಇನ್ನು ಕಲೆ, ನಾಟಕ ವಿಜ್ಞಾನ ಮುಂತಾದುವುಗಳ ಪರಿಚಯವು ಇವರಿಗಿಲ್ಲದಿಲ್ಲ. ಸಾಲದುದಕ್ಕೆ ರಾಜಕೀಯ ರಂಗವು ತಾನೇ ವೀಳ್ಯಕೊಟ್ಟು ಆಹ್ವಾನಿಸಿತು. ಈ ರಂಗದಲ್ಲಿಯೂ ಇವರು ಹಿಂದೆ ಬಿದ್ದಿಲ್ಲ. ಸಮಾಜವಾದ, ಸಮತಾವಾದ, ಪ್ರಜಾಪ್ರಭುತ್ವ ಸರ್ವಾಧಿಕಾರತ್ವ, ಮುಂತಾದ ಎಲ್ಲಾ ರಾಜಕೀಯ ಹಾಗೂ ಅದಕ್ಕೆ ಬೆಂಬಲವಾಗಿರುವ ಇತಿಹಾಸಗಳನ್ನು ಮನನ ಮಾಡಿಕೊಂಡಿದ್ದಾರೆ ನಾವು ಸರ್ವಜ್ಞನೆಂಬ ಪದವನ್ನು ಉಪಯೋಗಿಸುತ್ತೇವೆ. ಈ ಇಪ್ಪತ್ತನೇ ಶತಮಾನದಲ್ಲಿ ಆ ಪದವನ್ನು ಸರ್ವಪಳ್ಳಿಯುವರಿಗೆ ಉಪಯೋಗಿಸಿದರೆ ಸಾರ್ಥಕವಾದೀತು.

ಇವರ ಅರವತ್ತನೆಯ ಹುಟ್ಟುಹಬ್ಬದಂದು ಡಬ್ಲ್ಯು. ಆರ್. ಇಂಗೆ ಎಂಬುವರು ಅರ್ಪಿಸಿದ ಗೌರವ ಗ್ರಂಥದಲ್ಲಿ ಜಾರ್ಜ. ಪಿ. ಲಾಂಗರ್ ಎಂಬುವರು ಇವರ ವಿಷಯದಲ್ಲಿ ಹೀಗೆ ಬರೆಯುತಾರೆ. "ಕೆಲವು ಮಂದಿ ಉಪಾಧ್ಯಾಯರಾಗಬಹುದು. ಕೆಲವರು ಅನುವಾದಕರಾಗಬಹುದು. ಮತ್ತೆ ಕೆಲವರು ಸಾಹಿತ್ಯ ಸಂಪಾದಕರಾಗಬಹುದು. ಹಲವರು ಇತಿಹಾಸಕಾರರಾಗಬಹುದು. ಮತ್ತೆ ಹಲವರು ದಾರ್ಶನಿಕರಾಗಬಹುದು. ಬೇರೆ ಕೆಲವರು ಉತ್ತಮ ಉಪನ್ಯಾಸಕರಾಗಬಹುದು. ಇನ್ನೂ ಕೆಲವರು ಆಡಳಿತಗಾರರಾಗ

ಬಹುದು. ಅಂತಹವರಲ್ಲಿ ಕೆಲವರು, ಅಂದರೆ, ಡಬ್ಲ್ಯು. ಇ. ಹಾಂಕಿಂಗ್ ನಂತಹವರು ಅತ್ಯಮೂಲ್ಯ ಆಲೋಚನೆಗಳನ್ನು ಹೊಂದಿ, ನಾನಾ ದೇಶಗಳ ವಿಶ್ವವಿದ್ಯಾನಿಲಯಗಳನ್ನು ಸುತ್ತಬಹುದು. ವಿಲಿಯಂ ಜೇಮ್ಸ್‌ರಂತಹ ವರು ಧಾರ್ಮಿಕ ವಿಷಯಗಳಲ್ಲಿ ಪರಿಶ್ರಮವನ್ನು ಹೊಂದಿದ್ದಾರೆ. ಎಲ್ಲೋ ಒಬ್ಬೊಬ್ಬ ದಾರ್ಶನಿಕರು ಅಮೇರಿಕಾದಲ್ಲಿ ಶಾಸನ ಸಭೆಯ ಸದಸ್ಯರಾಗಿ ದ್ದಾರೆ. ಅಂತಹವರಲ್ಲಿ ಜಾಕ್ವೈಸ್ ಮಾರಿಟೈನ್‌ರವರು ರಾಯಭಾರಿ ಯಾಗಿದ್ದಾರೆ. ಆದರೆ ರಾಧಾಕೃಷ್ಣನ್‌ರವರು ಕೇವಲ ಮೂವತ್ತು ವರ್ಷ ಗಳ ತಮ್ಮ ಜೀವನರಂಗದಲ್ಲಿ ಇವೆಲ್ಲಾ ಕಾರ್ಯಗಳನ್ನು ಸಾಧಿಸಿ ಇನ್ನೂ ಹೆಚ್ಚಿನ ಕಾರ್ಯಗಳನ್ನು ಮಾಡುತ್ತಿದ್ದಾರೆ" ಎಂದು ಬರೆದಿರುವ ವಿಷ ಯವು ಅಕ್ಷರಶಃ ಸತ್ಯವಾದುದು.

ಇಷ್ಟು ಕೆಲಸಗಳನ್ನು ಸಾಧಿಸಬೇಕಾದರೆ, ಮುಖ್ಯವಾಗಿ ಶ್ರದ್ಧೆ ಬೇಕು. ಅನವರತ ಕೆಲಸಮಾಡುವ ಉತ್ಸಾಹಬೇಕು. ಅದಕ್ಕನುಗುಣ ವಾಗಿ ಮಾನಸಿಕ ಮತ್ತು ದೈಹಿಕ ಆರೋಗ್ಯವಿರಬೇಕು. ಇವಿಷ್ಟು ಅವರು ಪಡೆದುಬಂದಿರುವ ವರ. ಅವರೇ ಒಂದುಕಡೆ "ನಾನು ಅದೃಷ್ಟವನ್ನು ಹೊಂದಿದ್ದೇನೆ. ಅದು ನನ್ನನ್ನು ಕಾಪಾಡುತ್ತಿದೆ. ನನ್ನ ಬಾಳನೌಕೆಗೆ ಅಡ್ಡ ಲಾಗಿ ಬಂದ ನೌಕೆಯನ್ನು ಚೂರು ಚೂರು ಮಾಡಬಲ್ಲ ಅಸಂಖ್ಯಾತ ಬಂಡೆಗಳಿಂದಲೂ, ತಿಟ್ಟುಗಳಿಂದಲೂ, ಮತ್ತು ಇತರ ಗಂಡಾಂತರ ಗಳಿಂದಲೂ ಪಾರುಮಾಡಿ ರಕ್ಷಿಸುವ ಚಾಲಕನಂತೆ ಅದೃಷ್ಟವು ನನ್ನನ್ನು ರಕ್ಷಿ ಸುತ್ತಿದೆ" ಎಂದಿದ್ದಾರೆ.

ಆದರೆ ಇವರು ಅದೃಷ್ಟವನ್ನು ನಂಬಿ ಕೂರತಕ್ಕವರಲ್ಲ. ಇವರ ಯಾವ ಕಾರ್ಯದಲ್ಲೂ ಅಶ್ರದ್ಧೆ ಮತ್ತು ಆಲಸ್ಯವನ್ನು ನಾವು ಕಾಣು ವಂತಿಲ್ಲ. ದಿನದ ಇಪ್ಪತ್ತನಾಲ್ಕು ಘಂಟೆಗಳಲ್ಲಿ ಬಹುಭಾಗವನ್ನು ಓದಲು ವಿನಿಯೋಗಿಸುತ್ತಾರೆ. ತಮ್ಮ ವ್ಯಾಸಂಗಕ್ಕೆ ಅಡ್ಡಿಯಾಗದಿರಲೆಂದು ಸಾಮಾನ್ಯವಾಗಿ ಏಕಾಂಗಿಯಾಗಿರಲು ಬಯಸುವರು. "ನಾವು ಪುಸ್ತಕ ದಲ್ಲಿ ಮನಸ್ಸನ್ನು ಲೀನಗೊಳಿಸಿದಾಗ, ನಾವು ಒಂಟಿಯಾಗಿದ್ದೇವೆಂಬ ಭಾವ ನೆಯು ಬರುವುದಿಲ್ಲ. ಅಂದರೆ ಪುಸ್ತಕವೂ ಒಬ್ಬ ಜೊತೆಗಾರನಿದ್ದಂತೆಯೆ! ಒಂದು ಗ್ರಂಥವನ್ನು ಓದುವುದರಿಂದ ಏಕಾಂತವು ಅಭ್ಯಾಸವಾಗುತ್ತವೆ.

ಪರ್ಯಾಲೋಚನೆಗೆ ಅವಕಾಶ ದೊರೆಯುತ್ತದೆ. ಅದರ ಆಲೋಚನೆಯಲ್ಲಿ ಲೌಕಿಕ ವಿಷಯಗಳನ್ನು ಮರೆಯುತ್ತೇವೆ. ಇದರಿಂದ ಮಾನಸಿಕ ಆರೋಗ್ಯ ವುಂಟಾಗುತ್ತದೆ. ವಿಶಾಲ ದೃಷ್ಟಿಯು ಬರುತ್ತದೆ. ನೈತಿಕ ತೃಪ್ತಿಯು ದೊರೆಯುತ್ತದೆ. ಒಂದು ಅಲೌಕಿಕ ಆನಂದವುಂಟಾಗುತ್ತದೆ" ಎಂದು ಸರ್ವಪಳ್ಳಿಯವರು ಹೇಳುತ್ತಾರೆ.

ಗ್ರಂಥಗತವಾಗಿರುವ ವಿಷಯಗಳೆಲ್ಲವೂ ಸಿದ್ಧಾಂತಗಳೆಂದು ಇವರು ಒಪ್ಪುವುದಿಲ್ಲ. "ಹಿರಿಯರ ಪದಗಳನ್ನು ಪುನರುಚ್ಚಾರ ಮಾಡುತ್ತಾ ಮೆದುಳಿಗೆ ತುಕ್ಕು ಹಿಡಿಸಿ ಕೂರಬಾರದು. ಅವರ ಮಾರ್ಗದಲ್ಲಿ ನಡೆಯುತ್ತಾ, ಅವರ ಮಹತ್ವದ ಪಥದಿಂದ ನಾವು ನೂತನ ಪಥವನ್ನು ಕಾಣಬೇಕು. ಯಾವುದೂ ಕೂಡ ಕಾಲ ದೇಶಗಳಿಗನುಗುಣವಾಗಿ ಬದಲಾವಣೆಯನ್ನು ಹೊಂದದೆ ಇರುವುದಿಲ್ಲ. ವೈಯುಕ್ತಿಕವಾಗಿ ಹೊಸ ಹೊಸ ಸಮಸ್ಯೆಗಳು ಜೀವನದಲ್ಲಿ ಬರುತ್ತಿರುತ್ತವೆ. ಅವುಗಳ ನಿವಾರಣೋಪಾಯವನ್ನು ಆಲೋಚಿಸುತ್ತಿರಬೇಕು. ಹೊಸ ಹೊಸ ಜ್ಞಾನವನ್ನು ಕ್ರೋಢೀಕರಿಸುತ್ತಿರಬೇಕು. ನಮ್ಮ ಪೂರ್ವಿಕರಂತೆಯೇ ನಾವು ನಮ್ಮ ಮುಂದಿನ ಪೀಳಿಗೆಗೆ ಮಾರ್ಗ ದರ್ಶಕರಾಗಬೇಕು" ಎಂಬುದೇ ಇವರ ಭಾವನೆ.

ವೇದಾಂತಿಯಾದವನಿಗೆ ದಾರ್ಶನಿಕ ಗ್ರಂಥಗಳಲ್ಲದೆ ಬೇರೆ ಯಾವ ಗ್ರಂಥವೂ ಬೇಡವೆಂಬುದನ್ನು ಇವರು ಒಪ್ಪುವುದಿಲ್ಲ. ಕೈಗೆ ಸಿಕ್ಕಿದ ಯಾವ ಗ್ರಂಥವಾದರೂ ಅದನ್ನು ಓದದೇ ಇರುವುದಿಲ್ಲ. ಚರಿತ್ರೆ, ನಾಟಕ, ಕಾದಂಬರಿ, ವಿಡಂಬನಕಾವ್ಯ, ಪ್ರಬಂಧ ವಿಜ್ಞಾನ, ವೈದ್ಯಶಾಸ್ತ್ರ, ಹರಟೆ ರಾಜಕೀಯ ಗ್ರಂಥ ಮುಂತಾದುವೆಲ್ಲವನ್ನೂ ಓದುತ್ತಾರೆ. ಇದು ಅವಶ್ಯಕ, ಇದು ಅನವಶ್ಯಕ, ಇದು ಒಳ್ಳೆಯದು, ಇದು ಕೆಟ್ಟದ್ದು, ಎಂಬ ಭೇಧವನ್ನು ಇವರು ಓದುವ ಮೊದಲು ಭಾವಿಸುವುದಿಲ್ಲ "ಆಧುನಿಕ ಯುಗದಲ್ಲಿ ಮಾನವನು ಬಾಳಬೇಕಾದರೆ, ಸರ್ವ ವಿಷಯದ ಜ್ಞಾನವೂ ಅಗತ್ಯ" ಎನ್ನುತ್ತಾರೆ.

ಇವರ ಓದಿನ ವೇಗವನ್ನು ಹೇಳತೀರದು. ನಾನೂರು ಐನೂರು ಪುಟಗಳ ಗ್ರಂಥವನ್ನು ಕೆಲವೇ ಘಂಟೆಗಳಲ್ಲಿ ಓದಿ ಮುಗಿಸುತ್ತಾರೆ. ಅಂದರೆ, ಸುಮ್ಮನೆ ಓದಿ ಬಿಸಾಡುವುದೆಂದಲ್ಲ. ಆದರಲ್ಲಿರುವ ಮುಖ್ಯ ವಿಷಯಗಳ ಕೆಳಗೆ ಗೆರೆಹಾಕುವುದಲ್ಲದೆ ತಮ್ಮ ಸ್ಮೃತಿ ಪಟಲದಲ್ಲೂ ಬರೆದುಕೊಂಡಿರು

ತ್ತಾರೆ. ಅನಂತರ ಯಾವಾಗ ಅದರ ಸಂದರ್ಭ ಬಂದರೂ ಹೇಳುವರು. ಹೀಗೆ ಒಂದುಸಾರಿ ನೋಡಿದುದನ್ನು ಅಥವಾ ಕೇಳಿದುದನ್ನು ನೆನಪಿನಲ್ಲಿಟ್ಟು ಕೊಳ್ಳುವ ಅಪರೂಪ ಶಕ್ತಿಯೊಂದು ಇವರಲ್ಲಿದೆ.

ರಾಧಾಕೃಷ್ಣನ್ನರು ಯಾರ ಮನಸ್ಸನ್ನೂ ನೋಯಿಸತಕ್ಕವರಲ್ಲ. ಮತ್ತೊಬ್ಬರ ಕಷ್ಟದಲ್ಲಿ ಭಾಗಿಯಾಗತಕ್ಕವರು. ಗೋಪ್ಯವಾಗಿ ಸಾಧ್ಯ ವಾದಷ್ಟನ್ನು ಸಹಾಯ ಮಾಡುವರು. ವಿದ್ಯಾರ್ಥಿಗಳ ವಿಷಯದಲ್ಲಂತೂ ಇವರಿಗೆ ಬಹಳ ಸಹಾನುಭೂತಿ. ಅವರಿಗೆ ಹಣದ ಅವಶ್ಯಕತೆಯು ಅನಿ ವಾರ್ಯವಾಗಿದ್ದರೆ, ಅಂತಹವರಿಗೆ ಸಹಾಯ ನೀಡಲು ಹಿಂಜರಿಯುವು ದಿಲ್ಲ. ಇತ್ತೀಚಿನ ಒಂದು ಉದಾಹರಣೆಯನ್ನು ಕೊಡಬಹುದು. ತಂದೆ ತಾಯಿಗಳಿಲ್ಲದ ಕುಣಿಗಲ್ಲಿನ ವಿದ್ಯಾರ್ಥಿಯೊಬ್ಬನು ಕಾಲೇಜಿಗೆ ತಾನು ಕಟ್ಟ ಬೇಕಾಗಿದ್ದ ಹಣಕ್ಕಾಗಿ, ಎಲ್ಲಾ ಕಡೆಯೂ ಪ್ರಯತ್ನಿಸಿ, ನಿರಾಶನಾಗಿ ರಾಷ್ಟ್ರಾಧ್ಯಕ್ಷರಾದ ಸರ್ವಪಳ್ಳಿಯವರಿಗೆ ತನ್ನ ದುಸ್ಥಿತಿಯನ್ನು ನಿವೇದಿಸಿ ಪತ್ರವೊಂದನ್ನು ಬರೆದುಕೊಂಡನು. ಅವನ ನೋವಿಯು ಮುಟ್ಟಿತು. ತಮ್ಮ ಅಪಾರ ಕೆಲಸಗಳಲ್ಲಿ ಇಂತಹ ಒಂದು ಸಣ್ಣ ವಿಷಯಕ್ಕೆ ಜಗದ್ವಿಖ್ಯಾತರಾದ ರಾಷ್ಟ್ರಪತಿ ರಾಧಾಕೃಷ್ಣನ್ನರು ಗಮನಕೊಟ್ಟರೆಂದರೆ ಆಶ್ಚರ್ಯವಲ್ಲವೇ ?

ಬಡ ಹುಡುಗನು ವ್ಯಾಸಂಗ ಮಾಡುತ್ತಿದ್ದ ಸಂಸ್ಥೆಯ ಅಧಿಕಾರಿ ಗಳಿಗೆ ಪತ್ರವೊಂದನ್ನು ಬರೆದು ನಿಜಸ್ಥಿತಿಯನ್ನು ತಿಳಿದುಕೊಂಡರು. ಹುಡುಗನ ಕೋರಿಕೆಯು ಸರಿಯೆಂದು ಮನವರಿಕೆಯಾದ ಕೂಡಲೆ, ಅವನು ಕಾಲೇಜಿಗೆ ಕೊಡಬೇಕಾಗಿದ್ದ ಹಣವನ್ನು ತಮ್ಮ ಸ್ವಂತ ಹಣದಲ್ಲಿ ಶಾಲೆಯ ಮುಖ್ಯಾಧಿಕಾರಿಗಳಿಗೆ ಸಂದಾಯ ಮಾಡಿದರೆಂದರೆ ಮತ್ತೆಷ್ಟು ಆಶ್ಚರ್ಯ ವಾಗದು ? ಹೀಗೆಯೇ ಅದೆಷ್ಟೋ ವಿದ್ಯಾರ್ಥಿಗಳಿಗೆ ಇವರು ಸಹಾಯವು ಸಂದಾಯವಾಗಿದೆ. ನಾವಿಲ್ಲಿ ಕಾಣುವುದು ಅವರು ಕೊಟ್ಟ ಹಣದ ಮಹತ್ವವನ್ನಲ್ಲ. ಅವರ ಸಹಾಯ ಗುಣವನ್ನು ! ಸಣ್ಣ ವಿಷಯವನ್ನೂ ತಾತ್ಸಾರ ಮಾಡದ ಇವರ ಸ್ವಭಾವವನ್ನು !

ಕೇವಲ ಹಣದ ಸಹಾಯವನ್ನು ಬಯಸತಕ್ಕವರು ಮಾತ್ರ ಇವರ ಲ್ಲಿಗೆ ಬರುತ್ತಾರೆಂದಲ್ಲ ! ರಾಜಕಾರಣಿಗಳು, ಇತಿಹಾಸಕರು, ವಿಜ್ಞಾನಿಗಳು, ದಾರ್ಶನಿಕರು, ಸಾಹಿತಿಗಳು, ಕಲೆಗಾರರು, ಕಾರ್ಮಿಕರಾದಿಯಾಗಿ, ಇವರ

ಮಾರ್ಗದರ್ಶನವನ್ನು ಪಡೆಯಲು ಬರುತ್ತಿರುತ್ತಾರೆ. ಆದರಿಂದ ತಮಗೆ ಎಷ್ಟೇ ಶ್ರಮವಾದರೂ, ಆಲಸ್ಯವನ್ನು ತೋರದೆ, ಅವರ ಸಮಸ್ಯೆಗಳಿಗೆ ಪರಿಹಾರವನ್ನು ಸೂಚಿಸಿ ಕಳುಹುತ್ತಾರೆ. ತಮ್ಮ ಕೈಲಾಗದ ಕೆಲಸವಾದರೆ, ಬಂದವರನ್ನು ನಿಂದಿಸುವುದಿಲ್ಲ. ಸಹಾನುಭೂತಿಯನ್ನು ತೋರಿ ಸಹಾಯವಾಗುವ ದಾರಿಯನ್ನು ಸೂಚಿಸುತ್ತಾರೆ.

ಇಷ್ಟಾದರೂ ನಾನೊಬ್ಬ ಉಪಕಾರಿಯೆಂಬ ಭಾವನೆಯನ್ನು ಹೊಂದುವುದಿಲ್ಲ. ಅದನ್ನೆ ಅವರು ಒಂದು ಕಡೆ "ನನಗೆ ಸಹಾಯ ಮಾಡಲು ಶಕ್ತಿಯಿಲ್ಲ. ಆದುದರಿಂದ ನಾನೊಬ್ಬ ದಾರ್ಶನಿಕನಲ್ಲ" ಎಂದು ಹೇಳುವರು. 'ನಾನು ಕಲಿತವನು, ಜ್ಞಾನಿ' ಎಂಬ ಹೆಮ್ಮೆಯು ಅವರ ಜೀವನಕ್ಕಂಟಿ ಬಂದಿಲ್ಲ. ಯಾರು ಏನು ಹೇಳಿದರೂ, ಅದನ್ನು ಕೇಳಿ, ಆಲೋಚಿಸುತ್ತಾರೆ. ಅದನ್ನೇ "ಬೇರೆಯವರಿಂದ ಕಲಿತು ಕೊಳ್ಳಲು ನಾನು ತಿರಸ್ಕರಿಸುವುದಿಲ್ಲ. ನಾನಿಷ್ಟು ಕೀರ್ತಿಶಾಲಿಯಾಗಲು ಬೇರೆಯವರಿಂದ ಉಪಕೃತನಲ್ಲವೆಂದೂ ಹೇಳುವುದಿಲ್ಲ" ಎನ್ನುತ್ತಾರೆ.

ಹಾಗೆಯೇ ನೊಂದವರ ವಿಷಯದಲ್ಲಿ ಸಹಾನುಭೂತಿಯನ್ನು ತೋರದೆ ಇರುವ ಸ್ವಭಾವವೂ ಇವರದಲ್ಲ ನಾವು ಅತ್ಯಂತ ಉನ್ನತ ಸ್ಥಾನದಲ್ಲಿದ್ದರೂ ಕೂಡ ಮಾನವೀಯತೆಯನ್ನು ಮರೆತಿಲ್ಲ. ಸಾಮಾನ್ಯವಾಗಿ ಇವರ ಗಮನಕ್ಕೆ ಬಿದ್ದಂತಹ ಸಾವುನೋವುಗಳ ವಿಷಯದಲ್ಲಿ ಸಹಾನುಭೂತಿಯನ್ನು ತೋರಿಯೇ ತೋರುತ್ತಾರೆ. ಉದಾಹರಣೆಗೆ ಕೆಲವನ್ನು ನೋಡಬಹುದು. ಡಾ|| ಟಾಳಿಗಾರವರು ಮತ್ತು ಮೈಸೂರಿನ ಉಪಕುಲಪತಿಗಳಾಗಿದ್ದ ಸರ್ದಾರ್ ಪಣಿಕರ್‌ರವರು ಹೃದಯಘಾತದಿಂದ ಕಾಲವಾದಾಗ, ಹಾಗೆಯೇ ಆಗ್ರಾದಬಳಿ ವಿಮಾನಘಾತದಿಂದ ಹದಿನೆಂಟುಮಂದಿ ಸತ್ತಾಗ ಮತ್ತು ಪ್ಲಾನಿಂಗ್ ಕಮಿಷನ್ನಿನ ಉಪಾಧ್ಯಕ್ಷರಾಗಿದ್ದ ವಿ. ಟಿ. ಕೃಷ್ಣಮಾಚಾರಿಯವರು ಕಾಲವಾದಾಗ, ಸತ್ತವರ ಆತ್ಮಕ್ಕೆ ಶಾಂತಿಯನ್ನು ಕೋರಿ ಅವರ ಕುಟುಂಬಗಳಿಗೆ ತಮ್ಮ ಸಂತಾಪವನ್ನು ಸೂಚಿಸಿದ್ದಾರೆ. ಡಾ|| ರಾಜೇಂದ್ರಪ್ರಸಾದರು ದೈವಾಧೀನರಾದಾಗ ಇವರಿಗಾದ ದುಃಖವು ಅಷ್ಟಿಷ್ಟಲ್ಲ. ಅಮೆರಿಕಾದ ಅಧ್ಯಕ್ಷ ಕೆನಡಿಯವರ ಕೊಲೆಯ ಸುದ್ದಿಯನ್ನು ಕೇಳಿ

ದಿಗ್ಭ್ರಾಂತರಾದರು. ನೆಹರೂರವರ ನಿಧನದ ವಾರ್ತೆಯಂತೂ ಇವರ ಬಲ ಭುಜವನ್ನು ಕುಗ್ಗಿಸಿದಂತಾಯಿತು.

ಇವರು ಸದಾ ಹಸನ್ಮುಖಿಗಳು! ಅಷ್ಟೇ ಹಾಸ್ಯಪ್ರಿಯರು. ಗಹನವಾದ ವಿಷಯವನ್ನು ಅಭ್ಯಾಸಮಾಡಿ, ಆಲೋಚಿಸಿ, ಮನಸ್ಸು ಆಯಾಸಗೊಂಡಾಗ ಉಲ್ಲಾಸವನ್ನು ಬಯಸುತ್ತಾರೆ. ಹಿರಿಯರು ಕಿರಿಯರು ಎಂಬ ಭೇದವನ್ನು ತೋರದೆ ಹಾಸ್ಯವಾಗಿ ಮಾತನಾಡುವ ಪರಿಚಿತರಲ್ಲಿಗೆ ಹೋಗುತ್ತಾರೆ. ಕೆಲವು ಹೊತ್ತು ಸರಸ ಸಲ್ಲಾಪಗಳಲ್ಲಿ ಕಾಲ ಕಳೆಯುತ್ತಾರೆ. ಅಂತಹರಾರೂ ಸಿಗದಿದ್ದಾಗ ತಾವೇ ಓದಿದ ರಸವತ್ತಾದ ಶ್ಲೋಕಗಳನ್ನೂ ಹಾಡುಗಳನ್ನೂ ಗೊಣಗುಟ್ಟುತ್ತಾ ಹರ್ಷಗೊಳ್ಳುತ್ತಾರೆ. ಇತ್ತೀಚೆಗೆ ಮಾನ್ಯ ಮುಖ್ಯಮಂತ್ರಿಗಳಾದ ನಿಜಲಿಂಗಪ್ಪನವರು ಸರ್ವಪಳ್ಳಿಯವರ ಭಾವಚಿತ್ರವನ್ನು ಅನಾವರಣಮಾಡುತ್ತಾ "ರಾಧಾಕೃಷ್ಣನ್ನರು ನನ್ನನ್ನು ಕನ್ನಡದಲ್ಲಿಯೇ ಮಾತನಾಡಿಸುತ್ತಾರೆ. ಆಗಾಗ ವರದಾಚಾರ್ಯರ ನಾಟಕದ ಹಾಡುಗಳನ್ನು ಹೇಳುತ್ತಿರುತ್ತಾರೆ" ಎಂದು ಹೇಳಿದ್ದಾರೆ. ಇದರಿಂದ ಸರ್ವಪಳ್ಳಿಯವರಿಗೆ ಕನ್ನಡ ಭಾಷೆಯಲ್ಲಿರುವ ಅಭಿಮಾನ ಹಾಗೂ ಅವರಲ್ಲಿರುವ ಉತ್ತಮ ಹಾಸ್ಯಪ್ರಿಯತೆಯನ್ನು ನಾವು ತಿಳಿಯಬಹುದು ಅಷ್ಟೇ ಅಭಿರುಚಿ ಮತ್ತು ಆಸಕ್ತಿಯು ಕಲೆಯಲ್ಲಿದೆ. ಮದರಾಸಿನಲ್ಲಿರುವ ಅಡಿಯಾರಿನ ಕಲಾಕ್ಷೇತ್ರಕ್ಕೆ ಇವರು 1936ರಿಂದಲೂ ಸದಸ್ಯರಾಗಿದ್ದಾರೆ. ಸಾಹಿತ್ಯ ಅಕಾಡವಿಯ ಅಧ್ಯಕ್ಷರಾಗಿದ್ದ ನೆಹರೂರವರು ಕಾಲವಶರಾದಮೇಲೆ ಅದರ ಉಪಾಧ್ಯಕ್ಷರಾದ ಡಾ॥ ರಾಧಾಕೃಷ್ಣನ್ನರು ಸರ್ವಾನುಮತದಿಂದ ಸಾಹಿತ್ಯ ಅಕಾಡಮಿಯ ಅಧ್ಯಕ್ಷರಾಗಿದ್ದಾರೆ.

ಇವರು ವೇದಾಂತಿಯಾದರೂ ಕ್ರಿಡಾಭಿಜ್ಞರು. ಈ ವೃದ್ಧಾಪ್ಯದಲ್ಲೂ ಆಟಗಳ ಕಡೆಗೆ ಗಮನ ಕೊಡುತ್ತಾರೆ. ಇತ್ತೀಚೆಗೆ ನಡೆದ ಪಾರ್ಲಿಮೆಂಟ್ ಸದಸ್ಯರ ಕ್ರಿಕೆಟ್‌ಪಂದ್ಯದಲ್ಲಿ ದಿವಂಗತ ನೆಹರೂರವರು ಒಂದು ಪಂಗಡಕ್ಕೂ ರಾಧಾಕೃಷ್ಣನ್ನರು ಮತ್ತೊಂದು ಪಂಗಡಕ್ಕೂ ನಾಯಕರಾಗಿದ್ದುದನ್ನು ನಾವು ತಿಳಿದಿದ್ದೇವೆ.

ಯಾರೊಡನೆಯೂ ಇವರು ಕಠೋರವಾಗಿ ವರ್ತಿಸುವುದಿಲ್ಲ. ತಮ್ಮ ಶಿಷ್ಯರೊಡನೆ ಸಹಪಾಠಿಗಳಂತೆ ಬೆರೆತು, ಸಂತೋಷವಾಗಿ ಕಾಲ ಕಳೆಯು

ತ್ತಿದ್ದ ವಿಷಯವನ್ನು ನಾವು ತಿಳಿದಿದ್ದೇವೆ. ಮಿತ್ರರ ವಿಷಯದಲ್ಲಿ ಅವರಿಗೆ ಅಪಾರ ಅಭಿಮಾನ ಇವರು ನನ್ನವರು, ಅವರು ಪರರು ಎಂಬ ಭೇದವಿಲ್ಲ. ಇವರ ಸಾಹಿತ್ಯಗಳಲ್ಲಿ ನಾವಿದನ್ನು ತಿಳಿಯಬಹುದು. ಅವರ ಪ್ರತಿಯೊಂದು ಪುಸ್ತಕದಲ್ಲೂ ತಿಳಿಸಿರುವ ಪೂರ್ವ ಮತ್ತು ಪಶ್ಚಿಮದ ಮಿತ್ರರನ್ನು ನಾವು ಕಾಣುತ್ತೇವೆ. ಎಂ. ಎ. ಕ್ಯಾಂಡೆತ್, ಮಾಕ್ಸ ಮುಲ್ಲರ್, ಡೀಪ್‌ಸೆನ್, ಕೀತ್, ಜಾಕೋಬಿ, ರೈಸ್‌ಡೇವಿಡ್, ಓಲ್ಡನ್ ಬರ್ಗ ಮುಂತಾದ ಪರ ದೇಶದ ಮಿತ್ರರುಗಳ ಜ್ಞಾಪಕಾರ್ಥವಾಗಿ ತಮ್ಮ ಗ್ರಂಥಗಳನ್ನು ಜಗತ್ತಿಗೆ ಅರ್ಪಿಸಿದ್ದಾರೆ. ಅಷ್ಟೇ ವಿಶ್ವಾಸವನ್ನು ಟಿ. ಕೆ. ದೊರೆಸ್ವಾಮಿ, ಶ್ರೀ ಸುಬ್ರಹ್ಮಣ್ಯಂ, ಎಂ. ಹಿರಿಯಣ್ಣ ಮುಂತಾದ ದೇಶೀಯ ಮಿತ್ರರಿಗೂ ತೋರಿರುವರು

ಯಾರಾದರೂ ಒಮ್ಮೆ ಇವರೊಡನೆ ಮಾತನಾಡಿದರೆ ಮುಗಿಯಿತು. ಇವರ ಸರಳತೆ, ಆತ್ಮೀಯವಾದ ಮಾತು. ಮತ್ತು ಇವರು ತೋರುವ ಆದರ ಗಳಿಂದ ಬಿಗಿಯಲ್ಪಡುತ್ತಾರೆ. ಅಂತಹವರು ಜೀವನ ಪರ್ಯಂತ ಸರ್ವ ಪಳ್ಳಿಯವರನ್ನು ಮರೆಯುವಂತಿಲ್ಲ. ಮಿತ್ರರಾಗಿಯೇ ಉಳಿಯುತ್ತಾರೆ. ಇವರು ಜೇಮ್ಸ್‌ರವರ ಪುಸ್ತಕಗಳ ವಿಷಯದಲ್ಲಿ "ಯಾರೂ ಇವರ ಪುಸ್ತಕ ಗಳನ್ನೂ ಮುಟ್ಟುತ್ತಾರೋ ಅವರನ್ನು ಈ ಪುಸ್ತಕಗಳು ಮುಟ್ಟುತ್ತವೆ" ಎಂದು ಹೇಳಿದ ಮಾತು ಇವರಿಗೇನೇ ಅನ್ವಯಿಸುತ್ತದೆ. ಇವರ ಗ್ರಂಥ ಗಳು ಓದುಗರನ್ನು ಹೇಗೆ ಸೆರೆ ಹಿಡಿಯುತ್ತವೆಯೋ ಹಾಗೆಯೇ ಇವರ ವ್ಯಕ್ತಿತ್ವವು! ಇವರ ಪ್ರೇಮ ಭಾವವು ದೊಡ್ಡವರು ಚಿಕ್ಕವರು ಎಂಬ ತಾರತಮ್ಯದ ಮೇಲೆ ಹೋಗುವುದಿಲ್ಲ. "ಒಬ್ಬನು ಮತ್ತೊಬ್ಬನನ್ನು ತಿಳಿಯಲಾರನು ನಾವು ಇತರರ ಕಾರ್ಯಗಳನ್ನೂ, ಅವರಾಡುವ ಮಾತು ಗಳನ್ನೂ ತಿಳಿಯಬಲ್ಲೆವಷ್ಟೆ! ಅವರನ್ನು ನಿಜವಾಗಿ ತಿಳಿಯಬೇಕಾದರೆ, ಅವರ ಹೃದಯವನ್ನು ಹೊಕ್ಕು ನೋಡಬೇಕು" ಎನ್ನುತ್ತಾರೆ.

ದಿವಂಗತ ಚಾ ಚಾ ನೆಹರೂರವರು ಸಾಮಾನ್ಯವಾಗಿ ಯಾವ ಅತಿಥಿಯನ್ನೂ ತಮ್ಮ ಮನೆಗೆ ಕರೆದು ಸತ್ಕರಿಸುತ್ತಿದ್ದುದು ಅಪರೂಪ. ಆದರೆ, ಸರ್ವಪಳ್ಳಿಯವರ ವ್ಯಕ್ತಿತ್ವವು ನೆಹರೂರವರ ಮನಸ್ಸನ್ನು ಸೂರೆ ಗೊಂಡಿತ್ತು. ಸರ್ವಪಳ್ಳಿಯವರ ಎಪ್ಪತ್ತೈದನೆಯ ಹುಟ್ಟುಹಬ್ಬದಂದು

ನೆಹರೂರವರು ತಮ್ಮ ಮನೆಗೆ ಆಹ್ವಾನಿಸಿ ಸತ್ಕರಿಸಿದುದನ್ನು ನೋಡಿದರೆ, ರಾಧಾಕೃಷ್ಣನ್ನರ ವಿಷಯದಲ್ಲಿ ಅವರಿಗಿದ್ದ ಅಪಾರ ಆತ್ಮೀಯತೆಯನ್ನು ತೋರಿಸುತ್ತದೆ.

ಸಂಸಾರದ ವಿಷಯದಲ್ಲಿಯೂ ಹಾಗೆಯೇ? ಯಾವಾಗಲೂ ಅಧ್ಯಯನ ಮಾಡುತ್ತಾ ಕುಳಿತಿದ್ದರೂ ಸಂಸಾರದಿಂದ ದೂರವಿರಲಿಲ್ಲ. ಚಿಕ್ಕ ವಯಸ್ಸಿನಲ್ಲಿ ಮದುವೆಯಾದರೂ ವ್ಯಾಮೋಹಕ್ಕೊಳಗಾಗಲಿಲ್ಲ. ಇವರ ದಾಂಪತ್ಯ ಜೀವನವು ಬಹಳ ಸಂತೋಷದಾಯಕವಾಗಿತ್ತೆಂದು ನಾವು ತಿಳಿದಿದ್ದೇವೆ. ಆದರೂ, ಇವರ ಪ್ರೇಮವು ಮನೆಯಲ್ಲಿ ಮಾತ್ರ ಸಂಕುಚಿತವಾಗಲಿಲ್ಲ. ಅವರೇ ಒಂದು ಕಡೆ "ನಮ್ಮ ಸ್ವಂತ ಜೀವನದ ಆಹ್ಲಾದದಲ್ಲಿ ನೆರೆಯ ಹಾಗೂ ಪ್ರಪಂಚವನ್ನು ಮರೆಯಬಾರದು. ನಮ್ಮ ಪ್ರೇಮವು ವಿಶ್ವ ಕುಟುಂಬದತ್ತ ವಿಸ್ತಾರವಾಗಬೇಕು. ಅನುರಾಗಗಳಿಗೆ ಬಹುಮಂದಿ ಗುಲಾಮರಾಗುತ್ತೇವೆ. ಅದರಿಂದ ನಮ್ಮ ಗುರಿಯನ್ನೇ ನಾವು ಕಾಣಲಾರದವರಾಗುತ್ತೇವೆ." ಎಂದು ಹೇಳುತ್ತಾರೆ.

ಸರ್ವಪಳ್ಳಿಯವರಿಗೆ ಮಕ್ಕಳ ವಿಷಯದಲ್ಲಿಯೂ ಹೆಚ್ಚಿನ ಪ್ರೇಮವಿದೆ. ಬಂಧುಮಿತ್ರರು ಮನೆಗೆ ಬಂದು ಹೋಗುತ್ತಿರುತ್ತಾರೆ. ಎಲ್ಲರನ್ನೂ ಸತ್ಕರಿಸುವರು. ಅದರಿಂದಾಗುವ ಹೆಚ್ಚಿನ ವೆಚ್ಚಕ್ಕೆ ಹಿಂದುಮುಂದು ನೋಡುವುದಿಲ್ಲ. ಮತ್ತಷ್ಟು ಸಂತೋಷಪಡುತ್ತಾರೆ. 'ಮನೆಯು ಒಂದು ಸತ್ರ' ಎಂದು ಹಿಗ್ಗಿನಲ್ಲಿ ತಾವೇ ಹೇಳಿದ್ದಾರೆ.

ಇವರ ಸಹೋದ್ಯೋಗಿಗಳಾಗಿದ್ದ ಆಂಗ್ಲ ವಿದ್ವಾಂಸರೊಬ್ಬರಾದ ಬಿ. ಕೆ. ಮಲ್ಲಿಕ್ ಎಂಬುವರು ಇವರ ದಾಂಪತ್ಯ ಜೀವನವನ್ನು ಸೂಕ್ಷ್ಮವಾಗಿ ತಿಳಿಸಿ, ಸರ್ವಪಳ್ಳಿಯವರನ್ನು ಜನಕನಿಗೆ ಹೋಲಿಸುತ್ತಾರೆ ಇದಕ್ಕೆ ಕಾರಣ: ಇವರು ಸಂಸಾರದಲ್ಲಿದ್ದೂ ಇಲ್ಲದಂತೆ ನಿರ್ಲಿಪ್ತರಾಗಿ ಬಾಳುತ್ತಿದ್ದರು. ಅವರು ಮುಂದುವರಿದು, ಮನೆಯಲ್ಲಿ ಹೆಂಡತಿಯನ್ನು ಪ್ರೀತಿಸುವ ಗಂಡ, ಚತುರರಾದ ಮಕ್ಕಳಿಗೆ ಉತ್ತಮ ತಂದೆ, ನಂಬಿಕಾರ್ಹರಾದ ಮಿತ್ರ! ಜಗತ್ತಿನ ಎಲ್ಲಾ ಜನಾಂಗದ ಸೇವಕ" ಎಂದು ಸರ್ವಪಳ್ಳಿಯವರನ್ನು ಹೊಗಳಿದ್ದಾರೆ.

ಇವರ ಜೀವನದಲ್ಲಿ ಎಪ್ಪತ್ತು ವರ್ಷಗಳು ತುಂಬುವ ಮೊದಲು, ಎಂದೂ ರೋಗದಿಂದ ಹಾಸಿಗೆ ಹಿಡಿದವರಲ್ಲ. ಇದಕ್ಕೆ ಕಾರಣ: ಇವರ ಹಿತಮಿತವಾದ ಆಹಾರ, ನಿದ್ರೆ, ಸದಾ ಸ್ವಚ್ಛವಾಗಿರುವುದು ಮತ್ತು ತೃಪ್ತ ರಾಗಿರುವುದು. ಆದರೆ ಇವರು ಅಲಂಕಾರ ಪ್ರಿಯರಲ್ಲ. ಅವರೆಂದೂ ತಲೆ ಯನ್ನು ಬಾಚುವುದಿಲ್ಲ. ಆದರೂ ತಲೆಗೂದಲು ನಿತ್ಯಮುಡಿಯಿಂದ ಜಡೆ ಯಾಗುವುದಿಲ್ಲ. ಶುಭ್ರವಾದ ಉಡುಪನ್ನು ಧರಿಸುತ್ತಾರೆ. ಉದ್ದನೆಯ ಕೋಟು, ಪಂಚೆಗಚ್ಚೆಯ ಪಂಚೆ, ತಲೆಗೆ ಪೇಟ. ಇದು ಇವರ ನಿತ್ಯದ ಉಡುಪು. ಕೆಲವು ವೇಳೆ, ಷರಾಯಿಯನ್ನು ಹಾಕುವುದೂ ಉಂಟು !

ಯಾರು ಯಾವ ಸಭೆಗಳಿಗೆ ಕರೆಯಲಿ ಸಾಧ್ಯವಿದರೆ ತಪ್ಪದೆ ಹೋಗ ತ್ತಾರೆ. ಆಲೋಚಿಸಿ ನೋಡಿದರೆ, ವಿಶ್ವದಲ್ಲಿ ಇವರು ಉಪನ್ಯಾಸ ನೀಡದ ವಿಶ್ವವಿದ್ಯಾನಿಲಯವೊಂದಿಲ್ಲ ! ಸಂಸ್ಥೆಯೊಂದಿಲ್ಲ ! ಪರದೇಶದ ಪ್ರವಾಸ ದಲ್ಲೂ ಕೂಡ ತಮ್ಮ ನಿತ್ಯನಿಯಮಗಳನ್ನು ಮೀರುವುದಿಲ್ಲ. ಭಾರತದ ರಾಷ್ಟ್ರ ಪತಿಯಾದರೂ ನಿರಾಡಂಬರಜೀವಿ. ಮನೆಯಲ್ಲೂ ಸರಳ ಜೀವನವನ್ನೇ ತೋರಿದ್ದಾರೆ.

ಮಾತಿನಲ್ಲೂ ಮಿತಭಾಷಿಗಳು. ಉಪನ್ಯಾಸಕ್ಕೆ ನಿಂತಾಗ ನಿರರ್ಗಳ ವಾಗಿ ಮಾತನಾಡುತ್ತಾರೆ. ತಿಳಿದವರ ಮಧ್ಯದಲ್ಲಿ ಕುಳಿತಾಗ ಅಷ್ಟೇ ಮೌನವಾಗಿರಬಲ್ಲರು ಪ್ರೊ|| ಸಿ. ಇ.ಎಂ. ಜೋಡ್‌ರವರು ಒಂದು ಸನ್ನಿವೇಶ ವನ್ನು ಹೇಳುತ್ತಾರೆ. ಇಂಗ್ಲೇಂಡಿನಲ್ಲಿ ಒಮ್ಮೆ ಎಚ್. ಜಿ. ವೇಲ್ಸರು ಭೋಜನಕ್ಕಾಗಿ ಇವರನ್ನು ಆಹ್ವಾನಿಸಿದ್ದರು. ಅಲ್ಲಿ ವಿಜ್ಞಾನಲೇಖಕ ಜೆ. ಡಬ್ಲ್ಯು ಸುಲಿವಾನ್ ಮುಂತಾದವರೂ ಇದ್ದರು. ಎಲ್ಲರೂ ನಾನಾ ವಿಷಯ ಗಳ ಮೇಲೆ ಚರ್ಚೆಯನ್ನು ನಡೆಸಿದರು. ಸರ್ವಪಳ್ಳಿಯವರು ಎಲ್ಲರ ಮಾತನ್ನೂ ಮೌನವಾಗಿ ಕುಳಿತು ಕೇಳುತ್ತಿದ್ದರು. ಅವರಲ್ಲಿ ಯಾರಾ ದರೂ ಪ್ರಶ್ನಿಸಿದರೆ ಮಾತ್ರ ಉತ್ತರವೀಯುತ್ತಿದ್ದರು. ಇದರಿಂದ ಅಲ್ಲಿದ್ದವ ರಿಗೆಲ್ಲರಿಗೂ ಆಶ್ಚರ್ಯವಾಯಿತು. ಇವರು ಕೊಡುತ್ತಿದ್ದ ಪ್ರತಿಯೊಂದು ಪುಟ್ಟಪುಟ್ಟ ಉತ್ತರವೂ ಬಹಳ ಪರಿಣಾಮಕಾರಿಯಾಗಿದ್ದುವು ಎಂದು.

ಸರ್ವಪಳ್ಳಿಯವರು ಯಾರಾದರೂ ತಮ್ಮನ್ನು ಹೊಗಳಲು ಪ್ರಾರಂಭಿ ಸಿದರೆ, ಅದನ್ನು ಅವರು ಸಹಿಸುವುದಿಲ್ಲ. ಹಿತವಾದ ಮಾತಿನಲ್ಲೇ ಅಂತಹ

ವರ ಗಮನವನ್ನು ಬೇರೆ ವಿಷಯದ ಕಡೆಗೆ ಸೆಳೆಯುತ್ತಾರೆ. ಜೀವಂತ ತತ್ವ ಜ್ಞಾನಿಗಳ ಗ್ರಂಥಮಾಲೆಯಲ್ಲಿ ಸರ್ ರಾಧಾಕೃಷ್ಣನ್ ಎಂಬ ದೊಡ್ಡ ಸಂಪುಟವನ್ನು ಹೊರತಂದ ಪ್ರೊ|| ಸ್ಕೆಲ್ಲಿಸ್‌ರವರು ಸರ್ವಪಳ್ಳಿಯವರನ್ನು ಆತ್ಮ ಕಥೆಯನ್ನು ಬರೆದು ಇಡಲು ಪ್ರಾರ್ಥಿಸುತ್ತಾರೆ. ಅದಕ್ಕೆ ಇವರು ಇಷ್ಟಪಡದೆ ತಮ್ಮ ಜೀವನ ದರ್ಶನವನ್ನು ಬರೆದಿದ್ದಾರೆ.

ಸರ್ವಪಳ್ಳಿಯವರ ಉದ್ದೇಶವು ವ್ಯಕ್ತಿಯೊಬ್ಬನ ತಂದೆತಾಯಿಗಳ ಹೆಸರು ಹುಟ್ಟಿಬೆಳೆದ ರೀತಿ, ಮುಂತಾದುವು ಓದುಗರಿಗೆ ಅಷ್ಟಾಗಿ ಉಪ ಯೋಗವಿಲ್ಲ. "ಪ್ರತಿಯೊಬ್ಬನ ಜೀವನ ಚರಿತ್ರೆಯೂ ಸತ್ಯವಾಗಿ ಬರೆದು ದಾಗಿದ್ದರೆ, ಓದುಗರಿಗೆ ಆಸಕ್ತಿದಾಯಕವಾಗಿರುತ್ತದೆ. ಆದರೆ, ನಾವು ನಮ್ಮ ಸತ್ಕಾರ್ಯ ಮತ್ತು ದುಷ್ಕಾರ್ಯಗಳೆರಡನ್ನೂ ಜನತೆಯ ಮುಂದಿ ಡಲು ಪ್ರಯತ್ನಿಸುವುದಿಲ್ಲ. ನಾವು ಅನುಭವಿಸಿದ ಅಪಜಯಕ್ಕಿಂತಲೂ. ಜಯವನ್ನೇ ಪ್ರದರ್ಶಿಸಿ, ನಷ್ಟಕ್ಕಿಂತಲೂ ಲಾಭವನ್ನೇ ಹೆಚ್ಚಾಗಿ ತೋರಿ, ನಮ್ಮಲ್ಲಿರುವ ದುರ್ಗುಣಕ್ಕಿಂತ ಸದ್ಗುಣವನ್ನೇ ಹೆಚ್ಚಾಗಿ ಪ್ರದರ್ಶಿಸುತ್ತೇವೆ. ಮಹಾತ್ಮರ ವಿಷಯವು ಹಾಗಲ್ಲ. ಇದ್ದುದನ್ನು ಇದ್ದಂತೆಯೇ ಜನತೆಯ ಮುಂದಿಡುತ್ತಾರೆ. ಒಟ್ಟಿನಲ್ಲಿ ಒಬ್ಬ ವ್ಯಕ್ತಿಯ ಜೀವನ ಚರಿತ್ರೆಗಿಂತಲೂ ಅವನು ಮಾಡಿರುವ ಕಾರ್ಯಗಳು ಮುಖ್ಯ"ವೆಂದು ಇದರ ಭಾವನೆ. ಅದು ಸಹಜವಾದುದೆ. ಕೆಲವರಿಗೆ ಆಜನ್ಮತಃ ಬಂದಿರುವ ಶ್ರೀಮಂತಿಗೆ ಮತ್ತು ಉತ್ತಮ ವಾತಾವರಣಗಳಿಂದ ಅವರ ಭವಿಷ್ಯವು ಬೇಕಾಗಿದೆ. ಆದರೆ, ಆ ವ್ಯಕ್ತಿಯ ಭವಿಷ್ಯದ ಕೀರ್ತಿಯು ಹಿರಿಯರ ಊರುಗೋಲಿನಲ್ಲಿ ಬೆಳದುದು ಮತ್ತೆ ಕೆಲವರು ಯಾವ ಹಿನ್ನಲೆಯೂ ಇಲ್ಲದೆ ಸ್ವಪ್ರಯತ್ನದಿಂದ ಗಣ್ಯ ರಾಗಿ, ಲೋಕೋಪಕಾರಿಗಳಾಗಿ, ಕೀರ್ತಿಗಳಿಸಿದ ಅನೇಕ ಮಹಾತ್ಮರ ಉದಾಹರಣೆಗಳು ಜಗತ್ತಿನಲ್ಲಿವೆ. ಅಂತಹವರಲ್ಲಿ ಸರ್ವಪಳ್ಳಿಯವರೂ ಒಬ್ಬರು. ಇವರ ತಂದೆ ತಾಯಿಗಳ ಶ್ರೀಮಂತಿಕೆಯಾಗಲೀ ಬಂಧುಬಳಗದ ದೊಡ್ಡಸ್ತಿಕೆಯಾಗಲೀ ಇವರನ್ನು ಮೇಲೆತ್ತಲಿಲ್ಲ. ಶ್ರಮದಿಂದ ವ್ಯಾಸಂಗ ಮಾಡಿದರು. ಜ್ಞಾನದೊಡನೆ ಅನವರತ ಹೋರಾಟ ನಡೆಸಿ, ಇಂದು ಉತ್ತಮ ಫಲವನ್ನು ಹೊಂದಿದ್ದಾರೆ. ಜಗತ್ತಿನ ಆದರ್ಶ ಮಾನವರಾಗಿ ದ್ದಾರೆ. ಅವರೇ ಒಂದು ಕಡೆ, "ಯಾರದೋ ಒಬ್ಬರ ಉತ್ತಮ ಅದೃಷ್ಟವು

ನನ್ನನ್ನು ಉನ್ನತ ಸ್ಥಿತಿಗೆ ತರಲಿಲ್ಲ. ನನ್ನ ಸ್ವಂತ ಪ್ರಯತ್ನ ಮತ್ತು ಹೋರಾಟದಿಂದ ನಾನೀಸ್ಥಿತಿಯಲ್ಲಿದ್ದೇನೆ." ಎಂದು ಹೇಳಿಕೊಂಡಿದ್ದಾರೆ.

ಸರ್ವಪಳ್ಳಿಯವರು ಒಳ್ಳೆಯ ದೇಶಭಕ್ತರು. ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸದಿದ್ದರೂ, ಉತ್ತಮ ಪ್ರಜೆಗಳನ್ನು ನಿರ್ಮಾಣ ಮಾಡುವುದರಲ್ಲಿ ಆಸಕ್ತರಾದರು. ಸ್ವದೇಶವನ್ನು ಬಿಟ್ಟು ಬೇರೆ ಕಡೆಯಲ್ಲಿರಲು ಇವರು ಬಯಸುವುದಿಲ್ಲ. ಮತ್ತೊಬ್ಬರಿಗೆ ಅಧೀನವಾಗಿರುವ ಮನೋವೃತ್ತಿಯೂ ಇವರದಲ್ಲ. ಈ ಗುಣವೇ ಇವರನ್ನು ಅತ್ಯುನ್ನತ ಸ್ಥಿತಿಗೆ ತಂದಿತೆಂದು ಹೇಳಬಹುದು. ಸಾಲದುದಕ್ಕೆ ರಾಧಾಕೃಷ್ಣನ್ನರು ಒಳ್ಳೆಯ ದೈವಭಕ್ತರು. ಇದಕ್ಕೆ ಅವರು ಬೆಳೆದ ಸನ್ನಿವೇಶ ಪ್ರಭಾವವೇ ಕಾರಣ. ಎಲ್ಲಾ ಧರ್ಮಗಳನ್ನೂ ಅರಿತಿದ್ದರೂ ಕೂಡ, ಕಡಜದಂತೆ ಎಲ್ಲವನ್ನೂ ತನ್ನಂತೆ ಮಾಡಿಕೊಳ್ಳುವ ನಿಶ್ಚಲವಾದ ಮನಸ್ಸು ಇವರದು. ವಿಗ್ರಹಾರಾಧನೆಯಲ್ಲಿ ಇವರಿಗೆ ನಂಬಿಕೆಯಿದೆ.

ಒಳಬಾಳಿಗೆ ಧಾರ್ಮಿಕ ವಿಷಯವು ನಿಜವಾಗಿಯೂ ಸಂಬಂಧಿಸಿದುದು. ಅದು ಅತ್ಯಗತ್ಯವಾದುದು. ಆಧ್ಯಾತ್ಮಿಕ ಭಾವನೆಯು ಮಾನವನ ಬಾಳನ್ನು ಉತ್ತಮತೆಗೆ ಎತ್ತುತ್ತದೆ. ಕೆಲವು ವೇಳೆ ಅರ್ಥವಿಲ್ಲದೆ ಕುರುಡು ಭಾವನೆಯಲ್ಲಿ ಆಚರಿಸುವುದರಿಂದ ಅದು ಕೀಳುದೆಸೆಗೂ ತುಳಿಯುತ್ತದೆ. ಆದುದರಿಂದ ನಿಜವಾದ ಧರ್ಮವೆಂಬುದು ಅವರವರ ಮನಸ್ಸಿನಲ್ಲಿಯೇ ತೀರ್ಮಾನವಾಗಬೇಕು. ಅದಿಲ್ಲದೆ ನಮ್ಮಲ್ಲಿ ಬಹಳ ಮಂದಿ ನಮಗೆ ನಾವೇ ಮೋಸಮಾಡಿಕೊಳ್ಳುತ್ತಿದ್ದೇವೆ. ಹಾಗಾಗಬಾರದು. ವಿವೇಚಿಸಬೇಕು. ಎಲ್ಲಕ್ಕಿಂತ ಮಿಗಿಲಾಗಿ ಮನುಷ್ಯನು ತನ್ನನ್ನು ತಾನು ಅರ್ಪಿಸಿಕೊಳ್ಳುವುದನ್ನು ಕಲಿಯಬೇಕು. ಆಗ ಎಲ್ಲವೂ ಸರಿಯಾಗುತ್ತದೆ ಎಂದು ಹೇಳುತ್ತಾರೆ.

ದುರ್ಬಲರಲ್ಲಿ, ಅಜ್ಞಾನಿಗಳಲ್ಲಿ, ಕರುಣೆಯನ್ನು ತೋರಬೇಕು. ಸಹಾನುಭೂತಿಯನ್ನು ತೋರಬೇಕು. ಬಾಳಿನಲ್ಲಿ ಕಷ್ಟಬಂದಾಗ, ನೋವಾದಾಗ, ಮನಸ್ಸಿಗೆ ಜಯವನ್ನು ಪ್ರದರ್ಶಿಸಬೇಕು. ವ್ಯಥೆಯು ಹೆಚ್ಚಿದಂತೆ ದೇವರನ್ನು ಪ್ರಾರ್ಥಿಸಬೇಕು.

ಇವರು ಸಾಮಾನ್ಯವಾಗಿ ಎಲ್ಲಾ ಯಾತ್ರಾಸ್ಥಳಗಳಿಗೂ, ಎಲ್ಲಾ ದೇವಾಲಯಗಳಿಗೂ ಹೋಗಿದ್ದಾರೆ. ಅದು ಶೈವ ದೇವಸ್ಥಾನವಾಗಲೀ! ವಿಷ್ಣುದೇವಾಲಯವಾಗಲೀ! ಬುದ್ಧನ ಸ್ತೂಪವಾಗಲೀ! ಚರ್ಚಾಗಲೀ! ಮಸೀದಿಯಾಗಲೀ! ಏಕದೇವತ್ವವನ್ನೇ ಭಾವಿಸಿ ಪೂಜಿಸುವರು ಅಲ್ಲಲ್ಲಿನ ಪದ್ಧತಿಗನುಗುಣವಾಗಿ ಆಚರಿಸುವವರು. "ಜೀವನದ ಪರಿಪೂರ್ಣತೆಯೇ ಭಕ್ತಿ! ಯಾರು ಭಕ್ತಿಭಾವ ರಹಿತರಾಗಿರುತ್ತಾರೋ ಯಾರು ಧರ್ಮದ ಸೌಲಭ್ಯಗಳನ್ನು ಕಳೆದುಕೊಂಡಿರುತ್ತಾರೋ ಅಂತಹವರು ಮಾನವ ರಾಗಿರಲು ಅಪೂರ್ಣರು" ಎಂದು ಹೇಳುತ್ತಾರೆ.

"ಪ್ರತಿಯೊಬ್ಬನ ಕಾರ್ಯದಲ್ಲೂ ಭಗವಂತನ ಕೈವಾಡವಿದೆ ಮಾನವನು ತನ್ನ ಮನಸ್ಸಿನಲ್ಲಿ ನಾನಾ ರೀತಿಮುಂದಾಲೋಚನೆಗಳನ್ನೂ. ಸಿದ್ಧತೆಗಳನ್ನೂ ಮಾಡಿಕೊಳ್ಳಬಹುದು ಆದರೆ, ಒಂದು ಅದೃಶ್ಯವಾದ ಶಕ್ತಿಯು ಪ್ರತಿಗಳಿಗೆಯೂ ಮಾರ್ಗದರ್ಶನ ಮಾಡುತ್ತಿರುತ್ತದೆ. ಹಾಗಿಲ್ಲದಿದ್ದರೆ, ಮಾನವನು ಯಾವ ಕಾರ್ಯವನ್ನೂ ಮಾಡಲಾರನು." ಎಂದು ಎಲ್ಲಕ್ಕೂ ಭಗವಂತನನ್ನು ನಂಬಿದ್ದಾರೆ. ಆದರೆ ಬೂಟಾಟಿಕೆಯ ಪೂಜೆಯನ್ನು ಅವರು ನಂಬುವುದಿಲ್ಲ. ದೇವರಲ್ಲಿ ದೃಷ್ಟಿಯನ್ನಿಡಬೇಕಾದರೆ. ನಿರ್ಮಲವಾದ ಮನಸ್ಸು ಬೇಕು ಎಂದು ಅವರ ಭಾವನೆ.

ಸರ್ವಪಳ್ಳಿಯವರಿಗೀಗ 76 ವರ್ಷಗಳು ತುಂಬುವುದರಲ್ಲಿದೆ ಇಲ್ಲಿಯ ತನಕ ಅವರು ತಮ್ಮ ಭಾಗದ ಕರ್ತವ್ಯವನ್ನು ಎಂದೂ ನಿರುತ್ಸಾಹಿಯಾಗಿ ಮಾಡಲಿಲ್ಲ. ಅವರು ಉಪಾಧ್ಯಾಯರಾಗಿದ್ದಾಗಿನಿಂದ ರಾಷ್ಟ್ರಪತಿಯಾಗಿರುವ ಇಲ್ಲಿಯ ತನಕ ನೋಡಿದ್ದೇವೆ. ಎಲ್ಲಿಯೂ ಅವರಲ್ಲಿ ತಾತ್ಸಾರ ಮತ್ತು ಆಲಸ್ಯಭಾವನೆಯನ್ನು ನಾವು ಕಾಣಲಾರೆವು. ಇವರಿಗೆ ಯಾವ ಕ್ಷೇತ್ರದಲ್ಲೂ ಸಹಾಯ ಮಾಡುವ ಅವಕಾಶವು ಇವರ ಕಾರ್ಯದರ್ಶಿಗೆ ದೊರೆಯಲಿಲ್ಲವೆಂಬುದು ಆಶ್ಚರ್ಯವೇನಲ್ಲ. "ಯಾವ ನಾಯಕನು ತನ್ನ ಕರ್ತವ್ಯದಲ್ಲಿ ಆಲಸ್ಯದಿಂದ ಮೈಮರೆಯುವನೋ, ಅವನು ತನ್ನ ಅನುಯಾಯಿಗಳನ್ನು ತಪ್ಪುದಾರಿಗೆಳೆಯುತ್ತಾನೆ." ಎಂದು ತಾವೇ ಹೇಳಿರುವ ಮಾತನ್ನು ಪ್ರತಿಗಳಿಗೆಯೂ ಮರೆಯದೇ ಆಚರಿಸುತ್ತಿದ್ದಾರೆ ಒಟ್ಟಿನಲ್ಲಿ ನುಡಿಯಂತೆ ಇವರ ನಡೆ. ನಡೆಯಂತೆ ಇವರ ನುಡಿ.

# ವಿಶ್ವ ವೇದಾಂತಿ

ಸರ್ವಪಳ್ಳಿ ರಾಧಾಕೃಷ್ಣನ್ನರ ಕೀರ್ತಿಯು ಲೋಕದಲ್ಲೆಲ್ಲಾ ಹರಡಲು ಮತ್ತು ಅವರೊಬ್ಬ ವಿಶ್ವವ್ಯಕ್ತಿಯಾಗಲು, ಅವರಲ್ಲಿರುವ ಆಳವಾದ ಪಾಂಡಿತ್ಯವೇ ಕಾರಣ ಹಿಂದೂದೇಶದಲ್ಲಿ ಹುಟ್ಟಿ ಬೆಳೆದು ವ್ಯಾಸಂಗವನ್ನು ಮಾಡಿದರು. ಹಿಂದೂ ಧರ್ಮದ ಗ್ರಂಥಗಳಾದ ಚತುರ್ವೇದಗಳನ್ನೂ, ಉಪನಿಷತ್ತು ಸ್ಮೃತಿ ಶ್ರುತಿ, ನಾರದ ಸೂತ್ರ, ಬ್ರಾಹ್ಮಣ ಮತ್ತು ಆರಣ್ಯಕಗಳನ್ನು ಅಧ್ಯಯನ ಮಾಡಿದರು. ವ್ಯಾಪಾರಿಗಳಿಂದ ರಚಿತವಾದ ಪುರಾಣಗಳನ್ನೆಲ್ಲ ಕರತಲಾಮಲಕ ಮಾಡಿಕೊಂಡರು. .ಯಾಜ್ಞವಲ್ಕ್ಯ, ವಶಿಷ್ಠ, ಗಾರ್ಗಿಯ ಗೌತಮ, ಮುಂತಾದ ಋಷಿವರ್ಯರ ಮತ್ತು ಸಿದ್ಧಪುರುಷರ ಅಭಿಮತಗಳನ್ನು ಮನನ ಮಾಡಿಕೊಂಡರು. ಅನಂತರ ಹಿಂದೂ ಧರ್ಮದಿಂದ ಪ್ರಚೋದಿಗಳಾದ ಜೈನ ಮತ್ತು ಬೌದ್ಧ ಧರ್ಮಗಳನ್ನು ಶ್ರದ್ಧೆಯಿಂದ ವ್ಯಾಸಂಗಮಾಡಲು ಹಿಂಜರಿಯಲಿಲ್ಲ. ಕಾಲಾನಂತರ ಬಂದ ತುಳಸೀದಾಸ, ರಾಮದಾಸ, ಕಬೀರದಾಸ, ಗುರುನಾನಕ್, ಶಂಕರ, ರಾಮಾನುಜ ಮತ್ತು ಮಧ್ವಾಚಾರ್ಯರ ಉಪದೇಶಗಳನ್ನು ಸಂಗ್ರಹಿಸಿದರು. ಇಷ್ಟಲ್ಲದೆ ಕಾಳಿದಾಸಾದಿ ಕವಿಪುಂಗವರ ಗ್ರಂಥಗಳಲ್ಲಿರುವ ತತ್ವ ಶಾಸ್ತ್ರವನ್ನು ಪರಿಚಯ ಮಾಡಿಕೊಂಡಿದ್ದಾರೆ.

ಇವಿಷ್ಟೂ ಭಾರತೀಯ ಧರ್ಮ ತತ್ವಗಳನ್ನು ನಿರೂಪಿಸತಕ್ಕವು. ಇಷ್ಟರಿಂದಲೇ ಅವರ ಮನಸ್ಸು ತೃಪ್ತಿಗೊಳ್ಳಲಿಲ್ಲ. ಪರದೇಶಗಳ, ಪರಧರ್ಮಗಳ ಹುರುಳೇನೆಂದು ತಿಳಿಯಲು ಉತ್ಸುಕರಾದರು. ಅವರ ವಿದ್ಯಾರ್ಥಿ ದೆಸೆಯಲ್ಲಿಯೇ ಕ್ರೈಸ್ತಮತದ ಪ್ರಗತಿ ಮತ್ತು ಅದು ಹಿಂದೂ ಧರ್ಮದಮೇಲೆ ಮಾಡುತ್ತಿದ್ದ ಪೈಪೋಟಿಯು ಇವರ ಮನಸ್ಸನ್ನು ಕೆರಳಿಸಿ ಇವರೊಬ್ಬರು ತತ್ವಜ್ಞಾನಿಯಾಗುವಂತೆ ಪ್ರಚೋದನೆಗೊಳಿಸಿತೆಂದು ನಾವು ಭಾವಿಸಿದರೆ ತಪ್ಪಾಗದು. ಆದುದರಿಂದಲೇ ಆ ಧರ್ಮದ ಮರ್ಮವೇನು ? ಅನ್ಯದೇಶೀಯರು ಮತ್ತು ಪರಧರ್ಮೀಯರು ತಮ್ಮ ತಮ್ಮ ಧರ್ಮಗಳ ವೈಶಿಷ್ಟ್ಯಗಳನ್ನು ಹೊಗಳುತ್ತಿರುವುದರಲ್ಲಿ ಹುರುಳೇನು? ಎಂಬುದನ್ನು ಪರಿಶೋಧಿಸಲು

ಪ್ರಯತ್ನಪಟ್ಟರು. ಹಾಗೆ ಮಾಡಲು ಪ್ರತಿಯೊಂದು ಧರ್ಮಗ್ರಂಥಗಳನ್ನೂ ಅವಕ್ಕೆ ಸಂಬಂಧಪಟ್ಟ ಸಾಹಿತ್ಯಗಳನ್ನೂ ಅಭ್ಯಾಸ ಮಾಡಬೇಕಾಯಿತು.

ರೋಮನ್ ಚಕ್ರಾಧಿಪತ್ಯದಲ್ಲಿದ್ದ ಪೂರ್ವದ ಪಾಗನ್ ಮತದ ನಿಯಮ ಗಳನ್ನೂ, ಇಸ್ರೇಲಿಯಾದ ಜುಡಾಯಿಸಮನ್ನೂ, ಅನಂತರ ಬಂದ ಹಿಬ್ರೋಪಿನ ಮತ್ತು ಜೀಸಸ್ಸಿನ ಬೈಬಲ್ಲುಗಳನ್ನೂ ಮನನ ಮಾಡಿದರು. ಪ್ಯಾಲಸ್ಟೈನಿನಲ್ಲಿ ಹುಟ್ಟಿದ ಕ್ರೈಸ್ತಮತವು, ಕಾಲಕ್ರಮೇಣ ಕ್ಯಾಥೋಲಿಕ್ ಮತ್ತು ಪ್ರಾಟೆಸ್ಟೆಂಟ್ ಎಂದು ಇಬ್ಭಾಗವಾದ ಮೇಲೆ, ಬೆಳೆದಿರುವ ಅವೆರಡರ ಸಾಹಿತ್ಯವನ್ನೂ ಅಧ್ಯಯನ ಮಾಡಿದರು. ಅರೇಬಿಯಾದಲ್ಲಿ ಹುಟ್ಟಿದ ಇಸ್ಲಾಮ್ ಧರ್ಮದ ಖುರಾನನ್ನೂ, ಅದಕ್ಕೆ ಸಂಬಂಧಪಟ್ಟಿರುವ ಸಾಹಿತ್ಯವನ್ನೂ ನೋಡಿದರು. ಪರ್ಶಿಯಾದಲ್ಲಿ ಹೆಲ್ಲಿನಿಕ್, ಡೂಆಲಿಸಂ ಮತ್ತು ಪಾರ್ಸಿ ಮತಗಳನ್ನೂ ಇವರು ಕೈಬಿಟ್ಟಿಲ್ಲ. ಇರಾನಿನ ಜೊರಾಷ್ಟ್ರ ಮತವನ್ನೂ, ಚೀಣಾದ ಕಾನ್‌ಫ್ಯೂಷಿಯಸ್ಸಿನ ಮತ, ಟಾವೋ ಮತ, ಬೌದ್ಧಮತಗಳನ್ನೂ ಮನನ ಮಾಡಿಕೊಂಡಿದ್ದಾರೆ. ಜಪಾನಿನ ಷಿಂಟೋ ಧರ್ಮ ಮತ್ತು ನೀಗ್ರೋ ಧರ್ಮಗಳನ್ನೂ ಕೂಡ ಇವರು ತಾತ್ಸಾರ ಮಾಡದೆ, ಅಧ್ಯಯನ ಮಾಡಿದರು. ಅವುಗಳ ಹುಟ್ಟು ಮತ್ತು ಬೆಳವಣಿಗೆ ಗಳನ್ನೆಲ್ಲವನ್ನೂ ಅರಿತರು.

ಪ್ಲೇಟೋ, ಪ್ಲಾಟಿನಸ್, ಸಂತಪಾಲ್, ಅರಿಸ್ಟಾಟಲ್, ಸಾಕ್ರಟೀಸ್, ಗೋಥೆ, ಕಾರಲ್‌ಮಾರ್ಕ್ಸ್, ಮುಂತಾದವರ ದಾರ್ಶನಿಕ ಗ್ರಂಥಗಳನ್ನೆಲ್ಲಾ ಅಧ್ಯಯನಮಾಡಿ ಆಧುನಿಕ ತತ್ವಜ್ಞಾನಿಗಳಾದ ಐನ್‌ಸ್ಟೀನ್ ಅಗಸ್ಟಿನ್, ವೈಟ್‌ಹೆಡ್, ಬರ್ಗಸನ್, ಹೆಗಲ್, ಎಫ್. ಹೆಚ್. ಬ್ರಾಡ್ಲೆ, ಹರ್‌ಬರ್ಟ ಸ್ಪೆನ್ಸರ್, ಸ್ಕೆಲರ್ ಮುಂತಾದ ಸಮಕಾಲೀನರೆಲ್ಲರ ಅಭಿಪ್ರಾಯಗಳನ್ನೂ ಅಭ್ಯಸಿಸಿದರು. ಇಂದೂ ಹೊರಬರುತ್ತಿರುವ ಹೊಸ ಹೊಸ ದಾರ್ಶನಿಕ ಸಂಶೋಧನೆಗಳನ್ನು ಅಧ್ಯಯನಮಾಡಿ, ಇವರ ಹೃದಯವು ಸರ್ವಧರ್ಮಗಳ ಸಮ್ಮೇಳನವಾಗಿದೆ ಎಂದರೆ ಅತ್ಯುಕ್ತಿಯಲ್ಲ.

ಧರ್ಮದ ಬಗೆಗೆ ಅವರು ನೀಡುವ ಅರ್ಥವು ಬಹಳ ವಿಶಾಲ ವಾದುದು. ಧರ್ಮವೆಂಬ ಪದವೇ 'ಧಾರಣ' ಎಂಬುದರಿಂದಾಗಿದೆ. ಪ್ರತಿಯೊಂದು ಜೀವಿಯೂ ಧರಿಸುವಂತಹುದು. ಪ್ರತಿಯೊಂದು ಜೀವಿಗೂ

ತನ್ನದೇ ಆದ ಧರ್ಮವಿದೆ. ಯಾವಾಗ ಮಾನವರು ಜೀವನದಲ್ಲೊದಗಿದ ಘಟನೆಗಳಿಂದ ಅನುಭವಗಳನ್ನು ಹೊಂದುವರೋ ಆಗಲೇ ತತ್ವಜ್ಞಾನವನು ಪಡೆಯುತ್ತಾರೆ. ಆದರೆ, ಆ ತತ್ವವು ಸಮಾಜದ ಕಂಟಕವಾಗಿರಬಾರದು' ಅನ್ಯರ ಅಭ್ಯುದಯಕ್ಕೆ ಅಡ್ಡಿಯಾಗಿರಬಾರದು. ಹಾಗೆ ವ್ಯಕ್ತಿಕವಾಗಿ ಅಭಿವೃದ್ಧಿಯನ್ನು ಸಾಧಿಸಲು ನಮ್ಮ ಪ್ರತಿದಿನದ ಜೀವನದಲ್ಲಿ ಮತ್ತು ಸಾಮಾಜಿಕ ಸಂಬಂಧದಲ್ಲಿ ಗಮನವಿಡಬೇಕಾದ ಅಂಶಗಳ ಮತ್ತು ನಿಯಮ ಗಳ ಅನ್ಯೋನ್ಯ ಒಪ್ಪಂದವೇ ಧರ್ಮ. ಅದಕ್ಕೆ ವಿರುದ್ಧವಾದುದೇ ಅಧರ್ಮ. ಧರ್ಮವು ಜೀವನದಲ್ಲಿ ಹೊಂದಿಕೊಂಡಿರತಕ್ಕದ್ದು. ನಮ ಸ್ವಭಾವಗಳಿಗೆ, ಸಮಾಜಕ್ಕನುಗುಣವಾಗಿ, ಅಲಂಕರಣಮಾಡುವ ಶಕ್ತಿ ಯುಳ್ಳದ್ದು. ಇದು ಮಾನವನ ಜೀವನಕ್ಕೆ ಆಧಾರವಾಗಿರುವ ರೀತಿಗಳಿಗೂ ಉತ್ತಮ ನಡವಳಿಕೆಗಳಿಗೂ, ಮಾಡಬೇಕಾದ ಕರ್ತವ್ಯಗಳಿಗೂ ಒಂದು ರೂಪವನ್ನು ಕೊಡುತ್ತದೆ. ಹಾಗೆ ಕೊಡುವ ರೂಪವು ದಿನ ದಿನಕ್ಕೆ ವಿಶಾಲ ವಾದ, ಹಾಗೂ ಉನ್ನತವಾದ ಭಾವನೆಗಳನ್ನು ಮನಸ್ಸಿಗೆ ನೀಡತಕ್ಕು ದಾಗಿರಬೇಕು.

ಮಾನವನ ಜೀವನದ ಗುರಿಯು ಆದಿಯಿಂದಲೂ ಶ್ರೇಷ್ಠತೆಯ ಕಡೆಗೆ ಸಾಗುತ್ತಿದೆ. ವಿಶ್ವಸಂಬಂಧದ ವಿಕಾಸದಲ್ಲಿ ದಿನದಿನಕ್ಕೆ ಹೊಂದಿ ಕೊಳ್ಳುತ್ತಿದೆ. ಆದಿ ಕಾಲದಲ್ಲಿ ಮಾನವನು ಪ್ರಾಣಿಯಂತಹ ಮನಸ್ಸನು ಹೊಂದಿ ಹೊಟ್ಟೆಯನ್ನು ಹೊರೆಯುತ್ತಿದ್ದನು. ಕ್ರಮೇಣ ಪ್ರಾಣಿಯ ಮನಸ್ಸಿನಿಂದ ಆವನ ಮನಸ್ಸು ಬುದ್ಧಿಯನ್ನಾಶ್ರಯಿಸಿತು ಬುದ್ಧಿಯು ನಮ್ಮ ಪ್ರಕೃತಿಯಿಂದ ಪ್ರಚೋದನೆಯನ್ನು ಹೊಂದಿ ಜ್ಞಾನೋದಯವನು ಸದಾ ಪಡೆಯುತ್ತಿದೆ ಮಾನವನಿಗೂ ಮಿಗಿಲಾದ ಶಕ್ತಿಯೊಂದು ಅಗೊ ಚರವಾಗಿದೆ ಆಶಕ್ತಿಯೇ ದೇವರು. ಅವನೇ ನಮ್ಮ ಸೃಷ್ಟಿ, ಪಾಲನೆ ಮತ್ತು ಲಯಗಳಿಗೆ ಕಾರಣಕರ್ತನು. ಅವನನ್ನೊಲಿಸಿಕೊಳ್ಳಲು, ಪ್ರಾರ್ಥನೆ ಮತ್ತು ಪೂಜಾದಿಗಳನ್ನು ಮಾಡಬೇಕೆಂಬ ಭಾವನೆಯು ಬಂದಿತು. ಅನಂತರ ಮಾನವನ ಬುದ್ಧಿಯು ಆಧ್ಯಾತ್ಮಿಕ ಸ್ವಾತಂತ್ರ್ಯವನ್ನು ಪಡೆ ಯಲು ಪ್ರಯತ್ನಿಸುತ್ತಿದೆ. ಇದೆಲ್ಲವೂ ಆಯಾ ಕಾಲಕ್ಕನುಗುಣವಾಗಿ, ಅಂತಃ ಸ್ಫೂರ್ತಿಯನ್ನು ಪಡೆದು, ಅರಿವಿನಿಂದ ಮತ್ತು ಪರ್ಯಾಲೋಚನೆ

ಯಿಂದ ಮತಿಯು ಬೆಳೆಯುತ್ತಿರುವುದರ ಸೂಚನೆಯಾಗಿದೆ. ಇನ್ನೂ ಉತ್ತಮ ಮಟ್ಟವನ್ನು ಮುಟ್ಟಲು ಪ್ರಯತ್ನಿಸುತ್ತಿದೆ.

ಆದುದರಿಂದಲೇ ಮಾನವನು ಇತರ ಪ್ರಾಣಿಗಳಿಗಿಂತಲೂ ವೈಶಿಷ್ಟ್ಯಪೂರ್ಣನು. ಪ್ರತಿಯೊಬ್ಬರಲ್ಲಿಯೂ ಚೈತನ್ಯದ ಕಿಡಿಯಿದೆ. ಎಲ್ಲರೂ ಅಮೃತ ಪುತ್ರರೆಂದು ಧರ್ಮಗ್ರಂಥಗಳು ತಿಳಿಸುತ್ತವೆ. ಕೆಲವರಲ್ಲಿ ಆ ಚೈತನ್ಯವು ಗುಪ್ತವಾಗಿರುತ್ತದೆ. ಮತ್ತೆ ಕೆಲವರಲ್ಲಿ ಅದು ಸಂದರ್ಭಾನುಸಾರ ಹೊರ ಬರುತ್ತದೆ. ಅಷ್ಟೇ ವ್ಯತ್ಯಾಸ. ಇದರಿಂದ ಮಾನವನು ಭೂಮಿಯು ಮತ್ತು ಸ್ವರ್ಗಗಳ ಸಂಪರ್ಕವುಳ್ಳವನೆಂದೂ ದೈವಾಂಶ ಸಂಭೂತನೆಂದೂ ಹೇಳುವರು ಮನುಷ್ಯನು ಪ್ರಯತ್ನದಿಂದ ಸ್ವರ್ಗವನ್ನು ಸಂಪಾದಿಸಬಲ್ಲನು. ಅವನಲ್ಲಿ ಅಂತಹ ಒಂದು ಮಹತ್ವವಿದೆ ಎಂದು ನಮ್ಮ ಉಪನಿಷತ್ತುಗಳು ಹೇಳುವಂತೆಯೇ ಪರದೇಶದ ಪ್ಲೇಟೋ ಮತ್ತು ಫಿಲೋ ಮುಂತಾದ ದಾರ್ಶನಿಕರು "ಮನುಷ್ಯನು ದಿವ್ಯವಾದ ಸಂತತಿ" ಎನ್ನುತ್ತಾರೆ ಆದರೆ ಆ ಚೈತನ್ಯವು ಆಧ್ಯಾತ್ಮಿಕವಲ್ಲದ ವಿಷಯಗಳಿಂದ ಮುಚ್ಚಲ್ಪಟ್ಟಿದೆ. ಕಣ್ಣಿಗೆ ಗೋಚರವಾದ, ಚಿತ್ತ ಗೋಚರವಾದ ವಿಷಯುಗಳಲ್ಲಿ, ಬುದ್ಧಿರಹಿತವಾಗಿ, ಯೋಚನಾರಹಿತವಾಗಿ, ಅನುಭವವಿಲ್ಲದೆ, ಆ ಚೈತನ್ಯವನ್ನು ನಾವು ವ್ಯಯಮಾಡಿಕೊಳ್ಳುತಿದ್ದೇವೆ. ಇದರಿಂದ ಮಾನವ ಸ್ವಾತಂತ್ರ್ಯವು ವ್ಯಕ್ತಪಡುವುದಿಲ್ಲ. ನಮ್ಮ ಜೀವಿತದ ಗುರಿಯೆಲ್ಲವೂ ವಿಷಯಾಶಕ್ತಿಯಿಂದ ಕೂಡಿದೆ. ಇದು ಪ್ರಕೃತಿಗೂ ಮಾನವ ಜೀವಿತಕ್ಕೂ ವಿರೋಧವೆಂದಲ್ಲ ಚೈತನ್ಯದಿಂದ ಪ್ರಕೃತಿಯನ್ನು ಹಿಡಿಯಬಹುದು.

ಒಟ್ಟನಲ್ಲಿ ಹೇಳುವುದಾದರೆ ಧರ್ಮದ ಉದ್ದೇಶವು, ನಮ್ಮ ಜೀವನದ, ಶರೀರದ, ಬುದ್ಧಿಯ ಮನಸ್ಸಿನ ಹಾಗೂ ಹೃದಯದ ಕಾರ್ಯಗಳಲ್ಲಿ ಒಂದು ಶಿಸ್ತನ್ನುಂಟುಮಾಡಲು ಸಹಕಾರಿ. ಅದರ ಮಾರ್ಗಗಳು ದೇವರ ಪ್ರಾರ್ಥನೆ ಮತ್ತು ಧ್ಯಾನಗಳು. ಸ್ವಾರ್ಥತೆಯನ್ನು ಬಿಡುವುದರಿಂದ ನಮ್ಮ ವ್ಯಕ್ತಿತ್ವವನ್ನೂ ಹೆಚ್ಚಿಸಿಕೊಳ್ಳಬಹುದು. ಹೀಗೆ ಮಾಡುವುದರಿಂದ ಧರ್ಮವು ಮನುಷ್ಯನನ್ನೂ ಮತ್ತು ದೇವರನ್ನು ಪ್ರತಿಬಿಂಬಿಸುವ ಸಾಧನವಾಗುತ್ತದೆ.

ಹೀಗೆ ಮಾನವರಿಗೆ ಅನುಭವ ಮೂಲವಾದ ಧರ್ಮ ಸಂಕಲ್ಪಗಳು ಎಲ್ಲಾ ದೇಶೀಯರಿಗೂ ಅವರವರ ಸ್ಥಳದಲ್ಲಿಯೇ ದೊರೆತಿವೆ ಎಲ್ಲರೂ

ದೇವರ ವಿಷಯದಲ್ಲಿ ನಂಬಿಕೆಯನ್ನಿಟ್ಟದ್ದಾರೆ. ಅವರು ಅದನ್ನು ಹೇಳುವ ಪದ ಬೇರೆ. ಎಲ್ಲಾ ಮಾನವರಿಗೂ ಅವರವರ ಇಷ್ಟಾನುಸಾರವಾಗಿ ದೇವರನ್ನು ಆರಾಧಿಸುವುದಕ್ಕೆ ಸ್ವಾತಂತ್ರ್ಯವಿದೆ. ದೇವರನ್ನು ಒಲಿಸಿಕೊಳ್ಳಲು ನಮ್ಮ ಹಿಂದೂ ಧರ್ಮವು ಭಕ್ತಿಯನ್ನು ಸೂಚಿಸುವಂತೆ ಮಹಮದೀಯರು, ಕ್ರೈಸ್ತರು ಮತ್ತು ಯಹೂದ್ಯರೂ ಕೂಡ ಭಕ್ತಿಮಾರ್ಗಕ್ಕೆ ಹೆಚ್ಚಿನ ಮಹತ್ವವನ್ನು ಕೊಡುವರು. ಹಿಂದೂಗಳು ಜಪವನ್ನು ಮಾಡಿದರೆ, ಬುದ್ಧರು ಬುದ್ಧನ ಸ್ಮೃತಿಯನ್ನೂ ಮಹಮದೀಯರು ದೇವರ ನಾಮಗಳನ್ನೂ, ಕ್ರೈಸ್ತರು ಕ್ರಿಸ್ತನ ಕೀರ್ತನೆಗಳನ್ನೂ ಹೇಳುವರು. ನಮ್ಮ ಭಗವದ್ಗೀತೆಯು ತಿಳಿಸುವ ನಿಷ್ಕಾಮಕರ್ಮವನ್ನು ಎಲ್ಲಾ ಧರ್ಮಗಳೂ ತಿಳಿಸುತ್ತವೆ.

ಮಾನವನು ತನ್ನ ಸಚ್ಚಾರಿತ್ರ್ಯದಿಂದ, ಸದ್ಭಕ್ತಿಯಿಂದ ದೇವತ್ವವನ್ನು ಹೊಂದಬಹುದು. 'ದೇವರು ನಮ್ಮ ಆತ್ಮದಲ್ಲಿಯೇ ಇದ್ದಾನೆ. ಅದನ್ನು ತಿಳಿಯಲು ಅಂತರ್ಜ್ಞಾನಬೇಕು'— ಎಂದು ಹಿಂದೂಗಳು ಹೇಳುವ ಮಾತನ್ನು ಬೌದ್ಧಮತವು 'ಪ್ರತಿಯೊಬ್ಬನೂ ಬುದ್ಧನಾಗಬಲ್ಲ, ಬೋಧಿಸತ್ವನಾಗಬಲ್ಲ' ಎನ್ನುತ್ತದೆ ಯಹೂದ್ಯರು 'ಮಾನವನ ಆತ್ಮವು ಭಗವಂತನ ಸೊಡರು' ಎನ್ನುತ್ತಾರೆ. ಯೇಸುವು 'ದೇವರ ರಾಜ್ಯವು ನಿಮ್ಮೊಳಗೇ ಇದೆ' ಎನ್ನುತ್ತಾನೆ. ಮಹಮದನು 'ನಿಮ್ಮ ರಕ್ತನಾಳಕ್ಕಿಂತಲೂ ಹತ್ತಿರದಲ್ಲಿ ದೇವರಿದ್ದಾನೆ' ಎನ್ನುತ್ತಾನೆ.

ಹಾಗೆ ನಾವು ನಮ್ಮ ಆತ್ಮವನ್ನು ತಿಳಿಯಬೇಕಾದರೆ, ನಮ್ಮ ಉಪನಿಷತ್ತುಗಳು ಹೇಳುವಂತೆ, ಕಾಮ, ಕ್ರೋಧ ಮತ್ತು ಲೋಭಗಳಿಂದ ಬಿಡುಗಡೆಯನ್ನು ಹೊಂದಬೇಕು. ಅದನ್ನು ಬುದ್ಧನು ನಿರ್ವಾಣವೆನ್ನುತ್ತಾನೆ. ಅದೇ ಅಭಿಪ್ರಾಯವನ್ನೇ ಮಹಮದನೂ ತಿಳಿಸುವನು. ತೀರ್ಥಂಕರನು ಆತ್ಮವನ್ನೇ ಜಯಿಸಿ ಜಿನನಾಗಿದ್ದಾನೆ. ಮನುಷ್ಯನು ಇವುಗಳನ್ನು ಜಯಿಸಬೇಕಾದರೆ ತಾಳ್ಮೆಯನ್ನು ಅಭ್ಯಾಸ ಮಾಡಿಕೊಳ್ಳಬೇಕು.

ನಮ್ಮ ವೇದಗಳು ಸನಾತನವಾದವುಗಳೆಂದು ನಾವು ಹೇಗೆ ಹೇಳುತ್ತೇವೆಯೋ ಹಾಗೆಯೇ ಯಹೂದ್ಯರು ಮೋಸೆಸ್ ಸಂಪ್ರದಾಯವನ್ನೂ, ಇಸ್ಲಾಮರು ಖುರಾನನ್ನೂ, ಕ್ರೈಸ್ತರು ಬೈಬಲ್‌ನ್ನೂ ಸನಾತನವಾದುವು

ಗಳೆಂದೂ, ದೇವರಿಂದ ದೊರೆತವುಗಳೆಂದೂ, ಅವಿನಾಶಿಯಾದುವುಗಳೆಂದೂ ಹೇಳುವರು.

ಅವರವರ ಧರ್ಮಗಳು ಅವರವರಿಗೆ ಪವಿತ್ರವಾದುವುಗಳು. ಆದರೂ ಅವುಗಳೆಲ್ಲದರಲ್ಲೂ ವಿಶ್ವಕ್ಷೇಮ ಮತ್ತು ಮಾನವ ಕುಲವನ್ನುದ್ಧಾರ ಮಾಡುವ ರೀತಿಗಳಿವೆ. ಜೀಸಸ್ಸನು ತಮ್ಮ ಬೈಬಲ್ಲು ಮಾನವರೆಲ್ಲರಿಗೂ ಸೇರಿದುದು ಎನ್ನುತ್ತಾನೆ. ಮಹಮದನು ಮಾನವ ಕುಲದಲ್ಲಿ ಸಹೋದರ ಭಾವನೆಯನ್ನೂ ಒಗ್ಗಟ್ಟನ್ನೂ ಉಂಟುಮಾಡುವುದಕ್ಕಾಗಿ ಖುರಾನ್ ಉತ್ಪನ್ನವಾಗಿದೆ ಎನ್ನುತ್ತಾನೆ. ಜಿನನು ಪ್ರಪಂಚದ ಸಂಸಾರ ಸಾಗರವನ್ನು ದಾಟುವುದಕ್ಕಾಗಿ ಧರ್ಮವೆಂಬುದು ದೋಣಿ ಎನ್ನುತ್ತಾನೆ. ಜೊರಾಷ್ಟ್ರ ಮತವು ಅಹುರಾಮಜ್ದಾ ಮತ್ತು ಅಂಗಾರಮಯಿನ್ಯು ಇವರ ಹೋರಾಟ ದಿಂದ ವಿಶ್ವಸಮ್ಮತವಾದ ಧರ್ಮವು ಹುಟ್ಟಿತು ಎಂದು, ಅವರ ಮುಖ್ಯ ಗ್ರಂಥವಾದ ಅವೆಷ್ಟಾದಲ್ಲಿ ಹೇಳಲ್ಪಟ್ಟಿದೆ.

ಒಟ್ಟಿನಲ್ಲಿ ಎಲ್ಲಾ ಧರ್ಮಗಳ ಸಾರವೂ ಒಂದೇ, ಮೂಲತತ್ವವೂ ಒಂದೇ ಆಗಿದೆ. ಅಭಯ ಮತ್ತು ಅಹಿಂಸೆಗಳನ್ನೇ ಎಲ್ಲಾ ಧರ್ಮಗಳೂ ಸಾರುವುವು. ಹೆದರಿಕೆಯಿಂದ, ಹಿಂಸೆಯಿಂದ ಮತ್ತು ನಿಂದೆಯಿಂದ ಬಿಡು ಗಡೆಯನ್ನು ಹೊಂದುವುದೇ ಧರ್ಮಗಳೆಲ್ಲದರ ಮೂಲತತ್ವ. ಬುದ್ಧನು ಇದನ್ನು ಪ್ರಜ್ಞೆ ಮತ್ತು ಕರುಣೆ ಎಂದರೆ, ಜೀಸಸ್ಸನು ಸತ್ಯ ಮತ್ತು ಸ್ವಾತಂತ್ರ್ಯ ಎನ್ನುತ್ತಾನೆ. ಎಲ್ಲರಲ್ಲೂ ಪರೋಪಕಾರ ಮತ್ತು ಭೂತದಯೆ ಗಳು ಧರ್ಮಗಳ ಕೇಂದ್ರವಾಗಿ ಪರಿಗಣಿಸಲ್ಪಟ್ಟಿದೆ. ಎಲ್ಲಾದರಲ್ಲೂ ಸತ್ಯ ವಿದೆ. ಎಂಬುದನ್ನು ಸಮರ್ಥಿಸಲು, ಸರ್ವಪಳ್ಳಿಯವರು, ಯಾವ ಇಂಧನ ವಾದರೇನು ಜ್ಯೋತಿಯು ಒಂದೇ ಅಲ್ಲವೇ ? ಹಸುಗಳು ನಾನಾ ಬಣ್ಣದವು ಗಳಾಗಿರಬಹುದು ಹಾಲಿನ ಬಣ್ಣವು ಭಿನ್ನವಾಗಿರುತ್ತದೆಯೇ? ಎಂದು ಉದಾಹರಿಸಿ ಧರ್ಮಗಳ ಹೆಸರು ಭಾಷೆ ಭಿನ್ನವಾಗಿರಬಹುದು ಅವು ತಿಳಿ. ಸುವ ಸತ್ಯವು ಒಂದೇ ಆಗಿದೆ. ಧರ್ಮವು ಅನೇಕ ದ್ವಾರಗಳುಳ್ಳದ್ದು. ಯಾರು ಯಾವ ದ್ವಾರದ ಮೂಲಕ ಹೋದರೂ ಒಂದೇ ಗುರಿಯನ್ನು ತಲುಪುತ್ತಾರೆ. ಆದುದರಿಂದ ಧರ್ಮಗಳೆಲ್ಲದರ ಕರ್ತವ್ಯಗಳು ನಿರರ್ಥಕ ವಾಗುವುದಿಲ್ಲ ಎಂದು ಹೇಳುವರು.

ಧರ್ಮವನ್ನು ಬೋಧಿಸಿದ ಪ್ರವಾದಿಗಳ ಕಾಲಾನಂತರ ಧರ್ಮವು ಸ್ವಾರ್ಥಿಗಳ ಪಾಲಾಗಿ ಸಂಕುಚಿತಾರ್ಥವನ್ನು ಹೊಂದುತ್ತಿದೆ. ಆ ಧರ್ಮದ ಸ್ವಾತಂತ್ರ್ಯವು ಸರ್ವರಿಗೂ ಸಿಕ್ಕದಂತಾಗುತ್ತಿದೆ. ಹೊಸಭಾವನೆಗಳನ್ನು ಕೊಡಲು ಅದರಲ್ಲಿ ಅವಕಾಶವಿರುವುದಿಲ್ಲ. ಕಣ್ಣುಮುಚ್ಚಿಕೊಂಡು ಸಂಪ್ರದಾಯವೆಂದು ಜನತೆಯು ಮುನ್ನಡೆಯುತ್ತಿದೆ ಅದು ಕೂಡದು. ಪ್ರತಿಯೊಂದು ಹೊಸ ಸ್ಪರ್ಧೆಗೂ ಹೊಂದಿಕೊಂಡು ಹೋಗುವಂತೆ ಧರ್ಮದಲ್ಲಿ ವಿಶಾಲವಾದ ಜಾಗವಿರಬೇಕು. ಹೊಸಭಾವನೆಗಳು ದೇಶೀಯರಿಂದ ಬರಲಿ ಅಥವಾ ಹೊರಗಿನಿಂದ ಬರಲಿ ಸತ್ಯವಾದುದಾದರೆ, ನಿಸ್ವಾರ್ಥವಾದುದಾದರೆ, ಅದನ್ನು ಸ್ವೀಕರಿಸಿಕೊಳ್ಳಬೇಕು. ಹಾಗಾಗುವುದಾದರೆ ಆ ಧರ್ಮವು ಅಭಿವೃದ್ಧಿ ಮಾರ್ಗ ಅವಲಂಬಿಸಿದಂತಾಗುತ್ತದೆ. ಹಾಗಿಲ್ಲದಿದ್ದರೆ, ಅದೇ ಧರ್ಮೀಯರಲ್ಲೇ ಒಡಕುಂಟಾಗುತ್ತದೆ. ಅಸಂತುಷ್ಟಿಯುಂಟಾಗುತ್ತದೆ. ಇದರಿಂದ ಆ ಧರ್ಮದ ಬಲವು ಕುಗ್ಗುತ್ತದೆ. ಹೊಸದಾಗಿ ಬಂದ ಸ್ಪರ್ಧೆಗೆ ಪ್ರತಿಬೋಧಿಸಲು ಶಕ್ತಿಯಿಲ್ಲದೆ ಸೋಲುತ್ತದೆ. ಧರ್ಮದ ಸೋಲಿನಿಂದ ಅದರ ಸಾಮಾನ್ಯ ಜನರು ನಿಷ್ಠೆಯನ್ನು ಕೈಬಿಡುತ್ತಾರೆ. ಅಂತಹವರು ಹೊಸದೆಂದು ಹೇಳುವ ಧರ್ಮಕ್ಕೆ ಮಾರುಹೋಗುತ್ತಾರೆ. ಇದರಿಂದ ನಾಸ್ತಿಕವಾದವು ಉಂಟಾಗುವುದೂ ಉಂಟು. ಜನತೆಯು ಧರ್ಮದ ನಂಬಿಕೆಯಲ್ಲಿ ಅಸಿರ್ಥಾರವನ್ನೂ ಹೊಂದುತ್ತಾರೆ. ಇದರಿಂದ ಹಳೆಯ ಧರ್ಮವು ಪೂರ್ಣವಾಗಿ ನಾಶವಾಗುತ್ತದೆ.

ಇಂತಹ ಧರ್ಮಕಲಹಗಳು ಅನೇಕವೇಳೆ ನಡೆದಿರುವುದನ್ನು ನಾವು ಇತಿಹಾಸದಲ್ಲಿ ಕಾಣುತ್ತೇವೆ. ಕ್ರಿ.ಪೂ. 800ರಿಂದ ಕ್ರಿ.ಶ. 200ರ ವರೆಗೆ ಪ್ರಪಂಚದ ಜನಜೀವನದಲ್ಲಿ ಒಂದು ಹೊಸ ಕ್ರಾಂತಿಯಾಯಿತು. ಹೊಸ ಭಾವನೆಗಳು ಹಳೆಯ ಭಾವನೆಗಳಲ್ಲಿ ಬೆರೆಯಲು ಪ್ರಯತ್ನ ಪಟ್ಟವು ಅದಕ್ಕೆ ಅಡ್ಡಿಯಾಯಿತು. ಇದರಿಂದ ಧರ್ಮಗಳ ಹೋರಾಟಗಳು ನಡೆದವು. ಉದಾಹರಣೆಗೆ ಚೀಣಾದಲ್ಲಿ ಲಾವೂತ್ಸೆ ಮತ್ತು ಕಾನ್‌ಫ್ಯೂಸಿಯಸ್, ಇಂಡಿಯಾದಲ್ಲಿ ಉಪನಿಷತ್ತಿನ ಋಷಿಗಳು, ಮಹಾವೀರ ಮತ್ತು ಗೌತಮಬುದ್ಧ, ಇರಾನಿನ ಜೋರಾಷ್ಟ್ರ, ಜುಡಿಷಿಯಾದಲ್ಲಿ ಪ್ರವಾದಿಗಳು, ಗ್ರೀಸಿನಲ್ಲಿ ಪೈತಾಗೊರಾಸ್ ಜ್ಞಾನಿಗಳು, ಸಾಕ್ರಟೀಸ್ ಮತ್ತು ಪ್ಲೇಟೋ ಮುಂತಾದವರು

ಸಂಕುಚಿತವಾದವನ್ನು ಪ್ರತಿಭಟಿಸಿದರು. ಜಗತ್ತಿಗೆ ಮಾನವತ್ವವನ್ನು ತೋರಿದರು.

ಉದಾಹರಣೆಗೆ ಸಾಕ್ರಟೀಸನು ಮರಣಶಯ್ಯೆಯಲ್ಲಿದ್ದು ಹೀಗೆ ಹೇಳುತ್ತಾನೆ "ನಾನು ಅಥೇನಿಯನ್ ಅಲ್ಲ ಅಥವಾ ಗ್ರೀಕನಲ್ಲ. ಆದರೆ ನಾನೊಬ್ಬ ಪ್ರಪಂಚದ ಪೌರ" ಎನ್ನುತ್ತಾನೆ. ಇದರಿಂದ ವಿಶಾಲ ಹೃದಯರಿಗೆ, ಎಲ್ಲಾ ಮಾನವರೂ ಸಹೋದರರೇ!

ಅನಂತರ ಇವೇ ಭಾವನೆಯು ಪ್ಯಾಲಸ್ಟೈನಿನಲ್ಲಿ ಕ್ರಿಸ್ತನಿಂದಲೂ, ಅರೇಬಿಯಾದಲ್ಲಿ ಮಹಮ್ಮದನಿಂದಲೂ ಹೊರಪಟ್ಟಿತು. ಅಲ್ಲಿಯೂ ಪ್ರತಿಭಟನೆಯು ನಡೆಯಿತು ಯೇಸುವಿನ ಕಾರ್ಯವು ಪ್ರತಿಭಟನೆಗೆ ಬಲಿಯಾಯಿತು. ಮಹಮದನು ಪ್ರತಿಬಲವನ್ನು ಕಟ್ಟಿ ಹೋರಾಡಿದನು. ಒಟ್ಟಿನಲ್ಲಿ ಅವೆರಡು ರಾಷ್ಟ್ರದಲ್ಲೂ ಹಳೆಯ ಬೆಳಕು ಮಸುಕಾಯಿತು ಹೊಸಬೆಳಕು ಪ್ರಕಾಶಿಸಿತು. ಆದುದರಿಂದ ಪ್ರತಿಯೊಂದು ಧರ್ಮವೂ ಪರಿವರ್ತನ ಶೀಲವುಳ್ಳದ್ದಾಗಿರಬೇಕೆಂದು ಸರ್ವಪಳ್ಳಿಯವರ ಮತ.

ನಮ್ಮ ಹಿಂದೂ ಸಂಸ್ಕೃತಿಯು ಬಹಳ ಪುರಾತನವಾದುದು. ಇದರ ಆಧಾರಗಳೆಂದರೆ ವೇದಗಳು. ಅವು ಕಾಲ ಕಾಲಕ್ಕೆ ಹೊಸ ಹೊಸ ವಿಷಯಗಳೊಡನೆ ಪಾಪಾರ್ಡನ್ನು ಹೊಂದುತ್ತಿದ್ದರೂ, ಯಾವಾಗಲೂ ಇದ್ದಂತೆಯೇ ಇವೆ. ಈ ವೇದಗಳು ಭಾರತದ ಸಂಪೂರ್ಣ ಆಧ್ಯಾತ್ಮಿಕ ಸಂಪ್ರದಾಯಗಳ ಅವಶ್ಯಕತೆಗಳಿಗನುಗುಣವಾಗಿ, ಬುದ್ಧಿಯ ಪ್ರೇರಣೆಯಿಂದ, ಪೂರ್ಣವಾದ ಅಂತರ್ಯದ ಅನುಭವಗಳಿಂದ ರಚಿತವಾಗಿವೆ. ವೇದವೆಂದರೆ ಜ್ಞಾನ. ಇದರ ತತ್ವಗಳು ಕೇವಲ ಮಾತಿನ ನಂಬಿಕೆಯಾಗಲೀ, ಆದೇಶಗಳಿಂದಾಗಲೀ, ವಿಚಾರವಿಲ್ಲದ ಪ್ರವಚನಗಳಿಂದಾಗಲೀ ಅನುಸರಿಸಿ ಬಂದವುಗಳಲ್ಲ ಋಷಿಗಳ ತಪಸ್ಸಿನಿಂದುಂಟಾದ, ಅತ್ಯುನ್ನತ ಜ್ಞಾನವು, ವಿಮರ್ಶೆಯ ಕುಂಡದಲ್ಲಿ ಸ್ವಚ್ಛಗೊಂಡು ಅನಂತರ ಅವು ಬೋಧಿಸಲ್ಪಟ್ಟವುಗಳು. ಇವುಗಳು ಕೇವಲ ಶಾಸ್ತ್ರ, ತತ್ವ ಅಥವಾ ಪಾರಮಾರ್ಥಿಕ ವಿದ್ಯೆಗಳನ್ನು ಮಾತ್ರ ಬೋಧಿಸತಕ್ಕವುಗಳಲ್ಲ. ಜೀವನದ ಅಗತ್ಯಗಳನ್ನೂ ಪೂರೈಸುವ ರೀತಿ ನೀತಿಗಳನ್ನೂ ತಿಳಿಸುತ್ತವೆ. ಇವುಗಳಲ್ಲಿರುವ ಗೀತೆಗಳು ನಮ್ಮ ಸ್ಮೃತಿಯೊಡನೆ ಸಮಾವೇಶಗೊಳ್ಳುತ್ತವೆ. ಆದುದರಿಂದ ವೇದಗಳು ನಿಶ್ಚಿತವಾದುವುಗಳೂ ಸಹಿತವಾದುವುಗಳೂ ಆಗಿವೆ.

ಪ್ರತಿಯೊಬ್ಬನ ಆಧ್ಯಾತ್ಮಿಕ ಸತ್ಯವು ಧರ್ಮಗ್ರಂಥಗಳಿಗಿಂತಲೂ ಹೆಚ್ಚಿನದು. ಆದುದರಿಂದಲೇ ನಮ್ಮ ವೇದಗಳು ತನ್ನ ನಂತರ ಬಂದ ಶೃತಿ, ಸ್ಮೃತಿ, ಬ್ರಾಹ್ಮಣ, ಆರಣ್ಯಕ, ಉಪನಿಷತ್ತು ಮತ್ತು ಪುರಾಣಗಳಿಗೆ ಮಾನ್ಯತೆಯನ್ನು ನೀಡಿವೆ. ವೇದ ಮತಾನುಯಾಯಿಗಳಲ್ಲದ ಪ್ರವಾದಿಗಳು ತೋರಿದ ಸತ್ಯತೆಯನ್ನು ಪರಿಗಣಿಸಿಕೊಂಡಿದೆ. ಯಾವ ದೀಪವು ಉರಿದರೂ, ಬೆಳಕು ಬರುತ್ತದೆಯಷ್ಟೆ! ಯಾವ ತೋಟದಲ್ಲಿ ಬೆಳೆದರೇನು, ಗುಲಾಬಿಯ ಸೌಂದರ್ಯ ಮತ್ತು ಸುವಾಸನೆಯು ಹಿತವಾಗಿರುತ್ತದೆಯಲ್ಲವೆ? ಎಂಬ ಭಾವನೆಯಿಂದ ಹೊಸದಾಗಿ ಬಂದ ತತ್ವಗಳಿಗೆ ಸಮಾನತೆಯನ್ನು ನೀಡಿದೆ. ಆದಿಯಿಂದಲೂ ಹಿಂದೂ ವೇದಗಳು ವಿಶ್ವಧರ್ಮದತ್ತ ಒಂದು ನೋಟವನ್ನು ಬೀರುತ್ತಿವೆ. ಋಗ್ವೇದವು 'ಸರ್ವ ಮಾನವರೂ ಸಹೋದರರು, ಮೂರು ಲೋಕಗಳೂ ಸ್ವದೇಶವೆಂಬ ಭಾವನೆಯನ್ನು ಹೇಳುತ್ತಿದೆ. ಈ ಭಾವನೆಯಿಂದ ಬಿಳಿಯ, ಕರಿಯ, ಹಿಂದೂ, ಮುಹಮದೀಯ, ಕ್ರೈಸ್ತ, ಜೈನ, ಬೌದ್ಧ ಮುಂತಾದವರೆಲ್ಲರೂ ಸಹೋದರರೇ.

ಧರ್ಮಗಳೆಲ್ಲವೂ ಅಂತ್ಯದಲ್ಲಿ ಮುಕ್ತಿಯನ್ನು ತೋರುವಂತೆ, ವೇದಗಳೂ ಕೂಡ ಮೋಕ್ಷವನ್ನು ಸೂಚಿಸುತ್ತವೆ. ಅದಕ್ಕೆ ಮಾನವನ ಜೀವಿತ ಕಾಲವನ್ನು ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ ಮತ್ತು ಸಂನ್ಯಾಸ ಎಂದು ನಾಲ್ಕು ಆಶ್ರಮ ಧರ್ಮಗಳನ್ನಾಗಿ ವಿಂಗಡಿಸಿದೆ.

ಮೊದಲನೆಯದು ಬ್ರಹ್ಮಚರ್ಯ — ಶೈಶವಾವಸ್ಥೆಯು ಕಳೆದ ಕೂಡಲೆ ಮುಂದಿನ ಬಾಳಿಗನುಗುಣವಾಗಿ ಪೂರ್ವ ಸಿದ್ಧತೆಯನ್ನು ಮಾಡಿಕೊಳ್ಳುವ ಕಾಲವಿದು. ಗುರುಕುಲಗಳನ್ನು ಸೇರಿ ವಿದ್ಯಾರ್ಜನೆಯನ್ನು ಮಾಡುವುದು ಅಥವಾ ಮತ್ತಾವುದಾದರೂ ವೃತ್ತಿರಂಗದಲ್ಲಿ ವೃತ್ತಿಯನ್ನು ಕಲಿಯುವುದು. ಆ ಸಮಯದಲ್ಲಿ ಜೀವನದ ಜಂಜಾಟವಿರ ಕೂಡದು. ಅವನ ಅವಧಾನವೆಲ್ಲವೂ ಕಲಿಯುವಿಕೆಯಲ್ಲಿಯೇ ಕಳೆಯಬೇಕು. ಇದು ಪುರುಷರಿಗೆ ಮಾತ್ರ ಅನ್ವಯಿಸುತಕ್ಕದಲ್ಲ. ಸ್ತ್ರೀಯರಿಗೂ ಅನ್ವಯಿಸುವ ನಿಯಮವುಳ್ಳದ್ದು. ಈ ವೇಳೆಯಲ್ಲಿ ಶರೀರ ಮತ್ತು ಬುದ್ಧಿಗಳೆರಡೂ ಚೆನ್ನಾಗಿ ಬೆಳೆಯುತ್ತವೆ.

ಅನಂತರ ಗೃಹಸ್ಥಾಶ್ರಮ—ಪ್ರಕೃತಿ ನಿಯಮದಂತೆ ವಂಶಾಭಿವೃದ್ಧಿ

ಯನ್ನು ಕೈಗೊಳ್ಳಬೇಕು. ಸಾಯುವವರೆಗೆ ಅವಿವಾಹಿತನಾಗಿದ್ದು, ತನ್ನ ಗುರಿಯನ್ನು ಸಾಧಿಸುವುದು ಬಹಳಕಷ್ಟ ಸಾಧ್ಯವಾದುದು. "ಯಾರು ಮದುವೆಯಿಂದ ಓಡುವರೋ ಅವರು ಯುದ್ಧದಿಂದ ಓಡಿದವರಷ್ಟೇ ಹೇಡಿಗಳು ಎಂದು ಹಿಂದೂಗಳ ಭಾವನೆಯು. ಹಿಂದೂ ದೇವತೆಗಳಿಗೂ ಮದುವೆಯಾಗಿದೆ. ದೇವರು ಅವಿವಾಹಿತರನ್ನು ಆಶೀರ್ವದಿಸುವುದಿಲ್ಲ. ನಮ್ಮ ಧರ್ಮವು ಸಂತಾನಾಭಿವೃದ್ಧಿಗೆ ಹೆಚ್ಚಿನ ಮನ್ನಣೆಯನ್ನು ಕೊಟ್ಟಿದೆ. ಆದುದರಿಂದ ಮದುವೆಯು ಪವಿತ್ರವಾದುದು. ಮದುವೆಯಾದನಂತರ ಗೃಹಸ್ಥಾಶ್ರಮವು ಪ್ರಾರಂಭವಾಗುತ್ತದೆ. ಹೆಂಡತಿ ಮತ್ತು ಮಕ್ಕಳನ್ನು ಆನಂದವಾಗಿ ಸಾಕಬೇಕು. ಬಂಧುಮಿತ್ರರೊಡನೆ ಹಿತವಾಗಿ, ಸಹಾಯಕನಾಗಿ ಬಾಳಬೇಕು.

ಮೂರನೆಯದು ವಾನಪ್ರಸ್ಥಾಶ್ರಮ—ತಮ್ಮ ಮಕ್ಕಳಿಗೆ ಮಕ್ಕಳಾದ ಮೇಲೆ ಅಥವಾ ಶರೀರಕ್ಕೆ ಮುಪ್ಪು ಬಂದಮೇಲೆ ಹೆಂಡತಿಯೊಡನೆ ಕಾಡಿಗೆ ಬಂದುಬಿಡಬೇಕು. ಆಗ ಅವನು ಸಂಸಾರದ ಜಂಜಾಟಗಳನ್ನು ಬಿಡಲು ಪ್ರಯತ್ನಿಸಿ ದೇವರ ಧ್ಯಾನದಲ್ಲಿ ಕಾಲಕಳೆಯಬೇಕು. ಇದರಿಂದ ಮಾನವನು ಇಲ್ಲಿ ಲೌಕಿಕ ವಿಶಯಗಳಿಂದ ಅರ್ಧ ನಿವೃತ್ತಿಯನ್ನು ಪಡೆಯುತ್ತಾನೆ.

ನಾಲ್ಕನೆಯದು ಸಂನ್ಯಾಸಾಶ್ರಮ—ಇಲ್ಲಿಯತನಕ ಅವನ ಪ್ರೇಮ ಮತ್ತು ಆಸಕ್ತಿಗಳು ಹೆಂಡತಿ ಮಕ್ಕಳು ಮತ್ತು ಬಂಧು ಮಿತ್ರರಲ್ಲಿ ಸಂಕುಚಿತವಾಗಿರುತಿತ್ತು ಸಂನ್ಯಾಸವನ್ನೂ ಸ್ವೀಕರಿಸಿದ ಕೂಡಲೆ ಅವನ ಅವೆಲ್ಲವನ್ನೂ ತ್ಯಜಿಸುತ್ತಾನೆ. ಭಗವಂತನನ್ನರಸಲು ತಪ್ಪಸ್ಸನ್ನು ಕೈಗೊಳ ತ್ತಾನೆ. ಲೌಕಿಕ ವಿಷಯಗಳಿಂದ ಪೂರ್ಣನಿವೃತ್ತಿಯನ್ನು ಹೊಂದಿ, ವಿಶ್ವ ಪ್ರೇಮಿಯಾಗುತ್ತಾನೆ. ಅಂದರೆ ಮೋಕ್ಷಸಾಧಕನಾಗುತ್ತಾನೆ.

ಈ ಆಶ್ರಮ ಧರ್ಮಗಳು ಪ್ರಪಂಚದ ಎಲ್ಲಾ ಧರ್ಮೀಯರೂ ಒಪ್ಪತಕ್ಕವುಗಳಾಗಿವೆ. ಹೀಗೆ ಹಿಂದೂ ಧರ್ಮವು ಮಾನವ ಜೀವಿತಕ್ಕೆ ಆಧಾರವಾದ ರೀತಿನೀತಿಗಳನ್ನೂ, ಕರ್ತವ್ಯಗಳನ್ನೂ ನಿಯಮದಂತೆ ತೋರುತ್ತದೆ. ಈ ಗುಣಗಳು ಬೆಳೆಯುತ್ತಾ ಬದಲಾವಣೆಯನ್ನು ಹೊಂದುತ್ತಿರುತ್ತದೆ. ಅವುಗಳನ್ನು ಒಂದು ತಂತ್ರದಲ್ಲಿ ದೂಡುವುದೇ ಧರ್ಮದ ಉದ್ದೇಶವಾಗಿದೆ. ಈರೀತಿಯ ಧರ್ಮದ ನಿಯಮಗಳು ನಮ್ಮನ್ನು ಅರ್ಥ ಮತ್ತು

ಕಾಮುಗಳಿಂದ ದೂರಮಾಡುತ್ತವೆ. ಲೌಕಿಕ ಮತ್ತು ಅಲೌಕಿಕಗಳಲ್ಲೂ, ಭಕ್ತಿ ಮತ್ತು ಮುಕ್ತಿಗಳಲ್ಲೂ ಧರ್ಮಾರ್ಥ ಕಾಮುಗಳು ಜೊತೆಯಾಗಿಯೇ ಬಂದು ಮೋಕ್ಷಸಾಧನವಾಗುವಂತೆ ಈ ಆಶ್ರಮಧರ್ಮಗಳು ಅಳವಡಿಸಲ್ಪಟ್ಟಿವೆ 'ಆದರೆ ಇತ್ತೀಚಿಗೆ ಮೊದಲ ಎರಡು ಧರ್ಮಗಳು ಮಾತ್ರ ಹೆಚ್ಚಾಗಿ ಬಳಕೆಯಲ್ಲಿವೆ'.

ರಾಧಾಕೃಷ್ಣನ್ನರು ಈ ಆಶ್ರಮ ಧರ್ಮಗಳ ಬಗ್ಗೆ ಹೀಗೆ ಹೇಳುತ್ತಾರೆ "ಈ ನಾಲ್ಕು ನಿಯಮಗಳನ್ನು ಮತ್ತೆ ಪುನಶ್ಚೇತನ ಗೊಳಿಸಿದರೆ, ಜನರು ಮರಣ ಮತ್ತು ಪರಿಸ್ಥಿತಿಯ ಒತ್ತಡದಿಂದ ಎಚ್ಚೆತ್ತು ಕೊಳ್ಳುವರು. ಉತ್ಕಾಶೆಯನ್ನು ಬಿಟ್ಟುಬಿಡುತ್ತಾರೆ. ತಮ್ಮ ಕರ್ತವ್ಯಗಳಲ್ಲಿ ನಿಷ್ಠರಾಗುತ್ತಾರೆ ಜೊತೆಗೆ ಅದು ಆರೋಗ್ಯಕ್ಕೂ ಉತ್ತಮ ಸಹಕಾರಿಯಾದುದು. ಜನತೆಯು ಐಶ್ವರ್ಯ, ಸಂಸಾರ, ಮುಂತಾದ ವಿಷಯಗಳಲ್ಲಿರುವ ಹೆಚ್ಚಿನ ಆಸಕ್ತಿಯನ್ನು, ಅಧಿಕಾರ ವ್ಯಾಮೋಹಕ್ಕೆ ಕಟ್ಟುಬಿದ್ದು ತೊಳಲಾಡುತ್ತಿರುವುದನ್ನೂ ತಮಗೆ ತಾವೇ ಅರಿತು ಬಿಟ್ಟುಬಿಡುವರೆಂದು ಸೂಚಿಸುತ್ತಾರೆ.

ಅದು ಬುದ್ಧನ ಮಾತಿನ ಪ್ರತಿಚ್ಛಾಯೆ "ನಾವು ಎಲ್ಲಿಯತನಕ ಅಶಾಶ್ವತಕ್ಕೆ ಅಂಟಿಕೊಂಡಿರುತ್ತೇವೋ, ಅಲ್ಲಿಯತನಕ ಸಂಸ್ಕೃತಿಯು ಕಾಲಕ್ಕೆ ಗುಲಾಮರಾಗಿರುತ್ತೇವೆ". ಎಂದರಿತ "ಬುದ್ಧನು ಎಲ್ಲಿ ವೃಧ್ಯಾಪ್ಯವಿಲ್ಲವೋ, ಎಲ್ಲಿ ಭಯವಿಲ್ಲವೋ, ಎಲ್ಲಿ ರೋಗವಿಲ್ಲವೋ, ಎಲ್ಲಿ ಹುಟ್ಟುಸಾವುಗಳಿಲ್ಲವೋ, ಎಲ್ಲಿ ಆಶೆ ಆಕಾಂಕ್ಷೆಗಳಿಲ್ಲವೋ ಅಂತಹ ಸ್ಥಳವನ್ನು ನಾನು ಬಯಸುತ್ತೇನೆ". ಎಂದು ಹೇಳುವನು ಅದೇ ಮುಕ್ತಿ ಎಂಬುದು. ನಮ್ಮ ವೇದಗಳ ಮೋಕ್ಷವೆಂಬುದು ಉಪನಿಷತ್ತುಗಳು ಮೃತ್ಯುವಿನಿಂದ ಅಮೃತಕ್ಕೆ ಬೇಡುವ ಭಾವನೆಯಿದು. ಅದನ್ನು ಸಾಧಿಸಲು ಮಾನವನಿಗಿರುವ ಎಲ್ಲಾ ಸಂಕೋಲೆಗಳನ್ನೂ ಕಳಚಿಕೊಳ್ಳ ಬೇಕೆನ್ನುತ್ತಾನೆ.

ಮೂರ್ತಿ ಪೂಜೆಯ ಬಗ್ಗೆ ಕೆಲವು ಭಿನ್ನಾಭಿಪ್ರಾಯಗಳಿವೆ. ಆದರೂ ದೇವರ ಸಾಕ್ಷಾತ್ಕಾರವು ಎಲ್ಲ ಧರ್ಮಗಳಿಗೂ ಬೇಕು. ಟಾವೋ ಧರ್ಮವು ದೇವರಸಾಕ್ಷಾತ್ಕಾರವೇ ಧರ್ಮದ ಉದ್ದೇಶವೆಂದು ಹೇಳುತ್ತದೆ. ಗ್ರೀಕ್ ಮತವು ದೇವರೊಡನೆ ಸಹಕರ್ಮಿಯಾಗು ಎನ್ನುತ್ತದೆ. ಜುರಾಷ್ಟ್ರ ಮತವು ದೇವರೊಡನೆ ಒಂದಾಗು ಎನ್ನುತ್ತದೆ. ಹೀಗೆಯೇ ಎಲ್ಲಾ ಧರ್ಮ

ಗಳೂ ದೇವರ ಆರಾಧನೆಯನ್ನು ಒಪ್ಪುತ್ತಿವೆ. ದೇವರ ಧ್ಯಾನಕ್ಕೆ ಮನ್ನಣೆ ಯನ್ನು ಕೊಡುತ್ತವೆ. ಆ ಧ್ಯಾನದಿಂದಾದ ಆನಂದ ವರ್ಣನಾತೀತ ವಾದುದು. ಉಳಿದೆಲ್ಲಾ ರೀತಿಗೂ ಮಿಗಿಲಾದುದು. ಅದನ್ನು ಯಾರೂ ಕಣ್ಣಿನಿಂದ ನೋಡಲಾರರು. ಅದು ಧ್ಯಾನ ಮಾಡುವವರ ಸ್ವಾನುಭವಕ್ಕೆ ಸಿದ್ಧವಾದದು. ಆ ಆನಂದವನ್ನು ಎಲ್ಲದರ ಸ್ವಯಂ ಆಡಳಿತವೆಂದೂ, ಎಲ್ಲ ದರ ಅಧಿಕಾರಿಯೆಂದೂ ಹೇಳಬಹುದು. ನಮ್ಮ ಮಹತ್ವದ ಆಲೋಚನೆ ಯೆಂದರೆ, ನಮ್ಮ ಬುದ್ಧಿಯ ಊಹೆ ಅಥವಾ ಕಲ್ಪನಾ ಚಿತ್ರವಷ್ಟೆ. ದೇವ ರಲ್ಲಿ ತಮ್ಮ ಪೂರ್ಣ ಜ್ಞಾನವನ್ನಿಟ್ಟು ಗಂಭೀರವಾದ ನಂಬಿಕೆಯುಳ್ಳ ಜ್ಞಾನಿಗಳು ಕೆಲವರಿದ್ದಾರೆ. ಅಂತಹವರು ದೇವರು ಎಂಬ ಒಂದು ಚಿಹ್ನೆ ಯನ್ನು ಹುಡುಕಲು ಹೋಗುವುದಿಲ್ಲ. ದೇವರಭಾವನೆಯು ಋಷಿಗಳ ಸ್ಮೃತಿಗೆ ಮಾರ್ಮಿಕವಾಗಿ ಉಂಟಾಗುತ್ತದೆ. ಆದರೆ ಅದು ಹಗಲಿನ ಬೆಳಕಿನಂತೆ ಬರುವುದಿಲ್ಲ. ಅಂತ ಜ್ಯೋತಿಯಾಗಿ ಕಾಣುತ್ತದೆ.

ಆದರೆ ಅಂತಹ ಜ್ಞಾನಿಗಳು ಬಹಳ ಜನರಿಲ್ಲ. ಅಲ್ಪ ಜ್ಞಾನಿಗಳಿಗೆ ಜನಪ್ರಿಯವಾದ ಸಂಕೇತಗಳನ್ನು ಉಳಿಸಬೇಕಾಗುತ್ತದೆ. ಕೆಲವರು ಸಂಕುಚಿತ ಜ್ಞಾನದಿಂದ ಅಲ್ಪ ತಿಳಿದಿದ್ದರೂ ಕೂಡ, ಹಿರಿ ಯರು ಹೇಳಿದ ನಂಬಿಕೆಗಳನ್ನು ಅವರು ಉಲ್ಲಂಘಿಸುವುದಿಲ್ಲ. ಮೂಕ ರಂತೆಯೇ ಆಚರಿಸುತ್ತಾರೆ. ಹೀಗೆ ಅರ್ಥವಿಲ್ಲದೇ, ಅವರ ಮನಸ್ಸು ಒಪ್ಪದೇ, ನಾವು ಹೇಳಿದಂತೆ ಮಾಡಲು ಒತ್ತಾಯ ಮಾಡುವುದರಿಂದ, ಅವರು ಮತ್ತಷ್ಟು ಅಜ್ಞಾನಿಗಳಾಗುತ್ತಾರೆ. ಅದುದರಿಂದಲೇ ದಾರ್ಶನಿಕರು ಅಂತಹವರಿಗೆ ಸಂದೇಹವನ್ನುಂಟುಮಾಡಬಾರದೆಂದು, ಸೂಕ್ಷ್ಮ ವಾದ ಸತ್ಯಕ್ಕೆ ಪುರಾಣವೆಂಬ ಲೇಪನವನ್ನು ಬಳಿದು, ತತ್ವದ ಪರಿಚಯವನ್ನು ನೀಡಿದ್ದಾರೆ. ಅದರಂತೆಯೇ ಕಲಾಮಯವಾದ, ಆಹ್ಲಾದ ಕರವಾದ ಮನಸ್ಸನ್ನು ಕೇಂದ್ರಗೊಳಿಸಬಲ್ಲ ದೇವರ ಸಂಕೇತವಾದ ಮೂರ್ತಿಗಳಿರು ವುದು ಒಳ್ಳೆಯದು.

ಮೂರ್ತಿಗಳು ದೇವತ್ವ ಕಲ್ಪನೆಯ ಶ್ರೇಷ್ಠ ಸಂಕೇತಗಳಾಗಿವೆ. ಅವು ಮಾನಸಿಕ ಪ್ರಭಾವಕ್ಕೊಳಗಾಗುತ್ತವೆ. ದೇವರನ್ನು ಧ್ಯಾನಮಾಡು ವುದರಿಂದ ಸತ್ಯಸಂಧತೆಗೆ ದಾರಿಯಾಗುತ್ತದೆ. ಪ್ರಾರ್ಥನೆಯು ನಮ್ಮ

ಮನಸ್ಸು ದುರಾಲೋಚನೆಯ ಕಡೆಗೆ ಹೋಗದಂತೆ, ಅತ್ಯುತ್ತಮ ಆಲೋಚನೆಗಳಿಂದ ಕೂಡಿರುವಂತೆ ಮಾಡುತ್ತದೆ. ಸೂರ್ಯನು ಒಳ್ಳೆಯದರ ಮತ್ತು ಕೆಟ್ಟದರ ಮೇಲೆ ಹೇಗೆ ತಾರತಮ್ಯವನ್ನು ತೋರದೆ ಎಲ್ಲಕ್ಕೂ ಬೆಳಕನ್ನು ನೀಡುವನೋ, ಹಾಗೆಯೇ ಭಗವಂತನು ಎಲ್ಲರನ್ನೂ ಪ್ರೀತಿಸುತ್ತಾನೆ. ಮಾನವನ ಪ್ರತಿಯೊಂದು ಕಾರ್ಯವೂ ದೇವರು ಕೊಟ್ಟ ವರವಾಗಿದೆ.

ಆದುದರಿಂದ ದೇವಸ್ಥಾನ, ಚರ್ಚು, ಮಸೀದಿ, ಮತ್ತು ಸ್ಥೂಪಗಳು ದೇವರನ್ನು ಮಾನವನು ಹುಡುಕುವುದರ ಸಾಕ್ಷೀ ಭೂತವಾಗಿದೆ. ಅವುಗಳ ಆಕಾರಗಳು ಭಿನ್ನಭಿನ್ನವಾಗಿರಬಹುದು. ನಮಗದು ಹೊಸದಾಗಿ ಕಾಣಬಹುದು. ಆದರೂ ಧರ್ಮಗಳೆಲ್ಲವೂ ದೇವರಲ್ಲಿ ಮೂಲಸ್ಥಾನವನ್ನು ಹೊಂದಿವೆ. ದೇವರ ನ್ಯಾಯ ಮತ್ತು ಪ್ರೇಮಕ್ಕೆ ಹಾತೊರೆಯುತ್ತಿವೆ. ಹಿಂದುವಾಗಲೀ, ಮುಸಲ್ಮಾನನಾಗಲೀ, ಕ್ರೈಸ್ತನಾಗಲೀ ಯಾರೇ ಆಗಲಿ ಸಮಾಜಕ್ಕೆ ಧಕ್ಕೆಯಾಗುವುದನ್ನು ಸಹಿಸರು! ನೋಡುವುದಾದರೆ ಯಾವ ದೇವಸ್ಥಾನಗಳೂ ಸಮಾಜಕ್ಕೆ ಅಡ್ಡಿಗಳಾಗಿ ಉತ್ಪನ್ನಗಳಾಗಿಲ್ಲ. ಪ್ರತಿಯೊಂದು ದೇವಸ್ಥಾನವೂ ಐಕ್ಯತೆಯನ್ನೂ ಸಮಾಜದ ಒಂದು ಶಿಸ್ತನ್ನೂ ತೋರುತ್ತಿವೆ.

ನಮ್ಮಂತೆಯೇ ಪುರಾತನ ಕ್ರೈಸ್ತರು ಮೂರ್ತಿ ಪೂಜೆಗೆ ಪುರಸ್ಕಾರವೀಯುತ್ತಿದ್ದರು. ಮಹಮದನು ಮೂರ್ತಿ ಪೂಜೆಯನ್ನು ತಿರಸ್ಕರಿಸಿದನು. ಮಹಮದ್ ಮತ್ತು ಅವನ ಅನುಯಾಯಿಗಳು ಏಕೇಶ್ವರವಾದಿಗಳು. ಕ್ರಿಸ್ತರಲ್ಲಿ ಈ ಭಾವನೆಯು ಸ್ವಲ್ಪ ಕುಂಠಿತವಾಗಿತ್ತು. ಸೂಫಿ ಸಂಪ್ರದಾಯವು ಸಾಮಾನ್ಯವಾಗಿ ಇದನ್ನೇ ಅನುಸರಿಸುತ್ತಿದೆ. ಹಿಂದೂಗಳಲ್ಲಿ ಬಹುದೇವತ್ವ ಕಲ್ಪನೆಯಿದ್ದರೂ ಏಕೇಶ್ವರವಾದದ ಕಡೆಗೆ ಮತವನ್ನು ಕೊಡುತ್ತೇವೆ. ಪೂರ್ವಕಾಲದ ಇರಾನಿನ ಆರ್ಯರೂ ಇಂಡಿಯಾದ ಆರ್ಯರೂ ದೇವರ ವಿಷಯದಲ್ಲಿ ಏಕರೀತಿಯ ಭಾವನೆಗಳನ್ನು ಹೊಂದಿದ್ದರು. ಅದು ಮುಂದುವರೆದುಕೊಂಡು ನಿಷ್ಕಾಮ ವಿಷಯದಲ್ಲಿ ಹೋಲಿಕೆಯು ಇದೆ

ಹಿಂದೂ ದೇವಸ್ಥಾನಗಳು ಕಣ್ಣಿಗೆ ಕಾಣುವ ಗುರುತುಗಳಾದರೂ

ಸ್ವರ್ಗವನ್ನು ತೋರುವ ಭೂಮಿಯ ಬಾಗಿಲುಗಳಾಗಿವೆ. ಅದೇ ಭಾವನೆಯನ್ನು ಎಲ್ಲಾ ಧರ್ಮೀಯರೂ ತಮ್ಮ ತಮ್ಮ ಮತೀಯ ದೇವಸ್ಥಾನಗಳಲ್ಲಿಟ್ಟಿದ್ದಾರೆ. ಆದರೆ ನಿಜವಾದ ಒಂದು ದೃಶ್ಯವನ್ನು ಅರಿಯಲು ಶುದ್ಧವಾದ ಹೃದಯವು ಬೇಕು! ರತ್ನಗಳ ಹಾರಗಳಾಗಲೀ, ಜರತಾರಿಯ ಬಟ್ಟೆಗಳಾಗಲೀ, ಜರಿ ಪೇಟಗಳಾಗಲೀ, ಯಾತ್ರಾ ಸ್ಥಳಗಳನ್ನು ಸುತ್ತುವುದರಿಂದಲಾಗಲೀ, ಪವಿತ್ರ ನದಿಗಳಲ್ಲಿ ತೀರ್ಥಸ್ನಾನ ಮಾಡುವುದರಿಂದಾಗಲೀ ಅಥವಾ ಬರಿಯ ಧ್ಯಾನಗಳಿಂದಾಗಲೀ ಹೃದಯವನ್ನು ಶುದ್ಧಿ ಮಾಡಿಕೊಳ್ಳಲು ಸಾಧ್ಯವಾಗದು.

ಜೋಡಾಯಿಸಂ ಹೇಳುವ "ನ್ಯಾಯ, ಸತ್ಯ ಮತ್ತು ಪ್ರೇಮಕ್ಕಾಗಿ ಮತಸ್ಥಾಪನೆ. ನಮ್ಮೆಲ್ಲರಿಗೂ ಒಬ್ಬನೇ ಒಬ್ಬ ತಂದೆ, ಆದ್ದರಿಂದ ನಮ್ಮಲ್ಲಿ ನಾವು ಏಕೆ ನಂಬಿಕೆಯನ್ನು ಹೊಂದಬಾರದು?" ಎಂದಿರುವ ಮಾತನ್ನೂ ಪ್ಲೋಟಾರಜ್ ಎಂಬ ಕ್ರೈಸ್ತ ಭಕ್ತನು "ಒಬ್ಬ ಸೂರ್ಯ ಮತ್ತು ಒಂದು ಆಕಾಶವು ಹೇಗೆ ಎಲ್ಲಾ ರಾಷ್ಟ್ರಗಳ ಮೇಲಿದೆಯೋ ಹಾಗೆಯೇ ಅನೇಕ ಹೆಸರನ್ನುಳ್ಳ ಒಬ್ಬ ದೇವರಿದ್ದಾನೆ"— ಎಂದು ಹೇಳಿದ ಮಾತನ್ನೂ, ನಮ್ಮ ಉಪನಿಷತ್ತಿನಲ್ಲಿ "ಪಾರ್ವತಿದೇವಿಯೇ ನನ್ನ ತಾಯಿ, ಪರಮೇಶ್ವರನೇ ನನ್ನ ತಂದೆ"—ಎಂದು ಹೇಳಿರುವ ಮಾತನ್ನು ಸರ್ವಪಳ್ಳಿಯವರು ಉದಾಹರಿಸಿ 'ನಿಜವಾದ ಹಿಂದುವು ವಿಶ್ವಶಾಂತಿಯ ಕನಸನ್ನು ಕಾಣುತ್ತಾನೆ; ಏಕ ದೇವತ್ವ ಭಾವನೆಯನ್ನು ಹೊಂದುತ್ತಾನೆ' ಎಂದು ಹೇಳುವರು.

ಹೀಗೆ ಎಲ್ಲಾ ಮತಗಳಲ್ಲಿಯೂ ಉತ್ತಮ ತತ್ವಗಳಿವೆ. ಒಂದೇ ಗುರಿಯಿದೆ. ಆಗ ದೇಶಗಳ ಎಲ್ಲೆಗಳು ನಿರ್ಧರಿತವಾಗಿದ್ದುವು. ಸಮುದ್ರ ಮತ್ತು ಪರ್ವತಗಳು ಖಂಡಗಳನ್ನಾಗಿ ದೇಶಗಳನ್ನಾಗಿ ಬೇರ್ಪಡಿಸಿದ್ದುವು. ಆಯಾ ಕಾಲದ ಪ್ರವಾದಿಗಳು ದೂರ ದೂರದಲ್ಲಿ ಹುಟ್ಟಿದ್ದರೂ, ಪರಸ್ಪರ ಸಂಪರ್ಕಕ್ಕೆ ಅವಕಾಶವಿಲ್ಲದಿದ್ದರೂ ಒಂದೇ ಗುರಿಯುಳ್ಳ ಧ್ಯೇಯವುಳ್ಳವುಗಳಾಗಿವೆ. ಆಸಕ್ತಿಯುಳ್ಳವರು ಹಲವು ಧರ್ಮಗಳ ಗ್ರಂಥಗಳನ್ನು ವ್ಯಾಸಂಗ ಮಾಡಲು ಅನುಕೂಲವಿರಲಿಲ್ಲ. ಇಂದು ವಿಜ್ಞಾನ ಯುಗ. ದೇಶಗಳೂ ನೆರೆಮನೆಯಂತಾಗಿವೆ. ಎಲ್ಲಾ ಧರ್ಮಗ್ರಂಥಗಳೂ ಅಚ್ಚಿನ ಸೌಕರ್ಯದಲ್ಲಿ ಪ್ರಕಟವಾಗುತ್ತಿವೆ. ನಾವು ಅವುಗಳನ್ನು ಕುರುಡು ಭೇದ

ವನ್ನು ಬಿಟ್ಟು ಅಧ್ಯಯನ ಮಾಡಿದರೆ, ಎಲ್ಲದರಲ್ಲೂ ಒಂದೇ ಆಧ್ಯಾತ್ಮಿಕ ಗುರಿಯನ್ನು ಕಾಣಬಹುದು. ಅನೇಕ ಸುಧಾರಕರು ಧರ್ಮಗಳಲ್ಲಿ ಸುಧಾರಣೆಯನ್ನು ಮಾಡಿರಬಹುದು. ಆದರೂ ಅದರ ಮೂಲತತ್ವವು ವ್ಯತ್ಯಾಸವನ್ನು ಹೊಂದಿರುವುದಿಲ್ಲ. ಆದುದರಿಂದಲೇ ಪುರಾತನ ತತ್ವಗಳನ್ನು ಅಭ್ಯಾಸಮಾಡಬೇಕೆಂದು ಸರ್ವಪಳ್ಳಿಯವರು ಸೂಚಿಸುತ್ತಾರೆ. ಈ ವಿಷಯದಲ್ಲಿ ಪ್ರೊ|| ಅರ್‌ನಾಲ್ಡ್, ಆರ್ಚಬಿಷಪ್, ಟಾಯನ್ ಬೀ ಹಾಗೂ ಮಹಾತ್ಮ ಗಾಂಧೀಜಿಯವರ ಅಭಿಪ್ರಾಯಗಳು ಏಕ ರೀತಿಯುಳ್ಳವುಗಳಾಗಿವೆ.

ಹೀಗೆ ಧರ್ಮದ ಗ್ರಂಥಗಳನ್ನು ಓದುವುದರಿಂದ ಮತಾಂಧತೆ ಹಾಗೂ ಧರ್ಮಾಂಧತೆಯು ಕಡಿಮೆಯಾಗುತ್ತದೆ. ಯಾವ ಧರ್ಮೀಯರನ್ನಾಗಲೀ, ನಾವು ಹೊಂದಿಕೊಳ್ಳಬಹುದು. ವೇದಾಂತ ವಿಷಯಗಳನ್ನು ನಾವು ಓದುವುದರಿಂದ ಪ್ರಪಂಚವು ಕೊಡಲಾರದ. ತೆಗೆದುಕೊಳ್ಳಲಾರದ, ಆನಂದದ ಅನುಭವವನ್ನು ಮನಸ್ಸಿಗೆ ಪಡೆಯುತ್ತದೆ. ಅದು ಭೌತಿಕ ಸಂಪತ್ತನ್ನು ಗಳಿಸಿಕೊಳ್ಳಲು ನಮ್ಮನ್ನು ಸಿದ್ಧಗೊಳಿಸದೇ ಇರಬಹುದು. ಅನ್ಯ ಜನರನ್ನು ತಿದ್ದಬೇಕಾದರೆ, ವೇದಾಂತ ವಿಷಯವು ಅಗತ್ಯವೆನ್ನುತ್ತಾರೆ.

ಸರ್ವಪಳ್ಳಿಯವರು ಧರ್ಮಗಳೆಲ್ಲವನ್ನೂ ಅಧ್ಯಯನ ಮಾಡಿ ಅದರಿಂದ ಗಳಿಸಿದ ಜ್ಞಾನದಿಂದ, ತಮ್ಮದೇ ಆದ ಒಂದು ದರ್ಶನ ಶಾಸ್ತ್ರವನ್ನು ಹೇಳುವರು ಅದು ಒಂದು ಸಮಾಜಕ್ಕೆ ಅಥವಾ ರಾಷ್ಟ್ರಕ್ಕೆ ಸೇರಿದುದಲ್ಲ. ಅದು ಇಡೀ ಮಾನವೀಯತೆಯ ಧರ್ಮ. ಆ ಭಾವನೆಯನ್ನು ನಾವು ಅವರ ಗ್ರಂಥಗಳಲ್ಲಿ ಕಾಣಬಹುದು. ಅವರ ಉಪನ್ಯಾಸಗಳಲ್ಲಿ ಕಾಣಬಹುದು. ಧರ್ಮವು ಮತ್ತೊಬ್ಬರಿಗೆ ಅಧೀನವಾಗದಂತಿರಬೇಕು. ಜೀವನದಲ್ಲಿ, ದೇವರಲ್ಲಿ, ಮತ್ತು ಪ್ರಪಂಚದ ವಿಷಯಗಳಲ್ಲಿ ಸ್ಪಷ್ಟವಾಗಿರಬೇಕು. ದೇವರು ಮತ್ತು ನಿರಂಕುಶತೆ, ಇವೆರಡೂ ಜಗತ್ತಿನಲ್ಲಿ ಸತ್ಯವಾದುವುಗಳು. ಧರ್ಮಕ್ಕೆ ಭೂಗೋಳಿಕ ಮತ್ತು ಚಾರಿತ್ರಿಕ ಎಲ್ಲೆಗಳಿರಕೂಡದು. ನಾವು ಬಯಸುವ ದೇವರು ಮತ್ತು ಧರ್ಮವು ಸತ್ಯಕ್ಕೆ ವಾಲುವುದಾಗಿರಬೇಕು ಎಂದು ಹೇಳುವರು.

ಈ ಸರ್ವಜ್ಞಾನದ ತಮ್ಮ ರಸಾಯನವನ್ನು ಪ್ರಪಂಚದ ಮೂಲೆಯಿಂದ ಮೂಲೆಗೆ ಹೋಗಿ ಹಂಚುತ್ತಿದ್ದಾರೆ. ನೇಯ್ಗೆಯ ಕಂಟಿಕೆಯಂತೆ ಪೂರ್ವದಿಂದ ಪಶ್ಚಿಮಕ್ಕೂ, ಪಶ್ಚಿಮದಿಂದ ಪೂರ್ವಕ್ಕೂ ತಮ್ಮ ಜ್ಞಾನವೆಂಬ ನೂಲನ್ನು ಹೊತ್ತುಕೊಂಡು ವಿಶ್ವನಾಗರೀಕತೆಯೆಂಬ ಹೆಣಿಕೆಯನ್ನು ಸರ್ವಪಳ್ಳಿಯವರು ನೇಯುತ್ತಿದ್ದಾರೆ ಎಂದು ಓರ್ವ ಆಂಗ್ಲ ವಿದ್ವಾಂಸರು ಹೇಳುತ್ತಾರೆ.

ಸರ್ವಪಳ್ಳಿಯವರ ಸರಳತೆ, ಸದಾಚಾರ, ಮತ್ತು ಪಾಂಡಿತ್ಯದ ಪ್ರೌಢತೆಗಳನ್ನು ಕಂಡ ಜನತೆಯು ಇವರನ್ನು ಅಭಿನವ ಶಂಕರರೆಂದೂ ಕರೆಯುವುದುಂಟು. ಹಾಗೆಯೇ ಯೋಚಿಸುವುದಾದರೆ, ಶಂಕರರಿಗೆ ಭಾರತದ ಧರ್ಮವಷ್ಟೇ ಅಂದು ತಿಳಿದಿದ್ದುದು. ಅಂದಿನ ಭೌಗೋಳಿಕ ಚಾರಿತ್ರಿಕ ಸನ್ನಿವೇಶವು ಹಾಗಿತ್ತು. ದೈವದತ್ತವಾದ ಶ್ರೇಷ್ಠ ಜ್ಞಾನದಿಂದ ಭಾರತವನ್ನೆಲ್ಲಾ ಸುತ್ತಾಡಿ ಜ್ಞಾನದ ಜಯಭೇರಿ ಹೊಡೆದರು. ಇವರಾದರೂ ಅವರಿಗಿಂತಲೂ ಹೆಚ್ಚಾಗಿ ಆಧುನಿಕ ಯುಗದ ಸೌಕರ್ಯಗಳನ್ನೆಲ್ಲಾ ಉಪಯೋಗಿಸಿಕೊಂಡು ವಿಶ್ವಧರ್ಮಗಳನ್ನೂ ವಿಶ್ವದ ಎಲ್ಲಾ ಸಾಹಿತ್ಯಗಳನ್ನೂ ಜೀರ್ಣಿಸಿಕೊಂಡಿರುವವರು ದಾರ್ಶನಿಕರಿವರು. ಅದನ್ನರಿತ ಮತ್ತೆ ಕೆಲವರು ಇವರನ್ನು ಸನ್ಯಾಸಿ ಎಂದೇ ಕರೆಯುತ್ತಾರೆ. ಅದಕ್ಕುತ್ತರವಾಗಿ ನಾನು ಸಂನ್ಯಾಸಿಯಲ್ಲ. ಜೀವನದಲ್ಲಿ ಪೂರ್ಣ ಸಂತೋಷವನ್ನು ಬಯಸುವವನು ಸಂಸಾರದಲ್ಲಿ ಜಿಗುಪ್ಸೆಯನ್ನು ಹೊಂದುವವನೂ ಅಲ್ಲ. ನನ್ನಲ್ಲಿ ಗೃಹಪ್ರೇಮ ಮಿತ್ರತ್ವ. ನಿಷ್ಠೆ, ಶ್ರದ್ಧೆ. ಭಕ್ತಿ ಎಲ್ಲವೂ ಇವೆ. ನನ್ನ ಸತ್ವಕ್ಕಾಗಿ ನಾನು ಆಗಾಗ ದುಃಖವನ್ನೂ ಪಡುತ್ತೇನೆ. ಸಂತೋಷವನ್ನೂ ಪಡುತ್ತೇನೆ. ನಿಜವಾದ ಹಿಂದುವು ಸರಿಯಾಗಿ ಆಲೋಚಿಸುತ್ತಾನೆ. ಗೌರವವಾಗಿ ವರ್ತಿಸುತ್ತಾನೆ ಸಮಾಜದಲ್ಲಿ ಉತ್ತಮ ಸದಸ್ಯನಾಗಿರುತ್ತಾನೆ. ಹಿಂದೂಧರ್ಮವು "ಸಂಸಾರವನ್ನು ತ್ಯಾಗಮಾಡು" ಎನ್ನುವುದಿಲ್ಲ. ಅದು ನಿಸ್ವಾರ್ಥತೆಯನ್ನೂ ತನ್ನ ಕರ್ಮದಲ್ಲಿ ಸ್ವಚ್ಛತೆಯನ್ನೂ ಬೋಧಿಸುತ್ತದೆ. ಹಾಗೆ ವರ್ತಿಸುವುದೇ ಗೌರವಯುತವಾದ ಬಾಳು! ಅದನ್ನೇ ನಾನು ಬಯಸುವುದು. ನಾನೊಬ್ಬ ಸನ್ಯಾಸಿಯಾಗಲು ಇಷ್ಟಪಡುವುದಿಲ್ಲ. ನಾನೊಬ್ಬ ಉತ್ತಮ ಗೃಹಸ್ಥನಾಗಿ ವಿಶ್ವದ ಮಾನವನಾಗಿ ಬಾಳಲು ಸಿದ್ಧನಾಗಿದ್ದೇನೆ" ಎನ್ನುತ್ತಾರೆ.

ಇವರ ಬಗ್ಗೆ ಮಾಕ್ಸಮುಲ್ಲರ್‌ರವರು "ಭಾರತವು ನಮಗೆ ಏನನ್ನು ಮಾರ್ಗದರ್ಶನ ಮಾಡುವುದೋ ಅದನ್ನೆ ರಾಧಾಕೃಷ್ಣನ್ನರ ಆಲೋಚನೆಗಳು ನಮಗೆ ಸ್ವಾಗತ ನೀಡಿ, ನೀಡುತ್ತವೆ" ಎನ್ನುತ್ತಾರೆ. ರಾಬರ್ಟ್ ಡಬ್ಲ್ಯು. ಬ್ರೌನಿಂಗ್ ಎಂಬುವರು "ನಮ್ಮ ಕಾಲದಲ್ಲಿ ಇವರಿಗಿಂತಲೂ ಹೆಚ್ಚಾಗಿ ಆಧ್ಯಾತ್ಮಿಕ ವಿಷಯವಾಗಿ ಸಂಶೋಧನೆಯನ್ನು ಮಾಡಿರುವವರ ಮತ್ತಾರ ಹೆಸರನ್ನೂ ನಾನು ಸೂಚಿಸಲಾರೆ." ಎನ್ನುತ್ತಾರೆ. ಲಾರೆನ್ಸ್ ಹೈಡ್, ಮುಂತಾದ ವಿದ್ವಾಂಸರೂ ಕೂಡ ಇದೇ ಅಭಿಪ್ರಾಯವನ್ನು ಸೂಚಿಸುವರು.

ಡಾ|| ಸಿ. ಇ. ಎಮ್. ಜೋಡ್‌ರವರು ಅವರ "ಪೂರ್ವದಿಂದ ಪ್ರತಿಘಾತ" (Counter attack from the East) ಎಂಬ ಪುಸ್ತಕದಲ್ಲಿ 'ಪ್ರಪಂಚದ ಐಕ್ಯತೆಗಾಗಿ ರಾಧಾಕೃಷ್ಣನ್ನರ ಒಂದು ಕೊಡುಗೆ' ಎಂದು ಹೇಳಿ ಪೂರ್ವದ ಸಾಂಪ್ರದಾಯಕ ಜ್ಞಾನ ಮತ್ತು ಪಶ್ಚಿಮದ ಹೊಸ ಜ್ಞಾನಗಳೆರಡರಲ್ಲಿ ಕ್ರಿಯೋತ್ಸಾಹಗಳಿಗೆ ಒಂದು ಸೇತುವೆಯನ್ನು ಕಟ್ಟುತ್ತಿರುವ ನಿಪುಣ ಇಂಜಿನಿಯರ್ ಆಗಿದ್ದಾರೆ. ಅವರು ನೀಡಿರುವ ತತ್ವಗಳಿಂದ ಉಪಯೋಗವನ್ನು ಪಡೆದುಕೊಳ್ಳಬಹುದು. ಅದು ಒಬ್ಬ ವ್ಯಕ್ತಿಯ ಅಥವಾ ಒಂದು ದೇಶದ ಅಥವಾ ಒಂದು ಖಂಡದ ಧರ್ಮವಾಗಿಲ್ಲ. ಅವರದು ವಿಶ್ವಧರ್ಮ ಎನ್ನುತ್ತಾರೆ. ಇತ್ತೀಚಿನ ರಷ್ಯಾ ಪ್ರವಾಸದಲ್ಲಿ ಮಾಸ್ಕೋ ವಿಶ್ವವಿದ್ಯಾನಿಲಯವು ಸರ್ವಪಳ್ಳಿಯವರಿಗೆ 'ಡಾಕ್ಟರ್ ಆಫ್ ಫಿಲಾಸಫಿ' ಎಂಬ ಗೌರವ ಪದವಿಯನ್ನಿತ್ತು ಮನ್ನಿಸಿದುದು ವಿಶ್ವ ವೇದಾಂತಿ ಎಂಬ ಕೀರ್ತಿಗೆ ಕಳಸವಿಟ್ಟಂತಾಯಿತು

ಭಾರತದ ಪ್ರಸಿದ್ಧ ದಾರ್ಶನಿಕರಲ್ಲೊಬ್ಬರಾದ ಕೆ. ಕುಮಾರಸ್ವಾಮಿ ಎಂಬುವರು ಕೂಡ ರಾಧಾಕೃಷ್ಣನ್ನರ ಪ್ರತಿಭೆಗೆ ಮಾರು ಹೋಗಿದ್ದಾರೆ. 'ಬಹುಶಃ ನಮ್ಮ ಕಾಲದಲ್ಲಿ ವೇದಾಂತ ವಿಷಯವಾಗಿ ವಿಶ್ವಧರ್ಮವನ್ನು ಬೋಧಿಸಬಲ್ಲವರು ರಾಧಾಕೃಷ್ಣನ್ನರ ಹೊರತು ಬೇರೆ ಯಾರೂ ಜಗತ್ತಿನಲ್ಲಿ ಇರಲಾರರು'' ಎಂದು ಹೇಳುತ್ತಾರೆ.

ಒಟ್ಟಿನಲ್ಲಿ ಹೇಳುವುದಾದರೆ ಇಂತಹ ಅಪಾರ ಜ್ಞಾನವುಳ್ಳ ವ್ಯಕ್ತಿಯು ಇತಿಹಾಸದಲ್ಲಿ ಇದ್ದಿರಲಾರರು, ಮುಂದಿನ ಪೀಳಿಗೆಯಲ್ಲಿ ಇಂತಹ ಮೇಧಾವಿ

ಗಳು ಮತ್ತೊಬ್ಬರು ಹುಟುವರೇ? ಹುಟ್ಟಿದರೂ ನಮ್ಮ ಜೀವಿತಕಾಲದಲ್ಲಿ ಕೇಳಿ ಅರಿಯ ಬಲ್ಲವೇ ? ಎನಿಸುತ್ತದೆ.

ಇಂತಹ ಅಪಾರ ಲೋಕಾನುಭವವುಳ್ಳ, ಪಾಂಡಿತ್ಯವುಳ್ಳ, ಲೋಕ ಶಿಕ್ಷಕರಾದ, ಮಾನವೀಯತೆಯ ಧರ್ಮ ಪ್ರತಿ ಪಾದಕರಾದ, ವಿಶ್ವಕಟುಂಬ ಕಾಂಕ್ಷಿಯಾದ, ರಾಜಕೀಯ ರತ್ನವಾದ, ಭಾರತೀಯ ಮುಕುಟವಾದ ಆಧುನಿಕ ಸರ್ವಜ್ಞರಾದ, ಡಾ|| ಸರ್ವಪಳ್ಳಿ ರಾಧಾಕೃಷ್ಣನ್ನರ ಕಾಲದಲ್ಲಿ ಬಾಳುತ್ತಿರುವ ಭಾರತೀಯರಾದ ನಾವು ಪುಣ್ಯವಂತರೇ ಸರಿ! ಅವರಿಗೀಗ 76 ವರ್ಷಗಳು. ವೃದ್ಧಾಪ್ಯವು ಶರೀರವನ್ನು ಮುಟ್ಟಿದೆ. ಆದರೇನು ಅವರ ಜ್ಞಾನ ವೃಕ್ಷವು ಹೆಮ್ಮರವಾಗಿ ಬೆಳೆದಿದೆ! ಸರ್ವಾರ್ಥಿಗಳಿಗೂ ಫಲ ದಾಯಕವಾಗಿದೆ. ಅವರ ಶ್ರದ್ಧಾಸಕ್ತಿಯು ಯುವಕರಿಗಿಂತ ಮಿಗಿಲಾಗಿದೆ. ಅದು ಭಾರತೀಯರೆಲ್ಲರ ಬಾಳಿನ ಆದರ್ಶ ಕೈಮರವಾಗಿದೆ. ಆ ಭಾಗ್ಯವನ್ನು ಭಗವಂತನು ಮತ್ತೆ ಕೆಲವು ದಶಕಗಳವರೆಗಾದರೂ ನಮಗೆ ನೀಡಲಿ! ಅವರ ದಿವ್ಯ ಜ್ಯೋತಿಯ ಬೆಳಕಿನಲ್ಲಿ ನಾವೆಲ್ಲರೂ ನಡೆಯುವಂತಾಗಲಿ! ಅವರ ಹಿತವಚನಗಳನ್ನು ಮತ್ತೆ ಕೆಲವು ಕಾಲ ಕೇಳುವಂತೆ ದಯಪಾಲಿಸಲಿ! ಅವರೀಯುತ್ತಿರುವ ತತ್ವಗಳನ್ನು ಸದ್ವಿನಿಯೋಗಪಡಿಸಿಕೊಳ್ಳಲು ನಮಗೆಲ್ಲರಿಗೂ, ಭಗವಂತನು ವಿಶಾಲ ಹೃದಯವನ್ನು ಕರುಣಿಸಲಿ ಎಂದೇ ನಮ್ಮೆಲ್ಲರ ಪ್ರಾರ್ಥನೆ.

---

## ನಮ್ಮ ಮುಂದಿನ ಪ್ರಕಟಣೆ

ಇದೇ ಲೇಖಕರ

**— ಹೃದಯ ಚಿಲುಮೆ —**

(ಕವನ ಸಂಗ್ರಹ)

ಹೊಯ್ಸಳ ಸೋಮನಾಥನಾಯಕರು ಕಟ್ಟಿಸಿದ
ಸೋಮನಾಥಪುರದ ಕೇಶವಸ್ವಾಮಿ ಹಾಗೂ ಪಂಚಲಿಂಗೇಶ್ವರ
ದೇವಸ್ಥಾನಗಳ ಇತಿಹಾಸಪೂರಕವಾದ,
ಐತಿಹಾಸಿಕ ಕಾದಂಬರಿ.

**ಕೊಲೆಯ ಫಲ ಭವ್ಯ ಕಲೆ**